# ಪಾತಿವ್ರತ್ಯಪ್ರದೀಪಿಕಾ

[ಸ್ತ್ರೀ ಜಪಕ್ರಮ, ಸ್ತ್ರೀಧರ್ಮ ಇತ್ಯಾದಿಗಳ ವಿವರಣೆ]

ಸಗ್ರಿ ರಾಘವೇಂದ್ರ ಉಪಾಧ್ಯಾಯ

ಪರವಿದ್ಯಾ ಪ್ರಕಾಶನ
ಮೂಡುಸಗ್ರಿ
ಉಡುಪಿ

# ವಿಷಯಾನುಕ್ರಮಣಿಕಾ





ಮೊದಲಮಾತು :

## ಸ್ತ್ರೀ, ಸ್ತ್ರೀಧರ್ಮ ಮತ್ತು 'ಪಾತಿವ್ರತ್ಯಪ್ರದೀಪಿಕಾ'

ಅದುವರೆಗೆ ತಂದೆ ತಾಯಂದಿರನ್ನು ದೇವರಂತೆ ಗೌರವಿಸುತ್ತಿದ್ದು, ಮದುವೆಯಾದಾಕ್ಷಣ ಅವರ ಜೊತೆಗೆ ಜಗಳವಾಡುವಷ್ಟು ಕೆಳಮಟ್ಟಕ್ಕೆ ಇಳಿಯುವ ಅದೆಷ್ಟೋ ವ್ಯಕ್ತಿಗಳ ಪರಿಸ್ಥಿತಿಯನ್ನು ಪರಿಶೀಲಿಸಿದರೆ ಸ್ಪಷ್ಟವಾಗಬಲ್ಲದು ಸ್ತ್ರೀಯ ಪ್ರಭಾವ ಪುರುಷನ ಮೇಲೆ ಎಷ್ಟು ಗಾಢವಾದದ್ದೆಂದು. ಹಾಗೆಯೇ ಒಂದು ಹೆಣ್ಣು ಸೊಸೆಯಾಗಿ ಬಂದ ಮೇಲೆ ಆ ಮನೆಯ ವಾತಾವರಣವನ್ನು ಹಿಂದಿನ ವಾತಾವರಣಕ್ಕೆ ಹೋಲಿಸಿ ವಿವೇಚಿಸಿಕೊಂಡಲ್ಲಿ ಮನೆಯ ವಾತಾವರಣದ ಮೇಲೆ ಸ್ತ್ರೀಯ ಪಾತ್ರ ಎಷ್ಟು ಪ್ರಭಾವಕಾರಿಯಾದುದೆಂಬುದೂ ಸ್ಪಷ್ಟವಾದೀತು.

ಇಷ್ಟೊಂದು ಪ್ರಭಾವಕಾರಿಯಾಗಿರುವುದರಿಂದಲೇ ಶಾಸ್ತ್ರಕಾರರು ಸ್ತ್ರೀಯರಿಗೆ ಗೌರವದ, ಹೊಣೆಗಾರಿಕೆಯ ಸ್ಥಾನಮಾನಗಳನ್ನು ನೀಡಿದ್ದಿದೆ.

ಸ್ತ್ರೀ ತಾಯಿಯಾಗಿ ವ್ಯಕ್ತಿಗೆ ಜನ್ಮಕೊಡುವುದರ ಜೊತೆಗೆ ಮುಂದೆ ಅರಳಬೇಕಾದ ಅವನ ವ್ಯಕ್ತಿತ್ವಕ್ಕೆ ಭದ್ರಬುನಾದಿಯನ್ನು ಸ್ಥಾಪಿಸುವ ಮಹತ್ತ್ವದ ಕರ್ತವ್ಯವನ್ನು ನಿರ್ವಹಿಸಬೇಕಾದ ಗುರುತ್ವವನ್ನು ಆಕೆಯಲ್ಲಿ ಗುರುತಿಸಲಾಗಿದೆ. ಸ್ತ್ರೀ ಪತ್ನಿಯಾಗಿ ಪತಿಯ ಕಾಮತೃಷೆಗೆ ಕಡಿವಾಣ ಹಾಕುವುದರ ಜೊತೆಗೆ ಧರ್ಮ, ಅರ್ಥ, ಮೋಕ್ಷ ಪುರುಷಾರ್ಥಗಳನ್ನು ಸಾಧಿಸುವುದರಲ್ಲಿ ಅವನಿಗೆ ಹೆಗಲಿಗೆ ಹೆಗಲು ಕೊಟ್ಟು ಸಾಗಬೇಕಾದ ಆಕೆಯ ಅವಿಭಾಜ್ಯ ಜೀವನಸಂಗಾತಿತನವನ್ನು ಎತ್ತಿ ತೋರಿಸಲಾಗಿದೆ. ಸ್ತ್ರೀ ಗೃಹಿಣಿಯಾಗಿ ಗೃಹದ ಆಗುಹೋಗುಗಳನ್ನೆಲ್ಲ ನಿಯಂತ್ರಿಸುತ್ತ ಗೃಹಸ್ಥನ ಗಾರ್ಹಸ್ಥ್ಯಧರ್ಮದ ಅನುಷ್ಠಾನದಲ್ಲಿ ಚುಕ್ಕಾಣಿ ಹಿಡಿಯಬೇಕಾದ ಗುರುತರ ಹೊಣೆಗಾರಿಕೆಯನ್ನು ಆಕೆಯ ಪಾಲಿಗೆ ನೀಡಲಾಗಿದೆ.

ಹೀಗೆ ಸ್ತ್ರೀ ತಾಯಿಯಾಗಿ, ಪತ್ನಿಯಾಗಿ, ಗೃಹಿಣಿಯಾಗಿ ನಡೆಸಬೇಕಾದ ಕರ್ತವ್ಯಗಳು ಸಾಮಾಜಿಕ ದೃಷ್ಟಿಯಿಂದ ಎಷ್ಟು ಪ್ರಮುಖವಾದವುಗಳೋ ಆಧ್ಯಾತ್ಮಿಕ ದೃಷ್ಟಿಯಿಂದಲೂ ಅಷ್ಟೇ ಪವಿತ್ರವಾದವುಗಳು. ಆಧ್ಯಾತ್ಮಿಕ ದೃಷ್ಟಿಯನ್ನು ಅಳವಡಿಸಿಕೊಂಡು ನಡೆಸಿದಾಗ ಅವು ಪವಿತ್ರಧರ್ಮಗಳೆನಿಸಬಲ್ಲವು. ಪವಿತ್ರ

ಧರ್ಮಗಳಾಗಿ ಆಚರಿಸಲ್ಪಟ್ಟಾಗ ಅವು ಲೌಕಿಕ ಪ್ರಯೋಜನದ ಜೊತೆಗೆ ಅಲೌಕಿಕ ಪ್ರಯೋಜನಕ್ಕೂ ಪ್ರಯೋಜಕವಾಗಬಲ್ಲವು. ಕಸುಬಾಗಿ ನಡೆಸಲ್ಪಡುವ ಅವು ಸಾಧನೆಯಾಗಿ ಪರಿಗಣಿತವಾಗಬಲ್ಲವು.

ಪ್ರವೃತ್ತಿಯಲ್ಲಿ ಇಷ್ಟೊಂದು ದೊಡ್ಡ ಪರಿವರ್ತನೆಯಾಗಬೇಕೆಂದಿದ್ದರೆ ಆಧ್ಯಾತ್ಮಿಕ ದೃಷ್ಟಿಕೋನವನ್ನು ಅಳವಡಿಸಿಕೊಳ್ಳುವುದು ಅತ್ಯವಶ್ಯ. ಅದಕ್ಕಾಗಿ ಕೆಲವು ಆಚಾರವಿಚಾರಗಳ ಅಳವಡಿಕೆಯೂ ಅನಿವಾರ್ಯ.

ಈ ನಿಟ್ಟಿನಲ್ಲಿ ಬೆಳಕು ಚೆಲ್ಲುವುದಕ್ಕಾಗಿಯೇ ಬೆಳಗಿ ಬಂದಿರುವಂತಹದ್ದು 'ಪಾತಿವ್ರತ್ಯಪ್ರದೀಪಿಕಾ'.

ಸ್ತ್ರೀಧರ್ಮಗಳಲ್ಲೆಲ್ಲ ಅತ್ಯಂತ ಪ್ರಮುಖವಾದದು ಪಾತಿವ್ರತ್ಯ ಧರ್ಮ. ಅಂದರೆ ಪತಿಯ ಸೇವೆಯಾಗಿ ನಡೆಸಬೇಕಾದ ಧರ್ಮ. ಇದು ಸ್ತ್ರೀ ನಡೆಸಬೇಕಾದ ಧರ್ಮಗಳಿಗೆಲ್ಲ ಕೇಂದ್ರ ಬಿಂದು. ಇಂತಹ ಪಾತಿವ್ರತ್ಯ ಧರ್ಮವನ್ನೇ ಪ್ರಮುಖವನ್ನಾಗಿಟ್ಟುಕೊಂಡು, ಅವಕ್ಕೆ ಸಂಬಂಧ ಪಡುವಂತೆ ಸ್ತ್ರೀಯರ ಎಲ್ಲ ಧರ್ಮಗಳನ್ನೂ ಇಲ್ಲಿ ಸಂಗ್ರಹಿಸಿ, ಪ್ರಸ್ತುತ ಪಡಿಸಲಾಗಿದೆ. ಸ್ತ್ರೀ ಪತಿಯ ವಿಷಯದಲ್ಲಿ, ಮನೆಯ ವಿಷಯದಲ್ಲಿ ಯಾವ ಯಾವ ಧರ್ಮಗಳನ್ನು ನಡೆಸಬೇಕು, ರಜಸ್ವಲೆಯಾದಾಗ, ವಿಧವೆಯಾದಾಗ ಯಾವ ಯಾವ ಧರ್ಮಗಳನ್ನು ಆಚರಿಸಬೇಕು— ಎಂಬುದನ್ನು ತಿಳಿಸಲಾಗಿದೆ. ತನ್ನ ಧರ್ಮಗಳನ್ನು ನಡೆಸುವಾಗ ಅಳವಡಿಸಿಕೊಳ್ಳಬೇಕಾದ ಅನುಸಂಧಾನವನ್ನೂ ತಿಳಿಸಲಾಗಿದೆ.

ಮುಖ್ಯವಾಗಿ, ಸ್ತ್ರೀ ಪತ್ನಿಯಾಗಿ, ಗೃಹಿಣಿಯಾಗಿ, ತಾಯಿಯಾಗಿ ತನ್ನ ಕರ್ತವ್ಯಗಳನ್ನು ನಿರ್ವಹಿಸುವುದರ ಜೊತೆಗೆ ಆಧ್ಯಾತ್ಮಿಕ ಸಾಧಕಳಾಗಿ ಕೃಷ್ಣ ಮಂತ್ರದ ಜಪವನ್ನು ನಡೆಸಬೇಕು. ಇದಕ್ಕೆ ಬೇಕಾದ ಸಮಗ್ರ ಮಾಹಿತಿಯನ್ನು ಒದಗಿಸಲಾಗಿದೆ.

ಪಾತಿವ್ರತ್ಯ ಧರ್ಮವನ್ನು ಅನುಷ್ಠಾನ ಮಾಡುತ್ತಿರುವ ಪತಿವ್ರತೆಯರಿಗೆ ಮುಖ್ಯವಾಗಿ ಮಾರ್ಗದರ್ಶಕವಾಗಿರುವ ಈ ಕೃತಿ ಮುಂದೆ ಪಾತಿವ್ರತ್ಯವನ್ನು ಜೀವನದಲ್ಲಿ ಹೇಗೆ ಅಳವಡಿಸಿಕೊಳ್ಳಬೇಕೆಂದು ಜಿಜ್ಞಾಸುಗಳಾದ ಸ್ತ್ರೀಯರಿಗೂ, ಪತಿಯನ್ನು ಕಳಕೊಂಡಿದ್ದರೂ ಪಾತಿವ್ರತ್ಯವನ್ನು ಹೇಗೆ ಪಾಲಿಸುತ್ತಿರಲು ಸಾಧ್ಯ ಎಂದು ತಿಳಿದುಕೊಳ್ಳಬೇಕಾದ ಸ್ತ್ರೀಯರಿಗೂ ಉಪಯುಕ್ತವಾಗಬಲ್ಲದಲ್ಲದೆ, ಸ್ತ್ರೀಯರಿಂದ ಯಾವ ಪ್ರಮಾಣದ ಧರ್ಮವನ್ನು ನಿರೀಕ್ಷಿಸಬೇಕೆಂಬ ನಿಟ್ಟಿನಲ್ಲಿ ಪತಿ ಮುಂತಾದವರಿಗೂ ಇದು ಸಹಕಾರಿಯಾಗಬಲ್ಲದು.

ಶಾಸ್ತ್ರದ ದೃಷ್ಟಿಯಲ್ಲಿ ಸ್ತ್ರೀಯರಿಗೆ ಯಾವ ಯಾವ ಧರ್ಮವನ್ನು ಪಾಲಿಸ ಬೇಕಾಗಿದೆ ಎಂಬುದನ್ನು ಇಲ್ಲಿ ತೋರಿಸಲಾಗಿದ್ದು, ಅವೆಲ್ಲವನ್ನೂ ಈ ಕಾಲದಲ್ಲಿ ನಡೆಸಲಾಗದಿದ್ದರೂ. ಅವುಗಳ ಸ್ವರೂಪ, ಉದ್ದೇಶ, ಹಿನ್ನೆಲೆ—ಇತ್ಯಾದಿಗಳ ಮಾಹಿತಿಯನ್ನು ಹೊಂದಿರಲೇ ಬೇಕು. ಆದಷ್ಟು ಅಧಿಕ ಪ್ರಮಾಣದಲ್ಲಿ ಅನು ಷ್ಠಾನ ಮಾಡಲು ಪ್ರಾಮಾಣಿಕವಾಗಿ ಯತ್ನಿಸುತ್ತಿರಬೇಕು. ಹೀಗಿದ್ದೂ ಆಚರಿಸ ಲಾಗದಿದ್ದಾಗ, ಆ ಬಗ್ಗೆ ಪಶ್ಚಾತ್ತಾಪ ಪಡುವ ಸ್ಥಿತಿಯಲ್ಲಿರಬೇಕು. ಹೀಗಾದಲ್ಲಿ ಧರ್ಮವನ್ನು ಆಚರಿಸದ ಪ್ರಯುಕ್ತ ಪಾಪದ ಲೇಪ ಕಡಿಮೆಯಾಗುವುದು.

ಮನೆಯಲ್ಲಿ ತಾಯಿಯಾಗಿ, ಗೃಹಿಣಿಯಾಗಿ, ಪತ್ನಿಯಾಗಿ ಕೇಂದ್ರಬಿಂದುವಿ ನಂತಿರುವ 'ಸ್ತ್ರೀ' ಧಾರ್ಮಿಕ ಭಾವನೆಗೊಳಗಾದಳೆಂದರೆ ಆಕೆಯ ಪ್ರಭಾವ ಮನೆಯ ಉಳಿದ ಪತಿ, ಮಕ್ಕಳು ಮುಂತಾದವರೆಲ್ಲರ ಮೇಲೆ ಬಿದ್ದು, ಸಮಗ್ರ ಮನೆಯೇ ಧಾರ್ಮಿಕ ವಾತಾವರಣಕ್ಕೊಳಗಾಗಬಲ್ಲದು. 'ಪಾತಿವ್ರತ್ಯಪ್ರದೀಪಿಕಾ' ಈ ಬಗೆಯ ಕ್ರಾಂತಿಗೆ ಪ್ರೇರಕವಾದೀತೆಂಬ ನಂಬಿಕೆ.

**ಕೃತಜ್ಞತೆ:**

- ನನ್ನ ವಿದ್ಯಾ ಗುರುಗಳಾದ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರು ತಮ್ಮ ಬಿಡುವಿಲ್ಲದ ಕಾರ್ಯಕ್ರಮಗಳ ನಡುವೆಯೂ ಸೂತ್ರ ಪ್ರಾಯವಾದ ಮಾತುಗಳಿಂದ ಸ್ತ್ರೀಧರ್ಮದ ರಹಸ್ಯವನ್ನು ತಿಳಿಸುವ ಮೂಲಕ 'ಪಾತಿವ್ರತ್ಯಪ್ರದೀಪಿಕಾ'ಕ್ಕೆ ತಿಲಕವನ್ನಿಟ್ಟು ಅನುಗ್ರಹಿಸಿದ್ದಾರೆ. ಶ್ರೀಪಾದರಿಗೆ ಪ್ರಣಾಮಪೂರ್ವಕ ಕೃತಜ್ಞತೆ.

- ಈ ಕೃತಿಯ ಅನೇಕ ಭಾಗಗಳ ಮೂಲ ಪ್ರತಿಯನ್ನು ಪರಿಶೀಲಿಸಿ ಯೋಗ್ಯ ಸಲಹೆ ಸೂಚನೆಗಳನ್ನಿತ್ತ ಶ್ರೀ ರಾಮನಾಥಾಚಾರ್ಯರಿಗೆ....

- ಈ ಕೃತಿಯಲ್ಲಿ ಸ್ತ್ರೀಯರ ಆಶೌಚ ನಿರ್ಣಯದ ವಿಷಯದಲ್ಲಿ ಸೂಕ್ತ ಮಾರ್ಗ ದರ್ಶನ ನೀಡಿದ ಶ್ರೀ ವೇದವ್ಯಾಸ ತಂತ್ರಿಗಳಿಗೆ....

- ಈ ಕೃತಿಯ ಮುದ್ರಣದ ವೆಚ್ಚಕ್ಕಾಗಿ ಕೀರ್ತಿಶೇಷ ಮಾರ್ಪಳ್ಳಿ ಶ್ರೀನಿವಾಸ ಬಲ್ಲಾಳರ ಧರ್ಮಪತ್ನಿ ದಿ. ಇಂದಿರಮ್ಮ ಬಲ್ಲಾಳರ ಸ್ಮಾರಕವಾಗಿ ಅವರ ಸುಪುತ್ರರಾದ ಕೆ.ಎಸ್. ಅಚ್ಯುತ ಬಲ್ಲಾಳರು ಹಾಗೂ ಕೆ.ಎಸ್. ರಾಮಕೃಷ್ಣ ಬಲ್ಲಾಳರು ಸಾವಿರದ ಎಂಟು ರೂಪಾಯಿಗಳನ್ನು ನೀಡಿ ಸಹಕರಿಸಿರುವರು.

ಇದರಿಂದಾಗಿ ದಿ. ಇಂದಿರಮ್ಮ ಬಲ್ಲಾಳರ ಆತ್ಮಕ್ಕೆ ಶಾಂತಿ ದೊರಕುವಂತಾಗಲಿ.

- ಈ ಕೃತಿಯನ್ನು ಅಂದವಾಗಿ ಮುದ್ರಿಸಿಕೊಟ್ಟ ಸುಗುಣಾ ಪ್ರಿಂಟರ್ಸ್ ಬಳಗದವರಿಗೆ....
- 'ಪರವಿದ್ಯಾ ಪ್ರಕಾಶನ'ದ ಪ್ರಕಟಣೆಗಳನ್ನು ಸ್ವಾಗತಿಸಿ ಪ್ರೋತ್ಸಾಹಿಸುತ್ತಿರುವ ಜಿಜ್ಞಾಸುಗಳಿಗೆ **ಕೃತಜ್ಞತೆಗಳು.**

**—ಸಗ್ರಿ ರಾಘವೇಂದ್ರ ಉಪಾಧ್ಯಾಯ**
ಪರವಿದ್ಯಾ ಪ್ರಕಾಶನ
ಉಡುಪಿ

25—3—1995
ಭಾವ ಸಂ। ಫಾಲ್ಗುನ ಬಹುಲ ನವಮಿ



# ಸ್ತ್ರೀಧರ್ಮ

ಧರ್ಮಾಧ್ಯಕ್ಷನಾದ ಶ್ರೀಕೃಷ್ಣನು ಧರ್ಮದ ಸಾರವನ್ನು ಹೀಗೆ ತಿಳಿಸಿದ್ದಾನೆ– 'ಧರ್ಮೋ ಮದ್‌ಭಕ್ತಿಕೃತ್ ಪ್ರೋಕ್ತಃ....' ಯಾವುದು ಭಗವದ್ಭಕ್ತಿಗೆ ಪ್ರತ್ಯಕ್ಷವಾಗಿಯಾಗಲೀ, ಪರೋಕ್ಷವಾಗಿಯಾಗಲೀ ಪುಷ್ಟಿ ನೀಡಬಲ್ಲದೋ ಅದೇ ಧರ್ಮ ಎನಿಸುವುದು ಎಂದು. ಯಮಧರ್ಮನೂ ಅಜಾಮಿಳನ ಪ್ರಸಂಗದಲ್ಲಿ ತನ್ನ ಭಟರೆದುರು ಭಗವಂತನ ನಾಮಸ್ಮರಣಾದಿಗಳಿಂದ ಅವನಲ್ಲಿ 'ಭಕ್ತಿಯೋಗ'ವನ್ನು ಅಳವಡಿಸಿಕೊಳ್ಳುವುದು ಪುರುಷರ ಶ್ರೇಷ್ಠ ಧರ್ಮ ಎಂದು ಸಾರಿರುವನು—

> ಏತಾವಾನೇವ ಲೋಕೇಽಸ್ಮಿನ್ ಪುಂಸಾಂ ಧರ್ಮಃ ಪರಃ ಸ್ಮೃತಃ ।
> ಭಕ್ತಿಯೋಗೋ ಭಗವತಿ ತನ್ನಾಮಗ್ರಹಣಾದಿಭಿಃ —ಭಾಗ. 6-3-22

ಹೀಗೆ ಭಗವದ್ಭಕ್ತಿಯೇ ಕೇಂದ್ರಬಿಂದುವಾಗಿರುವ ಧರ್ಮವು ಸಾಧಾರಣ ಧರ್ಮ ಹಾಗೂ ಅಸಾಧಾರಣ ಧರ್ಮ ಎಂಬುದಾಗಿ ಸ್ಥೂಲವಾಗಿ ಎರಡು ಪ್ರಭೇದಗಳನ್ನೊಳಗೊಂಡಿದೆ. ಯಾವುದೇ ವರ್ಣದ ವ್ಯತ್ಯಾಸವಿಲ್ಲದೆ, ಆಶ್ರಮದ ಭೇದವಿಲ್ಲದೆ, ಲಿಂಗಭೇದವಿಲ್ಲದೆ – ಎಲ್ಲ ದೇಶ ಕಾಲಗಳಿಗೆ ಸಂಬಂಧಿಸಿದ ಪ್ರತಿಯೊಂದು ವ್ಯಕ್ತಿಗೂ ಸಂಬಂಧಪಡುವ ಧರ್ಮಗಳು ಸಾಧಾರಣ ಧರ್ಮಗಳೆನಿಸಿದರೆ, ಆಯಾ ವ್ಯಕ್ತಿಗಳಿಗೆ ವಿಶೇಷವಾಗಿ ವಿಹಿತಗಳಾಗಿರುವ ಧರ್ಮಗಳು ಅಸಾಧಾರಣ ಧರ್ಮಗಳೆನಿಸಿವೆ. ಶ್ರೀ ಮಧ್ವಾಚಾರ್ಯರು ಎಲ್ಲರಿಗೂ ಸಂಬಂಧಿಸುವಂತೆ ಭಾಗವತ ಧರ್ಮಗಳನ್ನು ನಿರೂಪಿಸುತ್ತಿರುವ ಮಾತಿನಿಂದ ಸ್ತ್ರೀಯರ ಸಾಧಾರಣ ಧರ್ಮಗಳನ್ನು ತಿಳಿದುಕೊಳ್ಳಬಹುದಾಗಿದೆ.

## ಸ್ತ್ರೀಯರ ಸಾಧಾರಣ ಧರ್ಮಗಳು :

"ತ್ರಿಕರಣಗಳಿಂದಲೂ ಶ್ರೀವಿಷ್ಣುವನ್ನು ನಿಷ್ಕಪಟವಾಗಿ ಆರಾಧಿಸುವುದು, 'ಶ್ರೀವಿಷ್ಣುವೊಬ್ಬನೇ ಸಕಲಗುಣ ಪರಿಪೂರ್ಣನಾಗಿದ್ದು, ಸ್ವತಂತ್ರನಾಗಿರುವವನು; ಉಳಿದೆಲ್ಲವೂ ಯಾವಾಗಲೂ ಅವನ ಅಧೀನವಾಗಿಯೇ ಇರುವಂತಹದ್ದು' – ಎಂಬ ದೃಢನಿರ್ಧಾರಕ್ಕೊಳಗಾಗುವುದು, ದೇವತೆಗಳ ತಾರತಮ್ಯವನ್ನು ತಿಳಿದಿರುವುದು ಸ್ವತಂತ್ರರೆಂಬ ದೃಷ್ಟಿಯಿಂದ ಇತರ ಯಾವುದೇ ದೇವತೆಯನ್ನು ಪೂಜಿಸದಿರುವುದು; ದೇವ, ಗುರು ಮುಂತಾದವರನ್ನು ಭಗವದ್ಭಕ್ತರೆಂದು ಗೌರವಿಸುವುದು, ವ್ಯರ್ಥ

ವಾಗಿ ಯಾವುದೇ ಕರ್ಮವನ್ನು ನಡೆಸದಿರುವುದು, ಭಗವದನುಗ್ರಹಾದಿಗಳನ್ನು ಬಿಟ್ಟು ಉಳಿದ ಯಾವುದೇ ವಿಷಯದಲ್ಲಿ ಯಾವಾಗಲೂ ಆಸೆ ಪಡದಿರುವುದು, ಯಾವಾಗಲೂ ಶ್ರೀವಿಷ್ಣುವಿನ ಅಥವಾ ಅವನ ಭಕ್ತರ ವಿರುದ್ಧವಾಗಿ ನಡೆದುಕೊಳ್ಳದಿರುವುದು, ವಿಷ್ಣುಭಕ್ತರಲ್ಲಿಯೇ ಪರಸ್ಪರವಿರೋಧ ಬಂದಾಗ ಆ ಭಕ್ತರಲ್ಲಿ ವಿಶಿಷ್ಟನಾದ ಭಕ್ತನ ಪರವಾಗಿ ನಡೆದುಕೊಳ್ಳುವುದು, ಶ್ರೀ ವಿಷ್ಣುವಿಗೂ ಅವನ ಭಕ್ತರಿಗೂ ಪ್ರಿಯವಾಗುವಂತಹದ್ದೆಲ್ಲವನ್ನೂ ನಡೆಸುವುದು, ಪರಸ್ಪರವಾಗಿ ಸಮಾನರಾದ ವಿಷ್ಣುಭಕ್ತರಲ್ಲಿ ಅನ್ಯೋನ್ಯವಾಗಿ ವಿರೋಧ ಬಂತೆಂದರೆ ಹೆಚ್ಚು ವಿಷ್ಣುಭಕ್ತರ ಪರವಾಗಿ ನಡೆದುಕೊಳ್ಳುವುದು."[1] — ಪ್ರತಿಯೊಂದು ವರ್ಣಾಶ್ರಮಕ್ಕೆ ಸೇರಿದ ಭಗವದ್ಭಕ್ತರೂ ಪಾಲಿಸಬೇಕಾದ ಸಾಧಾರಣ ಭಾಗವತ ಧರ್ಮಗಳಿವು ಎಂದು ಶ್ರೀಮದಾಚಾರ್ಯರು ಕ್ರೋಡೀಕರಿಸಿ, ಮುಂದಿಟ್ಟಿರುವ ಈ ಹನ್ನೊಂದು ಧರ್ಮಗಳು ಸ್ತ್ರೀಯರಿಗೂ ಸಾಧಾರಣವಾದವು. ಇವುಗಳಲ್ಲಿ ಪ್ರತಿಯೊಂದು ಧರ್ಮವನ್ನೂ ಅವರೂ ತಮ್ಮ ತಮ್ಮ ಮಟ್ಟಕ್ಕೆ ಅನುಗುಣವಾಗಿ ಪಾಲಿಸಬೇಕು.

## ಅಸಾಧಾರಣ ಧರ್ಮಗಳಲ್ಲಿ ಪಾತಿವ್ರತ್ಯ :

ಹೀಗೆ ಸಾಧಾರಣ ಧರ್ಮಾನುಷ್ಠಾನದ ಜೊತೆಗೆ ಧರ್ಮಶಾಸ್ತ್ರದಲ್ಲಿ ಸ್ತ್ರೀಯರಿಗಾಗಿಯೇ ವಿಶೇಷವಾಗಿ ವಿಹಿತಗಳಾದ ಅಸಾಧಾರಣ ಧರ್ಮಗಳನ್ನೂ ಪಾಲಿಸಬೇಕು. ಸ್ತ್ರೀಯರ ಅಸಾಧಾರಣ ಧರ್ಮಗಳೆಂದಾಕ್ಷಣ ಮೊತ್ತ ಮೊದಲಿಗೆ ಗಮನಕ್ಕೆ ಬರುವಂತಹದ್ದು—'ಪಾತಿವ್ರತ್ಯ'.

---

1 "ಮನೋವಾಕ್ಕರ್ಮಭಿರ್ವಿಷ್ಣೋರಚ್ಛಿದ್ರತ್ವೇನ ಚಾರ್ಚನಮ್ । ಪೂರ್ಣಾಶೇಷಗುಣೋ ವಿಷ್ಣುಃ ಸ್ವತಂತ್ರಶ್ಚೈಕ ಏವ ತು । ತದ್ವಶಂ ಸರ್ವಮನ್ಯಚ್ಚ ಸರ್ವದೇತಿ ವಿನಿಶ್ಚಯಃ । ದೇವತಾಕ್ರಮವಿಜ್ಞಾನಮಪೂಜಾಽನ್ಯಸ್ಯ ವೈ ಹರೇಃ । ಪೂಜಾ ಭಾಗವತತ್ವೇನ ದೇವಾದೀನಾಂ ಚ ಸರ್ವಶಃ । ವೃಥಾ ಕರ್ಮಾಕೃತಿಃ ಕ್ವಾಪಿ ನಿರಾಶೀಸ್ತ್ವಂ ಸದೈವ ಚ । ವಿಷ್ಣೋರ್ಭಾಗವತಾನಾಂ ಚ ಪ್ರತೀಪಸ್ಯಾಕೃತಿಸ್ಸದಾ ಪರಸ್ಪರವಿರೋಧೇ ತು ವಿಶಿಷ್ಟಸ್ಯಾನುಕೂಲತಾ । ಪ್ರಿಯಂ ವಿಷ್ಣೋಸ್ತದೀಯಾನಾಮಪಿ ಸರ್ವಂ ಸಮಾಚರೇತ್ । ಸಾಮ್ಯೇ ವಿರೋಧೇ ಚ ಬಹೂನನುವರ್ತೇತ ವೈಷ್ಣವಾನ್ । ಏತೇ ಸಾಧಾರಣಾ ಧರ್ಮಾ ಜ್ಞೇಯಾ ಭಾಗವತಾ ಇತಿ"

—ಮ. ಭಾರ. ತಾ. ನಿ. 29—18....23

ತನ್ನ ಪತಿಯ ಸೇವೆಯನ್ನೇ ವ್ರತವನ್ನಾಗಿ ಅಂದರೆ ನಿಯಮವನ್ನಾಗಿ ಪಾಲಿಸುವಿಕೆ ಪಾತಿವ್ರತ್ಯ ಎನಿಸಿದೆ.[1] ಸ್ತ್ರೀಯರಿಗೆ ಪಾತಿವ್ರತ್ಯಕ್ಕಿಂತ ಬೇರೆ ಧರ್ಮವೇ ಇಲ್ಲ ಎಂದೆನಿಸುವಷ್ಟೂ,[2] ಪತ್ನಿಯ ಪಾಲಿಗೆ ದೇವತೆ, ಗುರು, ಧರ್ಮ, ತೀರ್ಥಗಳು ಇವೆಲ್ಲ ಪತಿಯೇ ಆಗಿರುವುದರಿಂದ ಆಕೆ ಉಳಿದೆಲ್ಲವನ್ನೂ ಬಿಟ್ಟು ಪತಿಯನ್ನೇ ಸೇವಿಸ ಬೇಕು—ಎಂದು ವಿಧಿಸಲ್ಪಡುವಷ್ಟು[3] ಪ್ರಾಶಸ್ತ್ಯವನ್ನು ಪಡೆದಿರುವ 'ಪಾತಿವ್ರತ್ಯ'ದ ಚೌಕಟ್ಟಿನಲ್ಲಿ ಸ್ತ್ರೀಯ ಪ್ರತಿಯೊಂದು ಚಟುವಟಿಕೆಯೂ ಸೇರಿಕೊಳ್ಳಬೇಕಾ[4]ದಷ್ಟು ವ್ಯಾಪಕತೆಯೂ ಪಾತಿವ್ರತ್ಯಕ್ಕಿದೆ.

### ತ್ರಿಕರಣಪೂರ್ವಕವಾದ ಪಾತಿವ್ರತ್ಯ :

ಪಾತಿವ್ರತ್ಯ ಮನಸ್ಸು, ಮಾತು ಹಾಗೂ ದೇಹ ಈ ತ್ರಿಕರಣಪೂರ್ವಕವಾಗಿದ್ದಿರಬೇಕು. ಸ್ತ್ರೀಯು ಪವಿತ್ರಳಾಗಿದ್ದು ಮನಸ್ಸು, ಮಾತು, ಕರ್ಮಗಳಿಂದ ಪತಿಯ ಆಜ್ಞೆಗನುಗುಣವಾಗಿಯೇ ನಡೆಯುತ್ತಿರಬೇಕು[5] ಹೀಗೆ ತ್ರಿಕರಣ ಪೂರ್ವಕವಾಗಿ ಆಚರಿಸಬೇಕಾದ 'ಪಾತಿವ್ರತ್ಯ'ಕ್ಕೆ ಸಂಬಂಧಿಸುವ ನಿಯಮಗಳನ್ನು ಮಾನಸಿಕ, ವಾಚಿಕ ಹಾಗೂ ದೈಹಿಕಗಳೆಂದು ವಿಂಗಡಿಸಿ ಪರಿಶೀಲಿಸಬಹುದಾಗಿದೆ.

---

1 ಪತಿಃ ಲಕ್ಷಣಯಾ ಪತಿಸೇವಾ ವ್ರತಂ ನಿಯಮಃ ಯಸ್ಯಾಃ ಸಾ ಪತಿವ್ರತಾ, ತಸ್ಯಾಃ ಭಾವಃ ಪಾತಿವ್ರತ್ಯಮ್ ।

2 ಪಾತಿವ್ರತ್ಯಾತ್ ಪರೋ ಧರ್ಮೋ ನಾರೀಣಾಂ ನೇಹ ವಿದ್ಯತೇ । ಸ್ಕಾಂದ-ಕಾಶೀಖಂಡ

○ ಪತಿಶುಶ್ರೂಷಣಾನ್ನಾರ್ಯಾಸ್ತಪೋ ನಾನ್ಯದ್ ವಿಧೀಯತೇ
—ವಾ. ರಾಮಾ. ಅಯೋಧ್ಯಾ 118-9

○ ಭರ್ತುಃ ಶುಶ್ರೂಷಣಂ ಸ್ತ್ರೀಣಾಂ ಪರೋ ಧರ್ಮೋ ಹ್ಯಮಾಯಯಾ
–ಭಾಗ. 10-29-24

3 ಭರ್ತಾ ದೇವೋ ಗುರುರ್ಭರ್ತಾ ಧರ್ಮತೀರ್ಥಾನಿ ತಾನಿ ಚ ।
ತಸ್ಮಾತ್ ಸರ್ವಂ ಪರಿತ್ಯಜ್ಯ ಪತಿಮೇಕಂ ಸಮರ್ಚಯೇತ್ । –ಸ್ಕಾಂದ - ಕಾಶೀಖಂಡ

○ ತುಷ್ಟೇ ಭರ್ತರಿ ನಾರೀಣಾಂ ತುಷ್ಟಾಃ ಸ್ಯುಃ ಸರ್ವದೇವತಾಃ । -ಮ.ಭಾರ.ಶಾಂತಿ.145-3

4 ಪತ್ಯಾಶ್ರಯೋ ಹಿ ಮೇ ಧರ್ಮೋ ಮತಃ ಸ್ತ್ರೀಣಾಂ ಸನಾತನಃ । -ಮ.ಭಾ.ವನ 233-37

5 ಮನೋವಾಕ್ಕರ್ಮಭಿಃ ಶುದ್ಧಾ ಪತಿದೇಶಾನುವರ್ತಿನೀ । —ವೇದವ್ಯಾಸಸ್ಮೃತಿ 2-23

○ ಯೋಷಿಚ್ಛುಶ್ರೂಷಣಾದ್ಭರ್ತುಃ ಕರ್ಮಣಾ ಮನಸಾ ಗಿರಾ ।
ತದ್ಧಿತಾ ಶುಭಮಾಪ್ನೋತಿ ತತ್ಸಾಲೋಕ್ಯಂ ಯತೋ ದ್ವಿಜಾಃ ।
—ವಿಷ್ಣುಪುರಾಣ 6-2-28

ಮಾನಸಿಕ ನಿಯಮಗಳು :

ಸ್ತ್ರೀಯರಿಗೆ ಪತಿಯೇ ಪರಮದೇವತೆ[1] —ಎಂಬ ಅಭಿಪ್ರಾಯದ ಅನೇಕ ಮಾತುಗಳು ಪಾತಿವ್ರತ್ಯದ ಪ್ರಸ್ತಾವದಲ್ಲಿ ಉಲ್ಲೇಖಿಸಲ್ಪಡುವುದುಂಟು. ಇದಕ್ಕೆ, ದೇವರು ಸ್ತ್ರೀಯರ ಪಾಲಿಗೆ ಅವರ ಪತಿಯಲ್ಲಿ ವಿಶೇಷವಾಗಿ ಸನ್ನಿಹಿತನಾಗಿದ್ದು, ದೇವರ ಸೇವೆ ನಡೆಸಲು ಪತಿ ಪ್ರತಿಮೆಯಂತೆ ಇರುವನು. ಆದ್ದರಿಂದ ಸ್ತ್ರೀಯರು ಪತಿಯ ಮಾಧ್ಯಮದಲ್ಲಿಯೇ ದೇವರನ್ನು ಭಜಿಸಿ, ಒಲಿಸಿಕೊಳ್ಳಬೇಕು—ಎಂಬ ಅಭಿಪ್ರಾಯವೇ[2] ಹೊರತು ಪತಿಗಿಂತ ಬೇರೆ ದೇವರೇ ಇಲ್ಲ—ಎಂದು ಪತಿಗೆ ದೇವರ ತಾದಾತ್ಮ್ಯವನ್ನು ಆರೋಪಿಸುವ ಅಥವಾ ಪತಿಗಿಂತ ಬೇರೆ ದೇವರ ಅಸ್ತಿತ್ವವನ್ನೇ ಅಲ್ಲಗಳೆಯುವ ಅಭಿಪ್ರಾಯವಲ್ಲ.

ಹೀಗೆ ಪತಿಯನ್ನು ದೇವರ ಪ್ರತೀಕದಂತೆ ಕಾಣಬೇಕಾದ ಸ್ತ್ರೀ ತನ್ನ ಪತಿಗಿಂತ ಬೇರೆ ಪುರುಷ ದೇವತೆಯೇ ಆಗಿರಲಿ, ಗಂಧರ್ವನೇ ಆಗಿರಲಿ, ಯುವಕನೇ ಆಗಿರಲಿ, ಚೆನ್ನಾಗಿ ಅಲಂಕೃತನಾದವನೇ ಆಗಿರಲಿ, ತುಂಬ ಧನಿಕನೇ ಆಗಿರಲಿ, ತುಂಬ ಸುಂದರನೇ ಆಗಿರಲಿ — ಅವನ ಬಗ್ಗೆ ಮನಸ್ಸನ್ನು ಸ್ವಲ್ಪವೂ ಹರಿಸಬಾರದು.[3] ಪತಿಯಾದವನು ನಪುಂಸಕನೇ ಆಗಿದ್ದಿರಲಿ, ದುರವಸ್ಥೆಗೊಳಗಾದ

---

1 ಸ್ತ್ರೀಣಾಮಾರ್ಯಸ್ವಭಾವಾನಾಂ ಪರಮಂ ದೈವತಂ ಪತಿಃ ।
—ವಾ. ರಾ. ಅಯೋಧ್ಯಾ 117-24

○ ಸ ದೇವಃ ಸಾ ಗತಿರ್ನಾನ್ಯಾ.... —ಮ. ಭಾರ. ವನ. 233-37

○ ಯಾ ಪತಿಂ ಹರಿಭಾವೇನ ಭಜೇಚ್ಛ್ರೀರಿವ ತತ್ಪರಾ ।
ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ । —ಭಾಗ. 7-11-29

2 ಹರಿರಸ್ಮಿನ್ ಸ್ಥಿತ ಇತಿ ಸ್ತ್ರೀಣಾಂ ಭರ್ತರಿ ಭಾವನಾ ।
.......ಹರಿಭಾವ ಉದೀರಿತಃ —ಭಾಗ. ತಾ. ನಿ. 7-11-29

○ ಯತ್ಪತ್ಯಪತ್ಯಸುಹೃದಾಮನುವೃತ್ತಿರಂಗ
ಸ್ತ್ರೀಣಾಂ ಸ್ವಧರ್ಮ ಇತಿ ಧರ್ಮವಿದಾ ತ್ವಯೋಕ್ತಮ್ ।
ಅಸ್ತ್ವೇವಮೇತದುಪದೇಶಪದೇ ತ್ವಯೀಶೇ
ಪ್ರೇಷ್ಠೋ ಭವಾಂಸ್ತನುಭೃತಾಂ ಕಿಲ ಬಂಧುರಾತ್ಮಾ ॥ —ಭಾಗ. 10-29-32

3 ದೇವೋ ಮನುಷ್ಯೋ ಗಂಧರ್ವೋ ಯುವಾ ಚಾಪಿ ಸ್ವಲಂಕೃತಃ ।
ದ್ರವ್ಯವಾನಭಿರೂಪೋ ವಾ ನ ಮೇಽನ್ಯಃ ಪುರುಷೋ ಮತಃ । —ಮ.ಭಾರ.ವನ. 233-23

ವನೇ ಆಗಿದ್ದಿರಲಿ, ರೋಗಿಯೇ ಆಗಿದ್ದಿರಲಿ, ವೃದ್ಧನೇ ಆಗಿದ್ದಿರಲಿ, ಕೆಟ್ಟ ನಡತೆಯವನೇ ಆಗಿದ್ದಿರಲಿ–ಅವನಲ್ಲಿ ಪರಮಾತ್ಮನ ಸನ್ನಿಧಾನವನ್ನು ಗುರುತಿಸಿ, ಅವನ ಶುಶ್ರೂಷೆಯನ್ನು ನಡೆಸುತ್ತಿರಬೇಕೇ ಹೊರತು ಅವನನ್ನು ಉಲ್ಲಂಘಿಸ ಬಾರದು.[1] ಇದಕ್ಕೆ ವಿರುದ್ಧವಾಗಿ ಪತಿಯನ್ನು ದೂಷಿಸುವ, ಪರಪುರುಷನನ್ನು ಮನಸ್ಸಿನಲ್ಲಿ ಕಾಮಿಸುವವಳು ನರಕದ ಶಾಲ್ಮಲೀ ವೃಕ್ಷದಲ್ಲಿ ಹೊಡೆತದ ಪೀಡೆಗೊಳಗಾಗಬೇಕಾಗುವುದು ಎಂದು ಗರುಡಪುರಾಣ ಎಚ್ಚರಿಸಿದೆ.[2] ಪತಿಗೆ ಯಾವ ಯಾವ ಒಳ್ಳೆಯ ಚಟುವಟಿಕೆಯಲ್ಲಿ, ವಸ್ತುವಿನಲ್ಲಿ, ಸ್ಥಳದಲ್ಲಿ ಅಭಿರುಚಿ ಇದೆಯೋ ಅಂತಹ ಚಟುವಟಿಕೆ ಮುಂತಾದುವುಗಳಲ್ಲಿಯೇ ಸ್ತ್ರೀಯು ತನ್ನ ಪ್ರೀತಿಯನ್ನು ಬೆಳೆಸಿಕೊಳ್ಳಬೇಕು.[3] ಪತಿಯ ಉಪಸ್ಥಿತಿಯಿಲ್ಲದ ಸ್ಥಳದಲ್ಲಿ ಇರುವುದನ್ನು ಬಯಸಲೇ ಬಾರದು.[4] ಜಾಗರೂಕತೆಯಿಂದ ತನ್ನ ಪತಿಯ ಪ್ರಿಯ ಹಾಗೂ ಹಿತವನ್ನು ಸಾಧಿಸುವುದರಲ್ಲಿ ಆಸಕ್ತಳಾಗಿರಬೇಕು.[5] ಸ್ತ್ರೀ ಪತಿಗೆ ಸರ್ವದಾ ಪ್ರಿಯಳಾಗಿದ್ದು ಪತಿ ಸಂತುಷ್ಟನಾದಾಗ ಅವಳೂ ಸಂತುಷ್ಟಳಾಗಿದ್ದಿರಬೇಕು; ಅವನು ವಿಷಾದಕ್ಕೊಳಗಾದಾಗ ಸ್ತ್ರೀಯೂ ವಿಷಾದಕ್ಕೊಳಗಾಗಿದ್ದು[6] —ಪತಿಯ ಸಮಾನ ಮಾನಸಿಕ ಸ್ಥಿತಿಗೊಳಗಾಗಬೇಕು.

---

1 ಕ್ಲೀಬಂ ವಾ ದುರವಸ್ಥಂ ವಾ ವ್ಯಾಧಿತಂ ವೃದ್ಧಮೇವ ವಾ ।
ಸುಸ್ಥಿತಂ ದುಃಸ್ಥಿತಂ ವಾಪಿ ಪತಿಮೇಕಂ ನ ಲಂಘಯೇತ್ । –ಸ್ಕಾಂದ ಕಾಶೀಖಂಡ-32

● ದುಶ್ಶೀಲಃ ಕಾಮವೃತ್ತೋ ವಾ ಧನೈರ್ವಾ ಪರಿವರ್ಜಿತಃ ।
ಸ್ತ್ರೀಣಾಮಾರ್ಯಸ್ವಭಾವಾನಾಂ ಪರಮಂ ದೈವತಂ ಪತಿಃ ।
—ವಾ. ರಾಮಾ. ಅಯೋಧ್ಯಾ 117-24

● ದುಃಶೀಲೋ ದುರ್ಭಗೋ ವೃದ್ಧೋ ಜಡೋ ರೋಗ್ಯಧನೋಽಪಿ ವಾ ।
ಪತಿಃ ಸ್ತ್ರೀಭಿರ್ನ ಹಾತವ್ಯೋ ಲೋಕೇಪ್ಸುಭಿರಪಾತಕೀ ॥ —ಭಾಗ. 10-29-25

2 ಭರ್ತಾರಂ ದೂಷಯೇನ್ನಾರೀ ಪರಂ ಮನಸಿ ಧಾರಯೇತ್ ।
ಇತ್ಯಾದ್ಯಾಃ ಶಾಲ್ಮಲೀ ವೃಕ್ಷೇ ಭುಂಜತೇ ಬಹುತಾಡನಮ್ —ಗ. ಪು. -4-30

3 ಯತ್ರಯತ್ರ ರುಚಿರ್ಭರ್ತುಸ್ತತ್ರ ಪ್ರೇಮವತೀ ಸದಾ । — ಸ್ಕಾಂದ-ಕಾಶೀಖಂಡ-31

4 ಸರ್ವಥಾ ಭರ್ತೃರಹಿತಂ ನ ಮಮೇಷ್ಟಂ ಕಥಂಚನ । — ಮ.ಭಾರ.ವನ. 233-30

5 .......ಸುಪ್ರಯತಾ ಭರ್ತುಃ ಪ್ರಿಯಹಿತೇ ರತಾ । — ಮ.ಭಾರ.ವನ. 233-33

6 ಹೃಷ್ಟಾ ಹೃಷ್ಟೇ ವಿಷಣ್ಣಾ ಸ್ಯಾದ್ವಿಷಣ್ಣೇಽಸ್ಮಿನ್ ಪ್ರಿಯಾ ಸದಾ ।
ಏವಂ ರೂಪಾ ಭವೇತ್ ಪುಣ್ಯಾ.......ಸ್ಕಾಂದ-ಕಾಶೀಖಂಡ-34

● ಹೃಷ್ಟೇ ಭವತಿ ಸಾ ಹೃಷ್ಟಾ ದುಖಿತೇ ಮಯಿ ದುಃಖಿತಾ ।—ಮ.ಭಾರ.ಶಾಂತಿ 145-9

ಸ್ವಯಂವರದ ಮುನ್ನ ಕುಲದೇವಿಯಾತ್ರೆಯಲ್ಲಿ ತೊಡಗಿದ್ದ ರುಗ್ಮಿಣೀದೇವಿ ಮಂದಹಾಸ, ಲಜ್ಜಾಪೂರ್ವಕ ದರ್ಶನ ಮುಂತಾದ ಹಾವಭಾವಗಳಿಂದ ತನ್ನ ಶೋಭೆಯನ್ನು ವಿಶೇಷವಾಗಿ ಅಭಿವ್ಯಕ್ತಗೊಳಿಸಿ, ಆ ಶೋಭೆಯನ್ನು ತನ್ನ ನಿಯತ ಪತಿಯಾದ ಶ್ರೀಕೃಷ್ಣನಿಗೆ ಸಮರ್ಪಿಸಿದಳು—ಎಂದು ನಿರೂಪಿಸುವ[1] ಭಾಗವತದಿಂದ ಇತರ ಪತಿವ್ರತೆಯರೂ ಆಭರಣಾದಿಗಳಿಂದ ಅಭಿವ್ಯಕ್ತಗೊಳಿಸುವ ತಮ್ಮ ಸೌಂದರ್ಯದಿಂದ ಉಳಿದ ಪುರುಷರು ಮರುಳಾಗಲಿ ಎಂದು ಭಾವಿಸದೆ, ಅದನ್ನು ತಮ್ಮ ಪತಿ ಆಸ್ವಾದಿಸಲಿ – ಎಂಬ ಸಮರ್ಪಣಾಭಾವವನ್ನು ತಳೆದಿರಬೇಕೆಂದು ಸೂಚಿತವಾಗುವುದು.

ವಾಚಿಕ ನಿಯಮಗಳು :

ಪತಿವ್ರತೆಯಾದವಳು ತನ್ನ ಮುಖದಿಂದ ಕೆಟ್ಟ ಮಾತು ಹೊರಹೊಮ್ಮದಂತೆ ಜಾಗರೂಕಳಾಗಿರಬೇಕು.[1] ಪತಿಯ ಜೊತೆಗೆ ಗಟ್ಟಿಯಾಗಿ, ಕಠೋರವಾಗಿ, ಅಪ್ರಿಯವಾಗಿ ಮಾತನಾಡಬಾರದು.[2] ಪತಿಯ ಮೇಲೆ ಅಪವಾದ ಹೊರಿಸಬಾರದು. ಕಲಹವನ್ನು ಎಂದೂ ನಡೆಸಬಾರದು. ಗುರುಹಿರಿಯರ ಸನ್ನಿಧಾನದಲ್ಲಿ ಗಟ್ಟಿಯಾಗಿ ಮಾತನಾಡಬಾರದು; ಗಟ್ಟಿಯಾಗಿ ನಗಬಾರದು ಕೂಡಾ.[3] ಯಾವ ಸ್ತ್ರೀ ತನ್ನ ಪ್ರಿಯನನ್ನು ಹುಂಕಾರಪೂರ್ವಕವಾಗಿ ಮಾತನಾಡಿಸುವಳೋ ಅವಳು ಮುಂದಿನ ಜನ್ಮದಲ್ಲಿ ಮೂಕಳಾಗಿ ಹುಟ್ಟಬೇಕಾಗುವುದೆಂದು ಎಚ್ಚರಿಸಲಾಗಿದೆ.[4]

---

1 "......ಯಾತ್ರಾಚ್ಛಲೇನ ಹರಯೇಽರ್ಪಯತೀಂ ಸ್ವಶೋಭಾಮ್" – ಭಾಗ. 10-53-53

1 'ದುರ್ವ್ಯಾಹೃತಾಚ್ಛಂಕಮಾನಾ....' —ಮ. ಭಾರ. ವನ. 233-21

2 ನೋಚ್ಚೈರ್ವದೇನ್ನ ಪರುಷಂ ನ ಬಹೂನ್ ಪತಿಮಪ್ರಿಯಮ್ । —ವೇ.ಸ್ಮೃ.2-33

3 ಅಪವಾದೋ ನ ಕರ್ತವ್ಯಃ ಕಲಹಂ ದೂರತಸ್ತ್ಯಜೇತ್ ।
ಗುರೂಣಾಂ ಸನ್ನಿಧೌ ಕ್ವಾಪಿ ನೋಚ್ಚೈರ್ಬ್ರೂಯಾನ್ನ ವಾ ಹಸೇತ್ ।
– ಸ್ಕಾಂದ–ಕಾಶೀಖಂಡ–42

4 ಯಾ ಹುಂಕೃತ್ಯ ಪ್ರಿಯಂ ಬ್ರೂತೇ ಸಾ ಮೂಕಾ ಜಾಯತೇ ಖಲು ।
–ಸ್ಕಾಂದ– ಕಾಶೀಖಂಡ 46

ಕ್ಲೇಶಪರಿಹಾರಕಗಳಾದ ಒಳ್ಳೆಯ ಮಾತುಗಳಿಂದ ಪತಿಯನ್ನು ಸಂತೋಷಪಡಿಸು ವವಳು ಮೂರು ಲೋಕಗಳನ್ನೂ ಸಂತೋಷಪಡಿಸಿದಷ್ಟು ಪುಣ್ಯಭಾಗಿನಿಯಾಗು ವಳು ಎಂದು ಪ್ರಶಂಸಿಸಲಾಗಿದೆ.[1] ಪತಿಯನ್ನು ದ್ವೇಷಿಸುವ ಕೆಟ್ಟ ಸ್ತ್ರೀಯ ಜೊತೆಗೆ ಸಂಭಾಷಣೆಯನ್ನು ನಡೆಸಬಾರದು.[2] ಪತಿಯ ನಾಮವನ್ನು ಪತ್ನಿಯಾದ ವಳು ಉಲ್ಲೇಖಿಸಿದರೆ ಅವನ ಆಯುಷ್ಯ ಹ್ರಾಸವಾಗುವುದು. ಆದ್ದರಿಂದ ಪತಿಯ ನಾಮವನ್ನು ಉಲ್ಲೇಖಿಸಬಾರದು.[3] ಅಂಭ್ರಿಣೀಸೂಕ್ತದಲ್ಲಿ ಜಗನ್ಮಾತೆಯಾದ ಲಕ್ಷ್ಮೀದೇವಿ ತನಗೂ ಕಾರಣನನ್ನಾಗಿ ತನ್ನ ಪತಿಯಾದ ಶ್ರೀಮನ್ನಾರಾಯಣನನ್ನು ಉಲ್ಲೇಖಿಸುವಾಗ ನಾರಾಯಣ ಎಂಬ ಹೆಸರನ್ನು ಉಚ್ಚರಿಸದೆ ಆ ಹೆಸರಿನ ಅರ್ಥ ವನ್ನು ತಿಳಿಸುವ ಶಬ್ದಗಳ ಮೂಲಕ ಅವನನ್ನು ಪ್ರಸ್ತಾಪಿಸುವ ಮೂಲಕ ಮುತ್ತೈದೆ ಯರು ಯಾರೂ ತನ್ನಂತೆ ತಮ್ಮ ಪತಿಯಂದಿರ ಹೆಸರನ್ನು ಉಚ್ಚರಿಸಬಾರದೆಂಬ ಆದರ್ಶವನ್ನು ತೋರಿರುವಳು.[4] ಸ್ತ್ರೀಯು ಲಜ್ಜೆಯನ್ನುಂಟು ಮಾಡುವಂತಹ ಮಾತುಗಳನ್ನಾಡಬಾರದು.[5]

### ದೈಹಿಕ ನಿಯಮಗಳು :

ಪತಿಯ ಮಾತನ್ನು ಉಲ್ಲಂಘಿಸದೆ, ಅದಕ್ಕೆ ಅನುಗುಣವಾಗಿ ನಡೆದುಕೊಳ್ಳು ವುದು ಸ್ತ್ರೀಯರ ವ್ರತ; ಶ್ರೇಷ್ಠ ವಿಧಿ, ದೇವರ ಪೂಜೆಗೆ ಸದೃಶವಾದುದು.[6]

---

1 ತಥೈವ ಚಾರುವಚನೈಃ ಕ್ಲೇಶಸಂಶೋಧನೈಃ ಪರೈಃ ।
ಯಾ ಪ್ರಿಯಂ ಪ್ರೀಣಯೇತ್ ಪ್ರೀತ್ಯಾ ತ್ರಿಲೋಕೀ ಪ್ರೀಣಿತಾ ತಯಾ ॥
–ಸ್ಕಾಂದ ಕಾಶೀಖಂಡ-49

2 ಭರ್ತೃವಿದ್ವೇಷಿಣೀಂ ಭಾರ್ಯಾಂ ನೈಷಾ ಸಂಭಾಷತೇ ಕ್ವಚಿತ್ ।
–ಸ್ಕಾಂದ–ಕಾಶೀಖಂಡ-27

3 ನ ಚ ತೇ ನಾಮ ಗೃಹ್ಣೀಯಾತ್ತಸ್ಯಾಯುಷ್ಯವಿವೃದ್ಧಯೇ । -ಸ್ಕಾಂದ–ಕಾಶೀಖಂಡ-13

4 ಮಮ ಯೋನಿರಪ್ಸ್ವಂತಃ ಸಮುದ್ರೇ । –ಅಂಭ್ರಿಣೀಸೂಕ್ತೇ

○ ಸ್ತ್ರೀಣಾಂ ಪತಿನಾಮಗ್ರಹಣಮನುಚಿತಮಿತಿ ಶಿಕ್ಷಣಾಯ ನಾರಾಯಣ ಇತ್ಯನುಕ್ತ್ವಾ ಆಪೋ ನಾರಾ ಇತ್ಯಾದಿನೋಕ್ತಂ ತದರ್ಥಮೇವ ಆಹ । –ತತ್ತ್ವನಿರ್ಣಯಟೀಕಾ

5 ನ ತ್ರಪಾಕರವಾಕ್ಯಾನಿ ವಕ್ತವ್ಯಾನಿ ಕದಾಚನ । —ಸ್ಕಾಂದ ಕಾಶೀಖಂಡ–41

6 ಇದಮೇವ ವ್ರತಂ ಸ್ತ್ರೀಣಾಮಯಮೇಕೋ ವಿಧಿಃ ಪರಃ ।
ಇಯಮೇಕಾ ದೇವಪೂಜಾ ಭರ್ತುರ್ವಾಕ್ಯಂ ನ ಲಂಘಯೇತ್
–ಸ್ಕಾಂದ–ಕಾಶೀಖಂಡ 32

ಪತ್ನಿಯು ನಿರ್ಮಲಾಂತಃಕರಣವುಳ್ಳವಳಾಗಿ ಸರ್ವದಾ ನೆರಳಿನಂತೆ ಪತಿಯನ್ನು ಅನುಸರಿಸುತ್ತಿರಬೇಕು; ಗೆಳತಿಯಂತೆ ಪತಿಯ ಹಿತಕಾರ್ಯದಲ್ಲಿ ತೊಡಗಿದ್ದಿರಬೇಕು. ದಾಸಿಯಂತೆ ಪತಿ ಆದೇಶಿಸಿದ ಕರ್ಮಗಳನ್ನು ನಡೆಸುತ್ತಿರಬೇಕು.[1] ಅತ್ತೆ, ಮಾವಂದಿರು ಕುಲಧರ್ಮಗಳನ್ನಾಗಿ ತಿಳಿಸಿದವುಗಳನ್ನು ಅವಶ್ಯವಾಗಿ ಪಾಲಿಸಬೇಕು.[2] ಪತಿ ಯಾವುದನ್ನು ಕುಡಿಯುವುದಿಲ್ಲವೋ, ಯಾವುದನ್ನು ಸೇವಿಸುವುದಿಲ್ಲವೋ, ಯಾವುದನ್ನು ತಿನ್ನುವುದಿಲ್ಲವೊ—ಅವೆಲ್ಲವನ್ನು ದೂರೀಕರಿಸಬೇಕು.[3] ಯಾವಾಗಲೂ ಪತಿ ಊಟ ಮಾಡದೆ ಅವಳು ಊಟ ಮಾಡಬಾರದು; ಅವನು ಮಲಗದೆ ಅವಳು ಮಲಗಬಾರದು.[4] ಪತಿ ನಿದ್ರೆಯಿಂದ ಏಳುವ ಮೊದಲೇ ಏಳಬೇಕು.[5] ಪತಿಯು ತಿಂದು ಉಳಿದ ಅನ್ನ, ಭಕ್ಷ್ಯಾದಿ, ಫಲಾದಿಗಳನ್ನು 'ಮಹಾಪ್ರಸಾದ' ಎಂದು ಸ್ವೀಕರಿಸಬೇಕು.[6] ಪತಿಯು ನೀಡಿದ ವಸ್ತ್ರಾಲಂಕಾರಾದಿಗಳನ್ನೇ ತೊಟ್ಟುಕೊಳ್ಳಬೇಕು.[7] ಪತಿಯ ಇಚ್ಛೆಗೆ ವಿರುದ್ಧವಾಗಿ ಯಾವುದೇ ಆಭರಣವನ್ನು ತೊಡಬಾರದು.[8] ಉಡುಪು, ಆಹಾರ, ಭೂಷಣಗಳ ವಿಷಯದಲ್ಲಿ

---

1 ಛಾಯೇವಾನುಗತಾ ಸ್ವಚ್ಛಾ ಸಖೀವ ಹಿತಕರ್ಮಸು ।
ದಾಸೀವಾದಿಷ್ಟಕಾರ್ಯೇಷು ಭಾರ್ಯಾ ಭರ್ತುಃ ಸದಾ ಭವೇತ್

–ವೇದವ್ಯಾಸಸ್ಮೃತಿ 2-27

2 ಯೇ ಚ ಧರ್ಮಾಃ ಕುಟುಂಬೇಷು ಶ್ವಶ್ರ್ವಾ ಮೇ ಕಥಿತಾಃ ಪುರಾ ।
ಅನುತಿಷ್ಠಾಮಿ ತತ್ ಸರ್ವಂ ನಿತ್ಯಕಾಲಮತಂದ್ರಿತಾ ।

–ಮ. ಭಾರ. ವನ. 233-33

3 ಯಚ್ಚ ಭರ್ತಾ ನ ಪಿಬತಿ ಯಚ್ಚ ಭರ್ತಾ ನ ಸೇವತೇ ।
ಯಚ್ಚ ನಾಶ್ನಾತಿ ಮೇ ಭರ್ತಾ ಸರ್ವಂ ತದ್ ವರ್ಜಯಾಮ್ಯಹಮ್ ।

–ಮ. ಭಾರ. ವನ. 233-31

4 'ನಾಭುಕ್ತವತಿ ನಾಸ್ನಾತೇ ನಾಸಂವಿಷ್ಟೇ ಚ ಭರ್ತರಿ ।
ನ ಸಂವಿಶಾಮಿ ನಾಶ್ನಾಮಿ ಸದಾ.... –ಮ. ಭಾರ. ವನ. 233-24

5 ಭುಂಕ್ತೇ ಭುಕ್ತೇ ತ್ವಯಿ ಮುನೇ ಆಸೀನೇ ತ್ವಯಿ ತಿಷ್ಠತಿ ।
ವಿನಿದ್ರಿತೇ ಚ ನಿದ್ರಾತಿ ಪ್ರಥಮಂ ಪ್ರತಿಬುದ್ಧ್ಯತೇ ।

–ಸ್ಕಾಂದ–ಕಾಶೀಖಂಡ 11

6 ಸೇವತೇ ಭರ್ತುರುಚ್ಛಿಷ್ಟಂ ಮೃಷ್ಟಮನ್ನಂ ಫಲಾದಿಕಮ್ ।
ಮಹಾಪ್ರಸಾದ ಇತ್ಯುಕ್ತ್ವಾ ಪತಿದತ್ತಂ ಪ್ರತೀಚ್ಛತಿ ।

–ಸ್ಕಾಂದ–ಕಾಶೀಖಂಡ 19

7 ವಸ್ತ್ರಾಲಂಕಾರರತ್ನಾನಿ ಪ್ರದತ್ತಾನ್ಯೇವ ಧಾರಯೇತ್ –ವೇದ. ಸ್ಮೃತಿ 2–26

8 ಅಹಂ ಪತೀನ್ ನಾತಿಶಯೇ ನಾತ್ಯಶ್ನೇ ನಾತಿಭೂಷಯೇ ।

—ಮ. ಭಾರ. ವನ. 233-38

ಅತ್ತೆಗಿಂತ ವೈಶಿಷ್ಟ್ಯವನ್ನು ತೋರಬಾರದು.[1] ಯಾರನ್ನೂ ತಿರಸ್ಕರಿಸುವ ಸಂಭಾಷಣೆಯನ್ನು ನಡೆಸಬಾರದು. ಕೆಟ್ಟ ಸ್ತ್ರೀಯರ ಸಂಪರ್ಕವನ್ನೇ ಇಟ್ಟುಕೊಳ್ಳಬಾರದು. ಯಾವಾಗಲೂ ಆಲಸ್ಯವನ್ನು ತೋರದೆ ಪತಿಗೆ ಅನುಕೂಲವಾಗುವಂತೆ ನಡೆದುಕೊಳ್ಳುತ್ತಿರಬೇಕು.[2] ಪತಿಯ ಅನುಮತಿಯಿಲ್ಲದೆ ಯಾರಿಗೂ ಏನನ್ನೂ ನೀಡಬಾರದು.[3] ತಾನು ನಿತ್ಯ ಅಲಂಕೃತಳಾಗಿದ್ದು ಪತಿಗೆ ಶ್ರೇಷ್ಠ ಕಾಮನೆಗಳನ್ನು ಪೂರೈಸುತ್ತ, ವಿನಯ, ಇಂದ್ರಿಯನಿಗ್ರಹ, ಪ್ರಿಯ ಹಾಗೂ ಸತ್ಯ ಮಾತುಗಳು, ಇವುಗಳಿಂದ ಪ್ರೇಮಪೂರ್ವಕವಾಗಿ ಕಾಲಕಾಲಕ್ಕನುಗುಣವಾಗಿ ಪತಿಯನ್ನು ಸೇವಿಸಬೇಕು.[4] ಮಾದಕ ದ್ರವ್ಯಗಳ ಪಾನ, ದುರ್ಜನರ ಸಂಪರ್ಕ, ಪತಿಯನ್ನು ಬಿಟ್ಟು ದೂರ ಇರುವುದು, ಬೇರೆ ಬೇರೆ ಕಡೆಗೆ ಅಡ್ಡಾಡುತ್ತಿರುವುದು, ವಿಶೇಷವಾಗಿ ನಿದ್ರಿಸುವುದು ಹಾಗೂ ಬೇರೆಯವರ ಮನೆಯಲ್ಲಿ ವಾಸ ಮಾಡುವುದು—ಇವು ಆರು ಸ್ತ್ರೀಯರ ದೋಷಗಳೆಂದು ಪರಿಗಣಿತಳಾಗಿದ್ದು,[5] ಪತಿವ್ರತೆಯರು ಇವುಗಳಿಗೆ ಒಳಗಾಗಬಾರದು.

ಸ್ತ್ರೀಯು ದೈಹಿಕವಾಗಿ ಪರಪುರುಷನ ಸಂಪರ್ಕ ಮಾಡದ ಮಾತ್ರಕ್ಕೆ 'ಸಾಧ್ವೀ' ಎನಿಸುವುದಿಲ್ಲ. ಯಾರು ತನ್ನ ಪತಿಗೆ ಯಾವುದೇ ರೀತಿಯ ಅಪ್ರಿಯವನ್ನು ನಡೆಸುವುದಿಲ್ಲವೋ ಆಕೆ 'ಸಾಧ್ವೀ' ಎನಿಸುವಳು.[6] ಕರ್ಮದಿಂದ, ಮಾತಿನಿಂದ ಹಾಗೂ ಮನಸ್ಸಿನಿಂದ ಪತಿಯ ಪ್ರಿಯವನ್ನು ಹಾಗೂ ಹಿತವನ್ನು ಬಯಸುವ

---

1. ನೈತಾಮತಿಶಯೇ ಜಾತು ವಸ್ತ್ರಭೂಷಣಭೋಜನೈಃ । —ಮ. ಭಾರ. ವನ. 233–41

2. ಅತಿರಸ್ಕೃತಸಂಭಾಷಾ ದುಃಸ್ತ್ರೀಯೋ ನಾನುಸೇವತೀ ।
ಅನುಕೂಲವತೀ ನಿತ್ಯಂ ಭವಾಮ್ಯನಲಸಾ ಸದಾ । —ಮ. ಭಾರ. ವನ. 233–27

3. ಅನುಮತ್ಯಾ ವಿನಾ ಕಿಂಚಿತ್ ಕಸ್ಮೈಚಿನ್ನ ದದಾತ್ಯಪಿ —ಸ್ಕಾಂದ-ಕಾಶೀಖಂಡ 16

4. ಸ್ವಯಂ ಚ ಮಂಡಿತಾ ನಿತ್ಯಂ ಪರಿಮೃಷ್ಟಪರಿಚ್ಛದಾ ।
ಕಾಮೈರುಚ್ಚಾವಚೈಃ ಸಾಧ್ವೀ ಪ್ರಶ್ರಯೇಣ ದಮೇನ ಚ ।
ವಾಕ್ಯೈಃ ಸತ್ಯೈಃ ಪ್ರಿಯೈಃ ಪ್ರೇಮ್ಣಾ ಕಾಲೇ ಕಾಲೇ ಭಜೇತ್ ಪತಿಮ್ ।
—ಭಾಗ. 7–11–28

5. ಪಾನಂ ದುರ್ಜನಸಂಸರ್ಗಃ ಪತ್ಯಾ ಚ ವಿರಹೋಽಟನಮ್ ।
ಸ್ವಪ್ನೋಽನ್ಯಗೇಹವಾಸಶ್ಚ ನಾರೀಸಂದೂಷಣಾನಿ ಷಟ್ —ಮನು. 9–13

6. ನೈವ ಸಾಧ್ವೀ ವಿನಿರ್ದಿಷ್ಟಾ ಕೇವಲೋಪಸ್ಥರಕ್ಷಣಾತ್ ।
ವಿಪ್ರಿಯಂ ನಾಚರೇತ್ ಕಿಂಚಿತ್ ಪತ್ಯುಃ ಸಾಧ್ವೀತಿ ಸಾ ಸ್ಮೃತಾ । —ವಿ.ಧ. 2-33-6

ಪತಿಯನ್ನು ಗೌರವಿಸುವುದರಲ್ಲಿ ತತ್ಪರಳಾಗಿರುವ ಸ್ತ್ರೀ 'ಸಾಧ್ವೀ' ಎನಿಸಿರುವಳು [1] — ಎಂದು ಸಾಧ್ವಿ ಪತಿವ್ರತೆ ಹೇಗಿರಬೇಕೆಂದು ತಿಳಿಸುತ್ತಿರುವ ವಿಷ್ಣು ಧರ್ಮೋತ್ತರದಲ್ಲಿ ಪಾತಿವ್ರತ್ಯ ತ್ರಿಕರಣಗಳಿಗೂ ಸಂಬಂಧ ಪಡುವಂತಹದ್ದೆಂದು ಸ್ಪಷ್ಟೀಕರಿಸಲಾಗಿದೆ.

## ಗೃಹ ವ್ಯವಹಾರದಲ್ಲಿ ಪತಿವ್ರತೆಯ ಕರ್ತವ್ಯ :

ಗೃಹಿಣಿಯೇ ಗೃಹ; ಎನ್ನುವಷ್ಟು [2] ಮನೆಯ ವ್ಯವಹಾರಗಳೆಲ್ಲ ಗೃಹಿಣಿಯಾದವಳನ್ನು – ಪತಿವ್ರತೆಯಾದವಳನ್ನು ಅವಲಂಬಿಸಿರುವವು. ಗೃಹಸ್ಥನಿಗೆ ಸುಖಪ್ರಾಪ್ತಿ, ಧರ್ಮಫಲಾವಾಪ್ತಿ, ಸಂತಾನಾಭಿವೃದ್ಧಿ ಮುಂತಾದವುಗಳಿಗೆಲ್ಲ ಭಾರ್ಯೆಯೇ ಮೂಲ. [3] ಭಾರ್ಯೆಯ ನೆರವಿನಿಂದಲೇ, ಈ ಲೋಕದಲ್ಲಿ ಯಶಸ್ಸನ್ನೂ, ಸತ್ಕರ್ಮಗಳನ್ನಾಚರಿಸಿ ಉತ್ತಮ ಪರ ಲೋಕಗಳನ್ನೂ ಪಡೆಯಬಹುದು. ಭಾರ್ಯೆಯನ್ನು ಕಳಕೊಂಡವನು ದೇವ, ಪಿತೃ, ಅತಿಥಿಗಳ ಕಾರ್ಯಗಳನ್ನು ನಡೆಸಲು ಅನರ್ಹ ಎನಿಸುವನು. [4] ಮನೆಯ ವ್ಯವಹಾರದಲ್ಲಿ ಇಷ್ಟೊಂದು ದೊಡ್ಡ ಪಾತ್ರ ವಹಿಸಬೇಕಾದ ಪತ್ನಿಯನ್ನು ವಿಶೇಷವಾಗಿ ಹಣವನ್ನು ಸಂಗ್ರಹಿಸುವುದರಲ್ಲಿ, ವಿನಿಯೋಗಿಸುವುದರಲ್ಲಿ, ಶುದ್ಧೀಕರಿಸುವುದರಲ್ಲಿ, ಅತಿಥಿ ಸತ್ಕಾರ ಮುಂತಾದ ಧರ್ಮದಲ್ಲಿ, ಆಹಾರವನ್ನು ಸಿದ್ಧಪಡಿಸುವುದರಲ್ಲಿ, ಹಾಗೂ ಪಾತ್ರಗಳನ್ನು ತೊಳೆಯುವುದರಲ್ಲಿ ನಿಯೋಜಿಸಬೇಕೆಂದು ಮನುಸ್ಮೃತಿಯಲ್ಲಿ ಹೇಳಲಾಗಿದೆ. [5]

---

1. ಕರ್ಮಣಾ ಮನಸಾ ವಾಚಾ ಭರ್ತುಃ ಪ್ರಿಯಹಿತೈಷಿಣೀ ।
   ಯಾ ನಾರೀ ಸಾ ಸ್ಮೃತಾ ಸಾಧ್ವೀ ಪತಿಪೂಜನತತ್ಪರಾ ॥ —ವಿ. ಧ. 2-33-7

2. ನ ಗೃಹಂ ಗೃಹಮಿತ್ಯಾಹುಃ ಗೃಹಿಣೀ ಗೃಹಮುಚ್ಯತೇ —ಮ. ಭಾರ. ಶಾಂತಿ 144-6

3. ಭಾರ್ಯಾ ಮೂಲಂ ಗೃಹಸ್ಥಸ್ಯ ಭಾರ್ಯಾ ಮೂಲಂ ಸುಖಸ್ಯ ಚ ।
   ಭಾರ್ಯಾ ಧರ್ಮಫಲಾವಾಪ್ತ್ಯೈ ಭಾರ್ಯಾ ಸಂತಾನವೃದ್ಧಯೇ ।
   —ಸ್ಕಾಂದ- ಕಾಶೀಖಂಡ-70

4. ಪರಲೋಕಸ್ತ್ವಯಂ ಲೋಕೋ ಜೀಯತೇ ಭಾರ್ಯಯಾ ಸ್ವಯಮ್
   ದೇವಪಿತ್ರತಿಥೀನಾಂ ಹಿ ನಾಭಾರ್ಯಃ ಕರ್ಮ ಚಾರ್ಹತಿ । -ಸ್ಕಾಂದ-ಕಾಶೀಖಂಡ-71

5. ಅರ್ಥಸ್ಯ ಸಂಗ್ರಹೇ ಚೈನಾಂ ವ್ಯಯೇ ಚೈವಂ ನಿಯೋಜಯೇತ್ ।
   ಶೌಚೇ ಧರ್ಮೇಽನ್ನಪಕ್ತ್ಯಾಂ ಚ ಪಾರಿಣಾಹ್ಯಸ್ಯ ವೇಕ್ಷಣೇ । —ಮನು. 9-11

## ಧರ್ಮಾಚರಣೆಯಲ್ಲಿ ಪತಿವ್ರತೆಯ ಪಾತ್ರ :

ಪತಿಯ ಹೇಳಿಕೆಯನ್ನು ನಿರೀಕ್ಷಿಸದೆಯೇ ಪೂಜೆಯ ಉಪಕರಣಗಳಾದ ಪತ್ರ, ಪುಷ್ಪ, ದರ್ಭೆ, ಅಕ್ಷತ ಮುಂತಾದವುಗಳನ್ನು ತಾನಾಗಿಯೇ ಸಿದ್ಧಪಡಿಸಬೇಕು.[1] ಯಾವ ಕಾಲಕ್ಕೆ ಯಾವುದು ಸಮುಚಿತವಾಗುವುದೆಂಬುದನ್ನು ಪ್ರತೀಕ್ಷೆ ಮಾಡುತ್ತ, ಅವೆಲ್ಲವನ್ನು ಆಯಾಯ ಕಾಲಕ್ಕನುಗುಣವಾಗಿ ಸ್ವಲ್ಪವೂ ಉದ್ವೇಗಕ್ಕೊಳಗಾಗದೆ, ಬಹಳ ಸಂತೋಷದಿಂದ ನೆರವೇರಿಸಬೇಕು.[2] ಸ್ವಲ್ಪವೂ ಆಲಸ್ಯಕ್ಕೆ ಒಳಗಾಗದೆ ದಾನ, ಬಲಿ, ವೈಶ್ವದೇವ, ಶ್ರಾದ್ಧ, ಹಬ್ಬ ಹರಿದಿನಗಳಿಗೆ ಉಚಿತಗಳಾದ ಆಚರಣೆಗಳು, ಗೌರವಾರ್ಹ ವ್ಯಕ್ತಿಗಳ ಸಮ್ಮಾನ, ಸತ್ಕಾರ— ಮುಂತಾದ ಸಂಪ್ರದಾಯಗಳನ್ನು, ನಿಯಮಗಳನ್ನು ಆಚರಿಸುವಲ್ಲಿ ಸದಾ ಪತ್ನಿಯು ನೆರವು ನೀಡುತ್ತಿರಬೇಕು.[3] ಕುಟುಂಬದ ಹೊಣೆಗಾರಿಕೆಯನ್ನೆಲ್ಲ ತನ್ನ ಮೇಲೆ ಹೊರಿಸಿ, ಪತಿಯ ಉಪಾಸನೆಯೇ ಮುಂತಾದ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಸಾಧನೆಗಳನ್ನು ನಿರಾತಂಕವಾಗಿ ನಡೆಸಲು ಅನುಕೂಲಳಾಗಿರಬೇಕು.[4]

## ಗುರುಹಿರಿಯರ ಸೇವೆ :

ದೇವತೆಗಳಿಗೆ, ಪಿತೃಗಳಿಗೆ, ಅತಿಥಿಗಳಿಗೆ, ಪರಿಚಾರಕರಿಗೆ, ಗೋವುಗಳಿಗೆ, ಭಿಕ್ಷುಕರಿಗೆ ಆಹಾರವನ್ನು ವಿತರಿಸಿ ಆ ಮೇಲೆಯೇ ಸ್ತ್ರೀಯು ತಾನು ಆಹಾರವನ್ನು ಸ್ವೀಕರಿಸಬೇಕು.[5] ಅತ್ತೆ, ಮಾವಂದಿರನ್ನೆಲ್ಲ ಆಹಾರ, ಪಾನ, ಉಡುಪು

---

1. ಪೂಜೋಪಕರಣಂ ಸರ್ವಮನುಕ್ತಾ ಸಾಧಯೇತ್ ಸ್ವಯಮ್ ।
ನಿಯಮೋದಕಬರ್ಹೀಂಷಿ ಪತ್ರಪುಷ್ಪಾಕ್ಷತಾದಿಕಮ್ —ಸ್ಕಾಂದ-ಕಾಶೀಖಂಡ 17

2. ಪ್ರತೀಕ್ಷಮಾಣಾವಸರಂ ಯಥಾಕಾಲೋಚಿತಂ ಹಿ ಯತ್ ।
ತದುಪಸ್ಥಾಪಯೇತ್ ಸರ್ವಮನುದ್ವಿಗ್ನಾತಿಹೃಷ್ಟವತ್ । —ಸ್ಕಾಂದ-ಕಾಶೀಖಂಡ 18

3. ಭಿಕ್ಷಾಬಲಿಶ್ರಾದ್ಧಮಿತಿ ಸ್ಥಾಲೀಪಾಕಾಂಶ್ಚ ಪರ್ವಸು ।
ಮಾನ್ಯಾನಾಂ ಮಾನಸತ್ಕಾರಾ ಯೇ ಚಾನ್ಯೇ ವಿದಿತಾ ಮಮ ।
ತಾನ್ ಸರ್ವಾನನುವರ್ತೇಽಹಂ ದಿವಾರಾತ್ರಮತಂದ್ರಿತಾ ।
ವಿನಿಯಾನ್ ನಿಯಮಾಂಶ್ಚೈವ ಸದಾ ಸರ್ವಾತ್ಮನಾ ಶ್ರಿತಾ ।
—ಮ. ಭಾರ. ವನ. 233-34, 35

4. ಮಯಿ ಸರ್ವಂ ಸಮಾಜಸ್ಯ ಕುಟುಂಬಂ ಭರತರ್ಷಭಾಃ ।
ಉಪಾಸನರತಾಃ ಸರ್ವೇ ಘಟಯಂತಿ ವರಾನನೇ । —ಮ. ಭಾರ. ವನ. 233-54

5. ಅವಿಭಜ್ಯ ನ ಚಾಶ್ನೀಯಾದ್ದೇವಪಿತ್ರತಿಥಿಷ್ವಪಿ ।
ಪರಿಚಾರಕವರ್ಗೇಷು ಗೋಷು ಭಿಕ್ಷುಕುಲೇಷು ಚ । —ಸ್ಕಾಂದ-ಕಾಶೀಖಂಡ 20

ಮುಂತಾದ ವಿಷಯಗಳಲ್ಲಿ ತಾನೇ ಸೇವಿಸುತ್ತಿರಬೇಕು.[1] ಪತಿಗೆ ಅನುಕೂಲ ಳಾಗಿದ್ದುಕೊಂಡು ಅವನ ಶುಶ್ರೂಷೆಯನ್ನು ನಡೆಸುತ್ತಿರುವಂತೆ, ಪತಿಯ ಬಂಧು ಗಳ ವಿಷಯದಲ್ಲೂ ಗೌರವಾದರಪೂರ್ವಕವಾಗಿ ನಡೆದುಕೊಳ್ಳಬೇಕು.[2] ಕೈಕೆಯಿ ರಾಮಚಂದ್ರನ ಪಟ್ಟಾಭಿಷೇಕಕ್ಕೆ ವಿಘ್ನವನ್ನೊಡ್ಡಿದ ಮಹಾಪರಾಧಿನಿ. ಆದರೆ ಭರತನಂತಹ ಸುಪುತ್ರನನ್ನು ಪಡೆದ ಪ್ರಯುಕ್ತ ಸದ್ಗತಿಯನ್ನು ಪಡೆದಳೇ ಹೊರತು ನರಕವನ್ನು ಹೊಂದಿಲ್ಲ.[3] ಇದರಿಂದ ಸ್ತ್ರೀಯರು ಒಳ್ಳೆಯ ಮಕ್ಕಳನ್ನು ಪಡೆಯು ವುದರಿಂದ, ಮಕ್ಕಳನ್ನು ಒಳ್ಳೆಯವರನ್ನಾಗಿ ಬೆಳೆಸುವುದರಿಂದ ಎಷ್ಟೊಂದು ಫಲ ವನ್ನು ಹೊಂದಬಲ್ಲರೆಂದು ಸೂಚಿತವಾಗುವುದರ ಜೊತೆಗೆ ಮಕ್ಕಳನ್ನು ಸನ್ಮಾರ್ಗ ದಲ್ಲಿ ಪೋಷಿಸುವುದು ಅವರ ಪ್ರಮುಖ ಕರ್ತವ್ಯ ಎಂದೂ ಸೂಚಿತವಾಗುವುದು.

## ದೈನಂದಿನ ಅನುಷ್ಠಾನ ಮತ್ತು ಗೃಹಕೃತ್ಯಗಳು :

ಪತಿವ್ರತಾ ಸ್ತ್ರೀಯು ರಾತ್ರಿಯ ಕೊನೆಯ ಯಾಮದಲ್ಲಿ ಪತಿ ಏಳುವ ಮುಂಚೆಯೇ ಎದ್ದು ವಿಧಿವತ್ತಾಗಿ ಶೌಚದ ಚಟುವಟಿಕೆಯನ್ನು, ದಂತಧಾವನ ವನ್ನೂ ನಡೆಸಬೇಕು.[4] ಬಳಿಕ ಮಂಗಳ ಸ್ನಾನ ಮಾಡಿ ಶುಭ್ರವಾದ ಉಡುಪನ್ನು ತೊಡಬೇಕು. ಆಚಮನ ಮಾಡಿ ಗೋಪಿ ಚಂದನದಿಂದ ಊರ್ಧ್ವಪುಂಡ್ರವನ್ನು ಧರಿಸಬೇಕು. ಅನಂತರ ಕಸ್ತೂರಿ, ಕುಂಕುಮದಿಂದ ಊರ್ಧ್ವಪುಂಡ್ರವನ್ನು ಧರಿಸ ಬೇಕು.[5] ಗುರುಮಂತ್ರವನ್ನು ಜಪಿಸಬೇಕು. ವೈಷ್ಣವರನ್ನೂ, ವಿಷ್ಣುವನ್ನೂ

---

1. ಸ್ವಯಂ ಪರಿಚರಾಮ್ಯೇತಾಂ ಪಾನಾಚ್ಛಾದನಭೋಜನೈಃ । —ಮ.ಭಾರ.ವನ. 233-40

2. ಸ್ತ್ರೀಣಾಂ ಚ ಪತಿದೇವಾನಾಂ ತಚ್ಛುಶ್ರೂಷಾನುಕೂಲತಾ ।
ತದ್ಬಂಧುಷ್ವನುವೃತ್ತಿಶ್ಚ ನಿತ್ಯಂ ತದ್ವ್ರತಧಾರಣಮ್ ॥ —ಭಾಗ. 7-11-25

3. ಅನಹಾರ್ಯಮಾಪ್ತ್ವಯಾಜ್ಞಪ್ತಾ ಕೈಕೆಯ್ಯಾ ಅಪಿ ಸದ್ಗತಿಃ ।
ಸೂತ್ವಾ ತು ಭರತಂ ನೈಷಾ ಗಚ್ಛೇತ ನಿರಯಾನಿತಿ ॥ —ಮ.ಭಾರ.ತಾ.ನಿ. 9-95,96

4. ಉತ್ಥಾಯ ಪಶ್ಚಿಮೇ ಯಾಮೇ ಭರ್ತುಃ ಪೂರ್ವಮತಂದ್ರಿತಾ ।
ಕೃತ್ವಾ ಶೌಚಂ ವಿಧಾನೇನ ದಂತಧಾವನಮಾಚರೇತ್ । —ವೃದ್ಧಹಾರೀತ ಸ್ಮೃತಿ 11-85

○ ಪತ್ಯುಃ ಪೂರ್ವಂ ಸಮುತ್ಥಾಯ....... —ವೇದ ಸ್ಮೃತಿ 2-20

5. ಕೃತ್ವಾಥ ಮಂಗಲಸ್ನಾನಂ ಧೃತ್ವಾ ಶುಕ್ಲಾಂಬರಂ ತಥಾ ।
ಆಚಮ್ಯ ಧಾರಯೇದೂರ್ಧ್ವಪುಂಡ್ರಂ ಶುಭ್ರಂ ಮೃದೈವ ತು ।
ಚಂದನೇನಾಪಿ ಕಸ್ತೂರ್ಯಾ ಕುಂಕುಮೇನಾಪಿ ವಾಽರಸತಿ ।
—ವೃದ್ಧಹಾರೀತ ಸ್ಮೃತಿ 11-87

ನಮಸ್ಕರಿಸಬೇಕು. ತನ್ನನ್ನು ಅಲಂಕರಿಸಿಕೊಂಡು ಪರಮಾತ್ಮನನ್ನು ಧ್ಯಾನಮಾಡಬೇಕು.[1] ಪ್ರತಿನಿತ್ಯವೂ ಪರಮಾತ್ಮನ ಯಜ್ಞಕ್ಕಾಗಿ ಮನೆಯ ಪಾತ್ರೆಗಳನ್ನು ತೊಳೆಯಬೇಕು.[2] ಮನೆಯನ್ನು ಗುಡಿಸಿ, ಗೋಮಯದಿಂದ ಸಾರಿಸಿ, ಬಳಿಕ ರಂಗವಲ್ಲ್ಯಾದಿಗಳಿಂದ ಅಲಂಕರಿಸಬೇಕು.[3] ಹೀಗೆ ಪೂರ್ವಾಹ್ನದ ಕೃತ್ಯಗಳನ್ನು ಪೂರೈಸಿ ತನ್ನ ಪತಿಗೆ ಗುರುಹಿರಿಯರಿಗೆ ನಮಸ್ಕರಿಸಬೇಕು.[4]

ಒಲೆಯಲ್ಲಿ ಬೆಂಕಿಯನ್ನು ಉರಿಸಿ, ಮನೋನಿಗ್ರಹವನ್ನು ಪಡೆದು ಪರಮಾತ್ಮನನ್ನು ಸ್ಮರಿಸಿಕೊಳ್ಳುತ್ತ ಅನ್ನಾದಿಗಳ ಅಡುಗೆಯನ್ನು ನಡೆಸಬೇಕು.[5] ಭಾವದುಷ್ಟ, ಕ್ರಿಯಾದುಷ್ಟ, ಕಾಲದುಷ್ಟ ಹಾಗೂ ಸಂಸರ್ಗದುಷ್ಟವಾದ ಅಡುಗೆಯನ್ನು ನಡೆಸಬಾರದು.[6] ಯಜ್ಞಕ್ಕೆ ಉಪಯೋಗಿಸಲ್ಪಡುವ ಪಾತ್ರೆಗಳ ಮೇಲೆ ಗಂಧದಿಂದ ಅಥವಾ ಅರಸಿನದಿಂದ ಅಥವಾ ಜಲದಿಂದ ಸುದರ್ಶನ ಚಕ್ರದ, ಪಾಂಚಜನ್ಯ ಶಂಖದ ಚಿಹ್ನೆಯನ್ನು ಬರೆಯಬೇಕು.[7] ಭಗವಂತನ ಸಮರ್ಪಣೆಗೆ ಇಡುವ ಪಾತ್ರೆಗಳನ್ನು ತೊಳೆದು, ಒಳ್ಳೆಯ ನೀರಿನಿಂದ ತುಂಬಿಸಿ ಆಮೇಲೆ ವಿಶೇಷವಾಗಿ ಭಗವಂತನು ಭೋಜನವನ್ನು ಸ್ವೀಕರಿಸುವಂತೆ ಮಾಡಬೇಕು.[8] ಆ ಕಾಲದಲ್ಲಿ

---

1. ಜಪ್ತ್ವಾ ಮಂತ್ರಂ ಗುರುಂ ಪಶ್ಚಾದಭಿವಂದ್ಯ ಚ ವೈಷ್ಣವಾನ್ ।
......ಆತ್ಮಾನಂ ಸಮಲಂಕೃತ್ಯ ಚಿಂತಯೇನ್ಮಧುಸೂದನಮ್ ।
—ವೃದ್ಧಹಾರೀತಸ್ಮೃತಿ 11-87, 88

2. ಗೃಹಭಾಂಡಾದಿಕಂ ಸರ್ವಂ ವಾಗ್ಯತಾ ನಿಯತೇಂದ್ರಿಯಾ ।
ಸಂಶೋಧಯೇತ್ ಪ್ರತಿದಿನಂ ಯಜ್ಞಾರ್ಥಂ ಪರಮಾತ್ಮನಃ ।
—ವೃದ್ಧಹಾರೀತಸ್ಮೃತಿ 11-89

3. ಮಾರ್ಜಯಿತ್ವಾ ಗೃಹಂ ಪಶ್ಚಾದ್ ಗೋಮಯೇನಾನುಲಿಪ್ಯ ಚ ।
ರಂಗವಲ್ಲ್ಯಾದಿಭಿಃ ಪಶ್ಚಾದಲಂಕೃತ್ಯ ಸಮಂತತಃ । —ವೃದ್ಧಹಾರೀತ ಸ್ಮೃತಿ 11-90

4. ಕೃತಪೂರ್ವಾಹ್ಣಕಾರ್ಯೋಽಯಂ ಸ್ವಗುರಾವಭಿವಾದಯೇತ್ —ವೇದ. ಸ್ಮೃತಿ 2-25

5. ಪ್ರದೀಪ್ಯಾಗ್ನಿಂ ತತೋಽನ್ನಾದ್ಯಂ ಪಚ್ಯಾನ್ನಿಯತಮಾನಸಃ ।
ಚಿಂತಯೇತ್ ಪರಮಾತ್ಮಾನಂ ಜಪನ್ಮಂತ್ರದ್ವಯಂ ತಥಾ ।
—ವೃದ್ಧಹಾರೀತಸ್ಮೃತಿ 11-120

6. ಭಾವದುಷ್ಟಂ, ಕ್ರಿಯಾದುಷ್ಟಂ ಕಾಲದುಷ್ಟಂ ತಥೈವ ಚ ।
ಸಂಸರ್ಗದುಷ್ಟಂ ಚ ತಥಾ ವರ್ಜಯೇದ್ಯಜ್ಞಕರ್ಮಣಿ । —ವೃದ್ಧಹಾರೀತಸ್ಮೃತಿ 11-120

7. ಗಂಧೇನ ವಾ ಹರಿದ್ರೇಣ ಜಲೇನಾಪ್ಯಥವಾ ಲಿಖೇತ್ ।
ಸುದರ್ಶನಂ ಪಾಂಚಜನ್ಯಂ ಭಾಂಡಾನಾಂ ಯಜ್ಞಯೋಗಿನಾಮ್ ।
—ವೃದ್ಧ. ಹಾರೀತ. ಸ್ಮೃತಿ 11-138

8. ಕ್ಷಾಲಯಿತ್ವಾಽಥ ದೇವಸ್ಯ ಭಾಜನಾನಿ ಶುಭೈರ್ಜಲೈಃ ।
ಅಭಿಪೂರ್ಯ ತತೋ ಮದ್ಯಾದ್ ಭೋಜಯೇಚ್ಚ ವಿಶೇಷತಃ । —ವೃದ್ಧ.ಸ್ಮೃತಿ 11-140

ಬಂದಿರುವ ಗೆಳೆಯರು, ಸಂಬಂಧಿಗಳು, ಬಂಧುಗಳು, ಬಾಲಕರು—ಇವರು ಭೋಜನವನ್ನು ಸ್ವೀಕರಿಸುವಂತೆ ಮಾಡಬೇಕು. ಆ ಮೇಲೆ ತನ್ನ ಪತಿಗೆ ಭೋಜನವನ್ನು ನೀಡಬೇಕು.[1] ಬಳಿಕ ತಾನು ಸಂತುಷ್ಟಳಾಗಿದ್ದುಕೊಂಡು ಪತಿ ಊಟ ಮಾಡಿ ಉಳಿದ ಆಹಾರವನ್ನು ಸ್ವೀಕರಿಸಬೇಕು.[2] ಪ್ರತಿನಿತ್ಯ ತಲೆಸ್ನಾನ ಮಾಡದಿರುವುದು, ಪತಿ ಊಟ ಮಾಡಿದ ಮೇಲೆ ಅವನ ಎಂಜಲನ್ನು ಸ್ವೀಕರಿಸುವುದು ಹಾಗೆಯೇ ದ್ವಾದಶೀ ದಿನ ಗುರು ಹಿರಿಯರಿಗೆ ಅತಿಥಿ ಅಭ್ಯಾತರಿಗೆ ಭೋಜನ ನೀಡಿ ಕೊನೆಗೆ ತಾನು ಭೋಜನ ಮಾಡಬೇಕಾದ ಕಾರಣ ದ್ವಾದಶೀ ತಿಥಿ ಕೊನೆಗೊಳ್ಳುವ ಮುಂಚೆಯೇ ಪಾರಣವನ್ನು ನಡೆಸದಿರುವುದು—ಪತಿವ್ರತೆಯ ಪಾಲಿಗೆ ದೋಷವೆನಿಸುವುದಿಲ್ಲ.[3] ಸ್ತ್ರೀ ಅತಿಯಾಗಿ ವ್ಯಯ ಮಾಡುವ ಸ್ವಭಾವದವಳಾಗಬಾರದು. ಧರ್ಮ ಮತ್ತು ಅರ್ಥ ಪುರುಷಾರ್ಥಗಳಿಗೆ ವಿರುದ್ಧವಾಗಿ ನಡೆದುಕೊಳ್ಳಬಾರದು.[4] ಅವಳು ಬೆಳಿಗ್ಗೆ ಎಲ್ಲರಿಗಿಂತ ಮೊದಲು ಏಳಬೇಕಾದಂತೆ ರಾತ್ರಿ ಎಲ್ಲರೂ ಮಲಗಿದ ಬಳಿಕ ಮಲಗಬೇಕು.[5]

## ಪರೋಕ್ಷವಾಗಿ ಸಂಬಂಧಿಸುವ ನಿಯಮಗಳು :

ಹೀಗೆ ಪಾತಿವ್ರತ್ಯಕ್ಕೆ ನೇರವಾಗಿ ಸಂಬಂಧಿಸುವ ನಿಯಮಗಳೊಂದಿಗೆ, ಪರೋಕ್ಷವಾಗಿ ಸಂಬಂಧಿಸುವ ಕೆಲವು ನಿಯಮಗಳನ್ನೂ ಸ್ತ್ರೀಯು ಪಾಲಿಸಬೇಕು. ಪತಿವ್ರತೆಯಾದವಳು ಅರಸಿನ, ಕುಂಕುಮ, ಸಿಂಧೂರ, ಕಾಡಿಗೆ, ವೀಳ್ಯದೆಲೆ, ಮಾಂಗಲ್ಯಾಭರಣ, ಕೂದಲಿನ ಸಂಸ್ಕಾರ, ಸೂಡಿಯ, ಕೈಯ ಹಾಗೂ ಕಿವಿಯ ಆಭರಣ ಮುಂತಾದುವನ್ನು ದೂಷಿಸಬಾರದು. ಇವುಗಳ ದೂಷಣೆ

---

1. ಭೋಜಯೇದಾಗತಾನ್ ಕಾಲೇ ಸಖಿ ಸಂಬಂಧಿಬಾಂಧವಾನ್ ।
ಬಾಲಾನ್ ವೃದ್ಧಾನ್ ಭೋಜಯಿತ್ವಾ ಭರ್ತಾರಂ ಭೋಜಯೇತ್ತತಃ
—ವೃ. ಹಾ. ಸ್ಮೃತಿ 11-141

2. ಸ್ವಯಂ ಚ ಹೃಷ್ಟಾ ತತೋಽಶ್ನೀಯಾದ್ ಭರ್ತುರ್ಭುಕ್ತಾವಶೇಷಿತಮ್
—ವೃ. ಹಾ. ಸ್ಮೃತಿ 11-142

3. ಅಶಿರಸ್ಕಂ ತು ಯತ್ ಸ್ನಾನಂ ಪತ್ಯುರುಚ್ಛಿಷ್ಟಭೋಜನಮ್ ।
ದ್ವಾದಶೀಲಂಘನಂ ಚೈವ ಕುಲಸ್ತ್ರೀಣಾಂ ನ ದೋಷಭಾಕ್ ॥ —ಬ್ರಹ್ಮವೈವರ್ತ ಅ. 27

4. ನ ಚಾತಿವ್ಯಯಶೀಲಾ ಸ್ಯಾನ್ನ ಧರ್ಮಾರ್ಥವಿರೋಧಿನೀ । —ವೇದ. ಸ್ಮೃತಿ 2-34

5. ಪ್ರಥಮಂ ಪ್ರತಿಬುದ್ಧ್ಯಾಮಿ ಚರಮಂ ಸಂವಿಶಾಮಿ ಚ । —ಮ.ಭಾರ.ವನ. 233-58

ಪತಿಯ ಆಯುಷ್ಯದ ಕ್ಷಯಕಾರಕವೆನಿಸಿದೆ.[1] ಕೆಟ್ಟ ಸ್ತ್ರೀಯ ಜೊತೆಗೆ ಸ್ನೇಹವನ್ನು ಬೆಳೆಸಬಾರದು.[2] ಎಲ್ಲೂ ಯಾವಾಗಲೂ ಒಬ್ಬಂಟಿಗಳಾಗಿಯೇ ಇರಬಾರದು. ವಿವಸ್ತ್ರಳಾಗಿ ಮೀಯಬಾರದು.[3] ವರಳಿನ ಮೇಲೆ, ವನಕೆಯ ಮೇಲೆ, ಕಸಬರಿಕೆಯ ಮೇಲೆ, ಬೀಸುವ ಅಥವಾ ರುಬ್ಬುವ ಕಲ್ಲಿನ ಮೇಲೆ, ಚಕ್ರದ ಮೇಲೆ ಅಥವಾ ಹೊಸ್ತಿಲ ಮೇಲೆ ಪತಿವ್ರತೆ ಎಂದೂ ಕುಳಿತುಕೊಳ್ಳಬಾರದು.[4] ಬಾಗಿಲಲ್ಲಿ ಹೆಚ್ಚು ಹೊತ್ತು ಕುಳಿತುಕೊಳ್ಳಬಾರದು.[5] ಮತ್ತೊಬ್ಬರ ಮನೆಯಯಲ್ಲಿ ಇರಬೇಕೆಂಬ ಅಭಿರುಚಿಗೆ ಒಳಗಾಗಬಾರದು. ಜಗಳಗಂಟಿಯಾಗಿರಬಾರದು.[6]

ಪೈಶಾಚಿಕರು, ಯಕ್ಷರು, ಶಾಕ್ತರು, ಲಿಂಗಧಾರಿಗಳು, ದ್ವಾದಶೀವ್ರತವನ್ನು ಆಚರಿಸದವರು—ಮುಂತಾದವರ ಜೊತೆಗೆ ಸಂಭಾಷಣೆ ಮುಂತಾದವನ್ನು ನಡೆಸಬಾರದು.[7] ಶೈವ, ಬೌದ್ಧ, ಸ್ಕಾಂದ, ಶಾಕ್ತ — ಈ ಸಂಪ್ರದಾಯಗಳಿಗೆ ಸಂಬಂಧಿಸುವ ಸ್ಥಾನಗಳಿಗೆ ಎಂದೂ ಹೋಗಬಾರದು. ಆ ಸ್ಥಾನಗಳ ಸಮೀಪದ ಜಲ ಪುಷ್ಪ ಫಲಾದಿಗಳನ್ನು ದೂರವಿರಿಸಬೇಕು.[8] ಇತರ ದೇವತೆಗಳ

---

1. ಹರಿದ್ರಾಂ ಕುಂಕುಮಂ ಚೈವ ಸಿಂದೂರಂ ಕಜ್ಜಲಂ ತಥಾ ।
ಕೂರ್ಪಾಸಕಂ ಚ ತಾಂಬೂಲಂ ಮಾಂಗಲ್ಯಾಭರಣಂ ಶುಭಮ್ ।
ಕೇಶಸಂಸ್ಕಾರ ಕಬರೀಕರಕರ್ಣ ವಿಭೂಷಣಮ್ ।
ಭರ್ತುರಾಯುಷ್ಯಮಿಚ್ಛಂತೀ ದೂಷಯೇನ್ನ ಪತಿವ್ರತಾ —ಸ್ಕಾಂದ-ಕಾಶೀಖಂಡ 27
2. ನ ಚ ದುರ್ಭಗಯಾ ಕ್ವಾಪಿ ಸಖಿತ್ವಂ ಕುರುತೇ ಕ್ವಚಿತ್ । —ಸ್ಕಾಂದ-ಕಾಶೀಖಂಡ 28
3. ನೈಕಾಕಿನೀ ಕ್ವಚಿದ್ ಭೂಯಾನ್ನ ನಗ್ನಾ ಸ್ನಾತಿ ಚ ಕ್ವಚಿತ್ ।
—ಸ್ಕಾಂದ-ಕಾಶೀಖಂಡ 29
4. ನೋಲೂಖಲೇ ಚ ಮುಸಲೇ ನ ವರ್ಧನ್ಯಾಂ ದೃಷದ್ಯಪಿ ।
ನ ಯಂತ್ರಕೇ ನ ದೇಹಲ್ಯಾಂ ಸತೀ ಚೋಪವಿಶೇತ್ ಕ್ವಚಿತ್ ।
—ಸ್ಕಾಂದ-ಕಾಶೀಖಂಡ 30
5. ನ ಚಿರಂ ತಿಷ್ಠತಿ ದ್ವಾರಿ....... —ಸ್ಕಾಂದ-ಕಾಶೀಖಂಡ 16
6. ಪರವೇಶ್ಮರುಚಿರ್ನ ಸ್ಯಾನ್ನ ಸ್ಯಾತ್ ಕಲಹಶಾಲಿನೀ ।
ನ ಚ ತಿಷ್ಠೇತ್ ತಥಾ ದ್ವಾರಿ ನ ಚ ರಾಮ ಗವಾಕ್ಷಕೇ । -ವಿ.ಧರ್ಮೋತ್ತರ-2-34-38
7. ಪೈಶಾಚಿಕಾನಾಂ ಯಕ್ಷಾಣಾಂ ಶಾಕ್ತಾನಾಂ ಲಿಂಗಧಾರಿಣಾಮ್ ।
ದ್ವಾದಶೀವಿಮುಖಾನಾಂ ಚ ಸಂಲಾಪಾದಿ ವಿವರ್ಜಯೇತ್ ।
—ವೃ. ಹಾ. ಸ್ಮೃತಿ 11-143
8. ಶೈವಬೌದ್ಧಸ್ಕಾಂದ ಶಾಕ್ತಸ್ಥಾನಾನಿ ನ ವಿಶೇತ್ ಕ್ವಚಿತ್ ।
ವರ್ಜಯೇತ್ತತ್ಸಮೀಪಸ್ಥಂ ಜಲಪುಷ್ಪ ಫಲಾದಿ ಚ । -ವೃ.ಹಾ.ಸ್ಮೃತಿ 11-143, 144

ಉತ್ಸವಾದಿಗಳನ್ನು ನೋಡಬಾರದು.[1] ಸ್ವಾತಂತ್ರ್ಯ ದೃಷ್ಟಿಯಿಂದ ಅನ್ಯ ದೇವತೆಗಳ ಸ್ತುತಿಯನ್ನು ನಡೆಸಬಾರದು. ಹಾಗೆ ನಡೆಸಲಾಗುವ ಸ್ತುತಿಯನ್ನು ಕೇಳಬಾರದು ಕೂಡಾ.[2] ಇತರ ದೇವತೆಗಳ ಚಿಹ್ನೆಗಳಿಂದ ಗುರುತಿಸಲ್ಪಟ್ಟ ಉಡುಪು, ಭೂಷಣ, ಆಸನ, ಪಾತ್ರ ಮುಂತಾದವುಗಳನ್ನು ದೂರೀಕರಿಸಬೇಕು.[3] ಪುಣ್ಯಕ್ಷೇತ್ರದ ತೀರ್ಥ ಪ್ರಸಾದಾದಿಗಳನ್ನು ಅವೈಷ್ಣವನ ಮೂಲಕ ಸ್ವೀಕರಿಸ ಬಾರದು.[4]

## ರಜಸ್ವಲಾ ಧರ್ಮ:

ದೇವೇಂದ್ರನು ವಿಶ್ವರೂಪಾಚಾರ್ಯರನ್ನು ಸಂಹರಿಸಿದ ಪ್ರಯುಕ್ತ ಸಂಭವಿಸಿದ ಬ್ರಹ್ಮಹತ್ಯಾ ದೋಷದ ಒಂದು ಭಾಗವನ್ನು ಸ್ತ್ರೀಯರಿಗೆ ವಿತರಿಸಿರುವನು. ಆ ಪಾಪದ ಫಲವಾಗಿಯೇ ಸ್ತ್ರೀಯರಲ್ಲಿ ಪ್ರತಿ ತಿಂಗಳು ರಜಸ್ಸು ಕಾಣಿಸಿಕೊಳ್ಳುವುದೆಂದು ಶಾಸ್ತ್ರಕಾರರ ಆಶಯ.[5] ಸ್ತ್ರೀಯು ರಜಸ್ಸು ಕಾಣಿಸಿಕೊಳ್ಳುವ ಮೊದಲನೇ ದಿನ 'ಚಾಂಡಾಲೀ' ಎನಿಸುವಳೆಂದೂ, ಎರಡನೇ ದಿನ 'ಬ್ರಹ್ಮಘಾತಿನೀ' ಎನಿಸುವಳೆಂದೂ, ಮೂರನೇ ದಿನ 'ರಜಕೀ' (ಮಡಿವಾಳ ಸ್ತ್ರೀ) ಎನಿಸುವಳೆಂದೂ ಆಕೆಯ

---

1. ನ ನಿರೀಕ್ಷೇತ ದೇವಾನಾಮುತ್ಸವಾದಿ ಕದಾಚನ । —ವೃ.ಹಾ.ಸ್ಮೃತಿ 11-144

2. ಸ್ತುತಿಂ ವಾಽಪ್ಯನ್ಯದೇವಾನಾಂ ನ ಕುರ್ಯಾಚ್ಛೃಣುಯಾನ್ನ ಚ ।
—ವೃ. ಹಾ. ಸ್ಮೃತಿ 11-145

3. ಅನ್ಯಚಿಹ್ನಾಂಕಿತಂ ವಸ್ತ್ರಂ ಭೂಷಣಾಸನಭಾಜನಮ್ ।
ವೃಕ್ಷಂ ಪಶುಂ ಕೂಪಗೃಹಾನ್ ಭಾಂಡಂ ಚೈವ ವಿವರ್ಜಯೇತ್
—ವೃ. ಹಾ. ಸ್ಮೃತಿ. 11-147

4. ಅವೈಷ್ಣವಸ್ಯ ಹಸ್ತಾತ್ತು ದಿವ್ಯದೇಶಾದುಪಾಗತಮ್ ।
ಹರೇಃ ಪ್ರಸಾದತೀರ್ಥಾದ್ಯಂ ಯತ್ನೇನ ಪರಿವರ್ಜಯೇತ್
—ವೃ. ಹಾ. ಸ್ಮೃತಿ. 11-148

5. ತಾಃ ಪ್ರತಿಜಗೃಹುಸ್ತೃತೀಯಂ ಭ್ರೂಣಹತ್ಯಾಯಾಃ ।
ಸೈಷಾ ಭ್ರೂಣಹತ್ಯಾ ಮಾಸಿ ಮಾಸ್ಯಾವಿರ್ಭವತಿ । —ವಸಿಷ್ಠಸ್ಮೃತಿ 5-9
ರಜೋರೂಪೇಣ ತಾಸ್ವಂಹೋ ಮಾಸಿ ಮಾಸಿ ಪ್ರದೃಶ್ಯತೇ । —ಭಾಗ. 6-9-9

ಮೂರು ದಿನಗಳ ಅಶುದ್ಧಿಯಲ್ಲಿ ತಾರತಮ್ಯ ಇದೆ – ಎಂದು ಸೂಚಿಸಿ ನಾಲ್ಕನೇ ದಿನ ಶುದ್ಧಳಾಗುವಳೆಂದು ತಿಳಿಸಲಾಗಿದೆ.[1] ಹೀಗೆ ಪ್ರತಿ ತಿಂಗಳು ರಜಸ್ಸಿನ ಸ್ರಾವದಿಂದಾಗಿ ಸ್ತ್ರೀಯರ ದುರಿತಗಳೆಲ್ಲ ದೂರವಾಗಿ ಅವರು ಪವಿತ್ರರೆನಿಸಿರುವರು.[2] ಮೂರು ರಾತ್ರಿಗಳು ಕಳೆದ ಬಳಿಕ ಅಂದರೆ ನಾಲ್ಕನೇ ದಿನ ಸೂರ್ಯೋದಯವಾದ ಬಳಿಕ 'ಸಚ್ಚೈಲ' ಸ್ನಾನ ಮಾಡಬೇಕು.

ಸ್ನಾನ ಮಾಡಿ ಪತಿಯ ಮುಖವನ್ನು ನೋಡಿದ ಬಳಿಕವೇ ಆಕೆ ಶುದ್ಧಳಾಗುವಳು. ಅಥವಾ ಮನಸ್ಸಿನಲ್ಲಿ ಪತಿಯನ್ನು ಧ್ಯಾನಮಾಡಿಕೊಂಡು ಸೂರ್ಯನನ್ನು ಕಾಣಬೇಕು. ಹೀಗೆ ಶೌಚವನ್ನು ಸಂಪಾದಿಸಿಕೊಂಡು ಹಿಂದಿನಂತೆ ಕರ್ಮಗಳನ್ನು ನಡೆಸಬೇಕು.[3] ರಜಸ್ವಲೆಯಾದ ಸ್ತ್ರೀ ನಾಲ್ಕನೇ ದಿನ ಮಿಂದು ತನ್ನ ಪತಿಗೆ ಸಂಬಂಧಿಸುವ ಕಾರ್ಯಗಳನ್ನು ನಡೆಸಲು ಶುದ್ಧಳೆನಿಸುವಳು. ಆದರೆ ದೇವತೆಗಳ, ಪಿತೃಗಳ ಕರ್ಮಗಳನ್ನು ನಡೆಸಲು ಐದನೆಯ ದಿನದ ಸ್ನಾನದ ಬಳಿಕವೇ ಅರ್ಹಳೆನಿಸುವಳು.[4] ಸ್ತ್ರೀಯರಿಗೆ ನಾಲ್ಕು ದಿನಗಳ ಬಳಿಕವೂ ರೋಗದಿಂದಾಗಿ ರಜಸ್ಸಿನ ಸ್ರಾವ ಆಗುತ್ತಿದ್ದಲ್ಲಿ, ಆ ಸ್ರಾವವು ಅಸಹಜವಾದುದರಿಂದ ರಜಃಸ್ರಾವ ಪ್ರಯುಕ್ತ ಅವರು ಅಶುದ್ಧರೆನಿಸುವುದಿಲ್ಲ. ರಜಸ್ಸಿನ ಸ್ರಾವ ಪೂರ್ಣವಾಗಿ ನಿಲ್ಲುವವರೆಗೆ ತಮ ಎಲ್ಲ ಆಚಾರಗಳನ್ನು, ಗೃಹಕೃತ್ಯಗಳನ್ನು ನಡೆಸಬಾರದು. ರಜಃಸ್ರಾವ

---

○ ಯಜುರ್ವೇದ ಎರಡನೇ ಕಾಂಡ ಐದನೇ ಪ್ರಪಾಠಕದ ಮೊದಲ ವರ್ಗದಲ್ಲಿ ಬಂದಿರುವ ವಿಶ್ವರೂಪ ವಧಾಖ್ಯಾಯಕ್ಕೆ ಮತ್ತು ರಜಸ್ವಲಾವ್ರತ ನಿರೂಪಣೆಯ ಪ್ರಸ್ತಾವದಲ್ಲಿ ರಜಸ್ವಲಾ ಧರ್ಮಾಚರಣೆಯ ಹಿನ್ನೆಲೆ ಹಾಗೂ ವಿವರಣೆ ನೀಡಲ್ಪಟ್ಟಿದೆ.

1. ಪ್ರಥಮೇಽಹನಿ ಚಾಂಡಾಲೀ ದ್ವಿತೀಯೇ ಬ್ರಹ್ಮಘಾತಿನೀ ।
ತೃತೀಯೇ ರಜಕೀ ಪ್ರೋಕ್ತಾ ಚತುರ್ಥೇಽಹನಿ ಶುದ್ಧ್ಯತಿ ॥ —ಆಪಸ್ತಂಬಸ್ಮೃತಿ 7-4

2. ಸ್ತ್ರಿಯಃ ಪವಿತ್ರಮತುಲಂ ನೈತಾ ದುಷ್ಯಂತಿ ಕರ್ಹಿಚಿತ್ ।
ಮಾಸಿ ಮಾಸಿ ರಜೋ ಹ್ಯಾಸಾಂ ದುರಿತಾನ್ಯಪಕರ್ಷತಿ ।
—ಬೌಧಾಯನಸ್ಮೃತಿ (2-2-63)

3. ಸ್ನಾಯೀತ ಸಾ ತ್ರಿರಾತ್ರಾಂತೇ ಸಚೈಲಮುದಿತೇ ರವೌ ।
ವಿಲೋಕ್ಯ ಭರ್ತೃವದನಂ ಶುದ್ಧಾ ಭವತಿ ಧರ್ಮತಃ ।
ಕೃತಶೌಚಾ ಪುನಃ ಕರ್ಮ ಪೂರ್ವವಚ್ಚ ಸಮಾಚರೇತ್ ।
—ವೇದವ್ಯಾಸಸ್ಮೃತಿ 2-40, 41

○ ಸುಸ್ನಾತಾ ಭರ್ತೃವದನಂ ಪಶ್ಯೇದನ್ಯಸ್ಯ ನ ಕ್ವಚಿತ್ ।
ಅಥವಾ ಮನಸಿ ಧ್ಯಾತ್ವಾ ಪತಿಂ ಭಾನುಂ ವಿಲೋಕಯೇತ್ ।
—ಕಾಶೀಖಂಡ-25

4. ಶುದ್ಧಾ ಭರ್ತುಶ್ಚತುರ್ಥೇಽಹ್ನಿ ಸ್ನಾನೇನ ಸ್ತ್ರೀ ರಜಸ್ವಲಾ ।
ದೈವೇ ಕರ್ಮಣಿ ಪಿತ್ರ್ಯೇ ಚ ಪಂಚಮೇಽಹನಿ ಶುದ್ಧ್ಯತಿ । —ಶಂಖಸ್ಮೃತಿ 16-17

ಪೂರ್ಣವಾಗಿ ನಿಂತಿತೆಂದ ಮೇಲೆ ಎಲ್ಲ ಆಚಾರಗಳನ್ನೂ ಗೃಹಕೃತ್ಯಗಳನ್ನೂ ನಡೆಸಬೇಕು. [1]

ಸ್ತ್ರೀಯರು ರಜೋದರ್ಶನ ಆಯಿತೆಂದಾಕ್ಷಣ ಎಲ್ಲವನ್ನೂ ತ್ಯಜಿಸಿ, ಯಾರಿಗೂ ಕಾಣಿಸದಂತೆ ಮನೆಯ ಒಳಗೆ ಇರಬೇಕು. ಒಂದೇ ಬಟ್ಟೆಯನ್ನು ಧರಿಸಿಕೊಂಡವಳಾಗಿ, ಸ್ನಾನ, ಅಲಂಕಾರಾದಿಗಳಿಂದ ರಹಿತಳಾಗಿ ಇರಬೇಕು. ಹೆಚ್ಚು ಮಾತ ನಾಡಬಾರದು. ಭೂಮಿಯ ಮೇಲೆ ಮಲಗಬೇಕು. ಹೀಗೆ ಮೂರೂ ದಿನಗಳನ್ನು ಕಳೆಯಬೇಕು. [2] ಮೂರು ದಿನಗಳ ಕಾಲ ಅಶುಚಿ ಎನಿಸಿರುವ ಅವರು ಸ್ನಾನ ಮಾಡಬಾರದು. ಅಭ್ಯಂಜನ ಮಾಡಬಾರದು. ಅವರು ನೀರಿನಲ್ಲಿ ಅವಗಾಹನ ಸ್ನಾನ ಮಾಡಬಾರದು. ಹಗಲು ನಿದ್ದೆ ಮಾಡಬಾರದು. ಅಗ್ನಿಯನ್ನು ಮುಟ್ಟಬಾರದು. ಗ್ರಹಗಳನ್ನು ನೋಡಬಾರದು. ನಗಾಡಬಾರದು. ಏನನ್ನೂ ಮಾಡಬಾರದು. [3] ದಿನಕ್ಕೆ ಒಂದೇ ಬಾರಿ ಭೋಜನವನ್ನು ಸ್ವೀಕರಿಸಬೇಕು. [4] ತನ್ನ ಮುಖವನ್ನು ತೋರಿಸಬಾರದು. ತನ್ನ ಮಾತನ್ನು ಯಾರಿಗೂ ಕೇಳಿಸಬಾರದು. [5]

ಹೀಗೆ ಸ್ತ್ರೀಯು ರಜಸ್ವಲೆಯಾದಾಗ ಅನೇಕ ನಿಷೇಧಗಳನ್ನು ಪಾಲಿಸಬೇಕು. ವಿಧಿಗಳ ಪಾಲನೆ ಹೇಗೆ 'ಧರ್ಮಾಧ್ಯಕ್ಷ'ನಾದ ಭಗವಂತನ ಪ್ರೀತಿಗಾಗಿ ನಡೆಸಲಾಗುವುದೋ ಹಾಗೆಯೇ ನಿಷೇಧಗಳನ್ನು ಪಾಲಿಸದಿದ್ದರೆ ಅವನಿಗೆ ಅಪ್ರೀತಿಯಾದೀತು.

---

1. ರೋಗೇಣ ಯದ್ರಜಃ ಸ್ತ್ರೀಣಾಮತ್ಯರ್ಥಂ ಹಿ ಪ್ರವರ್ತತೇ ।
ಅಶುದ್ಧಾಸ್ತಾಸ್ತು ನೈವೇಹ ತಾಸಾಂ ವೈಕಾರಿಕೋ ಮದಃ ।
ಸಾಧ್ವಾಚಾರಾ ನ ತಾವತ್ಸ್ಯಾ ರಜೋ ಯಾವತ್ಪ್ರವರ್ತತೇ ।
ವೃತ್ತೇ ರಜಸಿ ಸಾಧ್ವೀ ಸ್ಯಾದ್ಗೃಹಕರ್ಮಣಿ ಚೇಂದ್ರಿಯೇ ॥
— ಆಪಸ್ತಂಬಸ್ಮೃತಿ 7-2, 3
2. ರಜಸೋ ದರ್ಶನಾದ್ದೋಷಾತ್ ಸರ್ವಮೇವ ಪರಿತ್ಯಜೇತ್ ।
ಸರ್ವೈರಲಕ್ಷಿತಾ ಶೀಘ್ರಂ ಲಜ್ಜಿತಾಽಂತರ್ಗೃಹೇ ವಸೇತ್ ।
ಏಕಾಂಬರಾ ಕೃಶಾ ದೀನಾ ಸ್ನಾನಾಲಂಕಾರವರ್ಜಿತಾ ।
ಮೌನಿನ್ಯಧೋಮುಖೀ....ಸ್ವಪೇದ್ಭೂಮಾವಪ್ರಮತ್ತಾ
ಕ್ಷಪೇದೇವಮಹಸ್ತ್ರಯಮ್ । —ವೇದವ್ಯಾಸ ಸ್ಮೃತಿ 2-37... 40
3. ತ್ರಿರಾತ್ರಂ ರಜಸ್ವಲಾಽಶುಚಿರ್ಭವತಿ ಸಾ ನಾಂಜ್ಯಾನ್ನಾಭ್ಯಂಜ್ಯಾ —
ನ್ನಾಪ್ಸು ಸ್ನಾಯಾತ್ ಅಧಃ ಶಯೀತ ದಿವಾ ನ ಸ್ವಪ್ಯಾತ್
ನಾಗ್ನಿಂ ಸ್ಪೃಶೇತ್....ನ ಗ್ರಹಾನ್ನಿರೀಕ್ಷೇತ, ನ ಹಸೇನ್ನ ಕಿಂಚಿದಾ ಚರೇತ್....
— ವಸಿಷ್ಠಸ್ಮೃತಿ 1-7
4. ಏಕಾವಾರಂ ಸಮಶ್ನೀಯಾದ್ರಜಸಾ ಚ ಪರಿಪ್ಲುತಾ । —ವೃ. ಹಾ. ಸ್ಮೃತಿ - 11-211
5. ಸ್ತ್ರೀಧರ್ಮಿಣೀ ತ್ರಿರಾತ್ರಂ ತು ಸ್ವಮುಖಂ ನೈವ ದರ್ಶಯೇತ್ ।
ಸ್ವವಾಕ್ಯಂ ಶ್ರಾವಯೇನ್ನಾಪಿ ಯಾವತ್ ಸ್ನಾತಾ ವಿಶುದ್ಧ್ಯತಿ ॥ —ಕಾಶೀಖಂಡ-24

ಹಾಗಾಗಬಾರದೆಂದು ನಡೆಸಬೇಕಾದದ್ದು.[1] "ಯಾವತ್ತೂ ಭಗವಂತನ ಸ್ಮರಣೆಯನ್ನು ನಡೆಸುತ್ತಲೇ ಇರಬೇಕು"—ಎಂದು ರಾಜನ ಸ್ಥಾನದಲ್ಲಿ ಇರುವ ವಿಧಿಗೆ ಉಳಿದೆಲ್ಲ ವಿಧಿಗಳು ಕಿಂಕರರಂತೆ ಇರುವವಾದರೆ, 'ಭಗವಂತನನ್ನು ಎಂದೂ ಮರೆಯಬಾರದು'—ಎಂದು ರಾಜನ ಸ್ಥಾನದಲ್ಲಿ ಇರುವ ನಿಷೇಧಕ್ಕೆ ಉಳಿದ ನಿಷೇಧಗಳೆಲ್ಲ ಕಿಂಕರರಂತೆ ಇರುವವು. ಅಂದರೆ ಉಳಿದ ನಿಷೇಧಗಳನ್ನು 'ಎಂದೂ ಭಗವಂತನನ್ನು ಮರೆಯಬಾರದು' – ಎಂಬ ಮುಖ್ಯ ನಿಷೇಧಕ್ಕೆ ಪುಷ್ಟಿ ದೊರಕುವಂತೆ ಪಾಲಿಸಬೇಕು.[2] ಹೊರತು 'ಇದು ನಮಗೊಂದು ಅಭಿಶಾಪ. ಯಾರೋ ಎಸಗಿದ ಬ್ರಹ್ಮಹತ್ಯೆಯ ಪಾತಕಕ್ಕಾಗಿ ನಾವು ಶಿಕ್ಷೆಯನ್ನು ಅನುಭವಿಸಬೇಕಾಗಿದೆ...." —ಎಂದು ಅಸಮಾಧಾನಕ್ಕೊಳಗಾಗಿ ಯಾರ್ಯಾರನ್ನೋ ಶಪಿಸುತ್ತ ಖಂಡಿತಾ ರಜಸ್ವಲಾ ಧರ್ಮಗಳನ್ನು ಪಾಲಿಸಬಾರದು

## ವಿಧವಾಧರ್ಮ :

ಪತಿಯು ಮೃತನಾದಲ್ಲಿ, ಪತ್ನಿಯಾದವಳೂ ಅವನ ಜೊತೆಗೆಯೇ ಸಾಗಬೇಕು.[3] ಅರ್ಥಾತ್ ಪತಿಯ ಚಿತೆಗೆ ಏರಿ ತಾನೂ ದೇಹತ್ಯಾಗವನ್ನು ನಡೆಸಬೇಕು.[4] ಎಂದು ಶಾಸ್ತ್ರದಲ್ಲಿ ಅಲ್ಲಲ್ಲಿ ಹೇಳಲಾಗಿದೆ. ಮೃತ ಪತಿಯ ಸಹಗಮನ

---

1. ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಪೋಹ್ಯ ಇತ್ಯಹಮ್
—ಭಾಗ 11-21-42

○ ವಿಧಿಭಾಗೇ ಹರೇಃ ಪೂಜೈವ....ಅಪೋಹೇ ಚ ತದಪ್ರಿಯಮ್ ।
ಉಚ್ಯತೇ ಸರ್ವವೇದೇಷು....... ಆಗಮತಾತ್ಪರ್ಯೇ —(ಭಾಗ. ತಾ. ನಿ.)

2. ಸ್ಮರ್ತವ್ಯಃ ಸತತಂ ವಿಷ್ಣುರ್ವಿಸ್ಮರ್ತವ್ಯೋ ನ ಜಾತುಚಿತ್ ।
ಸರ್ವೇ ವಿಧಿನಿಷೇಧಾಃ ಸ್ಯುರೇತಯೋರೇವ ಕಿಂಕರಾಃ । —ಸದಾಚಾರಸ್ಮೃತಿ-27

3. ಭರ್ತ್ರಾ ಸಹೈವ ಯಾತವ್ಯಾ ದೇಹವಚ್ಛಾಯಯಾ ಸ್ತ್ರಿಯಾ । —ಕಾಶೀಖಂಡ-56

4. ತಸ್ಮಾತ್ ಸರ್ವಪ್ರಯತ್ನೇನ ಸ್ವಪತಿಂ ಸೇವಯೇತ್ ಸದಾ ।
ಕರ್ಮಣಾ ಮನಸಾ ವಾಚಾ ಮೃತೇ ಜೀವತಿ ತದ್ಗತಾ । —ಗರುಡ ಪು. 10-47

ಕ್ಕೆ ಒತ್ತು ಕೊಟ್ಟಿರುವ 'ಗರುಡಪುರಾಣ'ದಲ್ಲಿ ಪತಿಯ ಔರ್ಧ್ವದೇಹಿಕ ಕ್ರಿಯೆಗಳನ್ನು ಶ್ರಾದ್ಧಗಳನ್ನು ನಡೆಸುವ ಅಥವಾ ನಡೆಸಲು ಅನುಕೂಲತೆಗಳನ್ನು ಒದಗಿಸುವ ಸ್ತ್ರೀ ನಿಜವಾಗಿ 'ಸತೀ' ಎನಿಸುವಳೆಂದು ಪ್ರಶಂಸಿಸಲಾಗಿದೆ. ಆಕೆ ಸಹಗಮನ ನಡೆಸದೆ ತನ್ನ ಪತಿಗೆ ಪಾರತ್ರಿಕವಾಗಿ ಸುಖ ದೊರಕಲೆಂದು ಅವನ ಉಪಕಾರಕ್ಕಾಗಿ ಬದುಕಿರುವಳು. ಅವಳ ಜೀವನ ಹೀಗೆ ಮೃತನಾದ ಪತಿಯ ಸೇವೆಗೆ ಮೀಸಲಾಗಿರುವುದರಿಂದ ಸಾರ್ಥಕವೆನಿಸಿದೆ—ಎಂದು ಅಭಿನಂದಿಸಲಾಗಿದೆ. 1

ಪತಿಯನ್ನು ಕಳಕೊಂಡ ಸ್ತ್ರೀ ತನ್ನ ಚಾರಿತ್ರ್ಯ ಕೆಡದಂತೆ ಜಾಗರೂಕಳಾಗಿದ್ದಿರಬೇಕು. 2 ಬ್ರಹ್ಮಚರ್ಯ ವ್ರತವನ್ನು ಧರಿಸಬೇಕು. 3 ಬ್ರಹ್ಮಚರ್ಯ ವ್ರತದ ಅಂಗವಾಗಿ ಕೂದಲುಗಳನ್ನು ಅಲಂಕರಿಸುವುದು, ತಾಂಬೂಲ, ಗಂಧ, ಪುಷ್ಪಾದಿಗಳ ಸೇವನೆ, ಆಭರಣವನ್ನು, ಬಣ್ಣದ ಬಟ್ಟೆಯನ್ನು ತೊಡುವುದು, ಕಂಚಿನ ಬಟ್ಟಲಲ್ಲಿ ಭೋಜನ, ಕಣ್ಣುಗಳಿಗೆ ಕಾಡಿಗೆ ಹಚ್ಚಿಕೊಳ್ಳುವುದು—ಇವೆಲ್ಲವನ್ನೂ ಸರ್ವದಾ ತ್ಯಜಿಸಬೇಕು. 4 ವಿಧವಾ ಸ್ತ್ರೀ ಸೂಡಿ ಹಾಕಿ ಅಲಂಕರಿಸಿಕೊಂಡಳೆಂದರೆ ಆದರಿಂದ ಅವಳ ಪತಿ ಬಂಧನಕ್ಕೊಳಗಾಗಬೇಕಾಗುವುದು. ಹೀಗೆ ಕೂದಲನ್ನು ಅಲಂಕರಿಸಿಕೊಳ್ಳಬಾರದೆಂಬ ದೃಷ್ಟಿಯಿಂದಲೇ ತಲೆಕೂದಲನ್ನು ಬೋಳಿಸಬೇಕೆಂದು

---

1. ಸಂಪರೇತಸ್ಯ ಯಾ ಪತ್ಯುಃ ಕುರುತೇ ಚೌರ್ಧ್ವದೇಹಿಕಮ್ ।
ಕ್ಷಯಾಹಂ ಪಾಕ್ಷಿಕಶ್ರಾದ್ಧಂ ಸಾ ಸತೀ ಹ್ಯುಚ್ಯತೇ ಮಯಾ ।
ಉಪಕಾರಾಯ ಸಾ ಭರ್ತುರ್ಜೀವತ್ಯೇಷಾ ಪತಿವ್ರತಾ ।
ಜೀವಿತಂ ಸಫಲಂ ತಸ್ಯಾಃ ಯಾ ಮೃತಂ ಸ್ವಾಮಿನಂ ಭಜೇತ್ ।
—ಗರುಡ ಪು. 13-71, 72

2. ಅನುಯಾತಿ ನ ಭರ್ತಾರಂ ಯದಿ ದೈವಾತ್ ಕಥಂಚನ ।
ತತ್ರಾಪಿ ಶೀಲಂ ಸಂರಕ್ಷ್ಯಂ ಶೀಲಭಂಗಾತ್ ಪತತ್ಯಧಃ । —ಕಾಶೀಖಂಡ-74

3. ಬ್ರಹ್ಮಚರ್ಯವ್ರತಂ ಕುರ್ಯಾದ್ಯಾವಜ್ಜೀವಮತಂದ್ರಿತಾ । —ವೃ. ಹಾ. ಸ್ಮೃತಿ 11-25
○ ಮೃತೇ ಭರ್ತರಿ ಸಾಧ್ವೀ ಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ ।
ಸ್ವರ್ಗಂ ಗಚ್ಛತ್ಯಪುತ್ರಾಪಿ ಯಥಾ ತೇ ಬ್ರಹ್ಮಚಾರಿಣಃ ।
—ವಿ. ಧರ್ಮೋತ್ತರ 2-34-15

4. ಕೇಶರಂಜನ ತಾಂಬೂಲ ಗಂಧ ಪುಷ್ಪಾದಿಸೇವನಮ್ ।
ಭೂಷಣಂ ರಂಗವಸ್ತ್ರಂ ಚ ಕಾಂಸ್ಯಪಾತ್ರೇಷು ಭೋಜನಮ್ ।
ದ್ವಿವಾರ ಭೋಜನಂ ಚಾಕ್ಷ್ಣೋರಂಜನಂ ವರ್ಜಯೇತ್ ಸದಾ ।
—ವೃದ್ಧ ಹಾರೀತ ಸ್ಮೃತಿ 11-205, 206
○ ಗಂಧದ್ರವ್ಯಸ್ಯ ಸಂಭೋಗೋ ನೈವ ಕಾರ್ಯಸ್ತಥಾ ಕ್ವಚಿತ್ । —ಕಾಶೀಖಂಡ-84
○ ಏಕಾಹಾರಸ್ಸದಾ ಕಾರ್ಯೋ ನ ದ್ವಿತೀಯಃ ಕದಾಚನ । —ಕಾಶೀಖಂಡ-78

ವಿಧಿಸಿರುವುದು.[1] ಹಾಸಿಗೆಯ ಮೇಲೆ ವಿಧವಾ ಸ್ತ್ರೀ ಮಲಗಿದಳೆಂದರೆ ಪತಿ ಪತಿತನಾಗುವನು. ಆದ್ದರಿಂದ ಪತಿಗೆ ಸುಖ ಆಗಲೆಂದು ಬಯಸುವವಳು ಭೂಮಿಯ ಮೇಲೆಯೇ ಮಲಗಬೇಕು.[2] ವಿಧವೆ ಅಭ್ಯಂಜನವನ್ನು ಎಂದೂ ನಡೆಸಬಾರದು[3] ಯಾವಾಗಲೂ ಧ್ಯಾನ ನಡೆಸುತ್ತ ಸಜ್ಜನರ ಸಹವಾಸವನ್ನು ನಡೆಸುತ್ತಿರಬೇಕು.[4] ಮಿಂದು ಶುಭ್ರವಾದ, ಬೆಳ್ಳಗಿನ ಉಡುಪನ್ನು ತೊಟ್ಟವಳಾಗಿ, ಇಂದ್ರಿಯ ನಿಗ್ರಹವುಳ್ಳವಳಾಗಿ, ಸಿಟ್ಟನ್ನು ಗೆದ್ದವಳಾಗಿ, ಕಪಟ, ಮಾಯೆಗಳಿಲ್ಲದವಳಾಗಿ, ತೂಕಡಿಕೆ, ಆಲಸ್ಯದಿಂದ ದೂರವಾದವಳಾಗಿ, ಶುದ್ಧಳಾಗಿ, ಶುಭಾಚಾರವುಳ್ಳವಳಾಗಿ ಯಾವಾಗಲೂ ಶ್ರೀಹರಿಯನ್ನು ಪೂಜಿಸುತ್ತಿರಬೇಕು.[5] ಪತ್ಯಂತರ್ಗತನಾದ ಭಗವಂತನನ್ನೇ ಧ್ಯಾನಿಸಬೇಕು[6] ತನಗೆ ಲೋಕದಲ್ಲಿ ಯಾವುದು ಅತ್ಯಂತ ಇಷ್ಟವಾದದ್ದಿದೆಯೋ ತನ್ನ ಪತಿಗೆ ಇಷ್ಟವಾದದ್ದಿದೆಯೋ ಅದನ್ನು ಯೋಗ್ಯ ವ್ಯಕ್ತಿಗೆ ತನ್ನ ಪತಿ ಪ್ರೀತನಾಗಲಿ ಎಂಬ ಉದ್ದೇಶದಿಂದ ದಾನ ಕೊಡಬೇಕು.[7] ಹೀಗೆ ಆಹಾರಾದಿಗಳನ್ನು ನಿಯತವಾಗಿ ಸ್ವೀಕರಿಸುವ, ಒಳ್ಳೆಯ ವ್ರತಗಳಲ್ಲಿ ತೊಡಗಿರುವ ವಿಧವಾ ಸ್ತ್ರೀ ತನ್ನ ಪತಿಯ ಜೊತೆಗೆ ಒಳ್ಳೆಯ ಲೋಕಗಳನ್ನು ಹೊಂದುವಳು.[8] ಹೀಗೆ ಧರ್ಮಗಳಲ್ಲಿ ತೊಡಗಿರುವವಳು ವಿಧವೆ

---

1. ವಿಧವಾಕಬರೀಬಂಧೋ ಭರ್ತುರ್ಬಂಧಾಯ ಜಾಯತೇ ।
ಶಿರಸೋ ವಪನಂ ತಸ್ಮಾತ್ ಕಾರ್ಯಂ ವಿಧವಯಾ ಸದಾ । —ಕಾಶೀಖಂಡ-77

2. ಪರ್ಯಂಕಶಾಯಿನೀ ನಾರೀ ವಿಧವಾ ಪಾತಯೇತ್ ಪತಿಮ್ ।
ತಸ್ಮಾದ್ ಭೂಶಯನಂ ಕಾರ್ಯಂ ಪತಿಸೌಖ್ಯಪರೀಪ್ಸಯಾ । —ಕಾಶೀಖಂಡ-81
○ ಕ್ಷಿತಿಶಾಯೀ ಭವೇದ್ರಾತ್ರೌ ಶುಚೌ ದೇಶೇ ಕುಶೋತ್ತರೇ । -ವೃ.ಹಾ.ಸ್ಮೃತಿ 11-209

3. ನೈವಾಂಗೋದ್ವರ್ತನಂ ಕಾರ್ಯಂ ಸ್ತ್ರಿಯಾ ವಿಧವಯಾ ಕ್ವಚಿತ್ । —ಕಾಶೀಖಂಡ-82

4. ಧ್ಯಾನಯೋಗಪರಾ ನಿತ್ಯಂ ಸತಾಂ ಸಂಗೇ ವ್ಯವಸ್ಥಿತಾ —ವೃ.ಹಾ.ಸ್ಮೃತಿ 11-209

5. ಸ್ನಾತ್ವಾ ಶುಕ್ಲಾಂಬರಧರಾ ಜಿತಕ್ರೋಧಾ ಜಿತೇಂದ್ರಿಯಾ ।
ನ ಕಲ್ಕಕುಹಕಾ ಸಾಧ್ವೀ ತಂದ್ರಾಲಸ್ಯವಿವರ್ಜಿತಾ ।
ಸುನಿರ್ಮಲಾ ಶುಭಾಚಾರಾ ನಿತ್ಯಂ ಸಂಪೂಜಯೇದ್ಧರಿಮ್ । -ವೃ.ಹಾ.ಸ್ಮೃ. 11-208

6. ವಿಷ್ಣೋರ್ನಮಸ್ಕ್ರಿಯಾ ಕಾರ್ಯಾ ಪತಿಬುದ್ಧ್ಯಾ ನ ಚಾನ್ಯಥಾ ।
ಪತಿಮೇವ ಸದಾ ಧ್ಯಾಯೇದ್ವಿಷ್ಣುರೂಪಧರಂ ಪರಮ್ —ಕಾಶೀಖಂಡ 85, 86

7. ಯದ್ಯದಿಷ್ಟತಮಂ ಲೋಕೇ ಯಚ್ಚ ಪತ್ಯುಸ್ಸಮೀಹಿತಮ್ ।
ತತ್ತದ್ಗುಣವತೇ ದೇಯಂ ಪತಿಪ್ರೀಣನಕಾಮ್ಯಯಾ । —ಕಾಶೀಖಂಡ 87

8. ಏವಂ ಸುನಿಯತಾಹಾರಾ ಸಮ್ಯಗ್ವ್ರತಪರಾಯಣಾ ।
ಭರ್ತ್ರಾ ಸಹ ಸಮಾಪ್ನೋತಿ ವೈಕುಂಠಪದಮವ್ಯಯಮ್ —ವೃ.ಹಾ.ಸ್ಮೃ. 11-212

ಯಾದರೂ ಪತಿವ್ರತೆ ಎನಿಸುವಳು. ಪತಿಲೋಕಗಳನ್ನು ಹೊಂದುವ ಅವಳು ಎಂದೂ ದುಃಖಿತಳಾಗುವುದಿಲ್ಲ.[1] ವಿಧವಾ ಸ್ತ್ರೀ ಅಮಂಗಲ ಪದಾರ್ಥಗಳಲ್ಲೆಲ್ಲ ಅತ್ಯಂತ ಅಮಂಗಲವಾದವಳು. ಅವಳ ದರ್ಶನವಾಯಿತೆಂದರೆ ಖಂಡಿತಾ ಯಾವುದೇ ಕಾರ್ಯಸಿದ್ಧಿ ಉಂಟಾಗಲಾರದು.[2] ಹೀಗೆಂದು ಹೇಳುವ ಧರ್ಮಶಾಸ್ತ್ರ ಶಾಸ್ತ್ರವಿಹಿತವಾದ ರೀತಿಯಲ್ಲಿ ಬದುಕುವ ವಿಧವೆಯೂ ನಿತ್ಯ ಶುಭಳು. ಅಂತಹ ಪತಿವ್ರತೆಯು ಗಂಗೆಗೆ ಸದೃಶಳಾದವಳು. ರಮಾದೇವಿಗೆ ಸಮಾನಳಾದವಳು– ಎನಿಸುವಷ್ಟು ಪವಿತ್ರಳು ಎಂದು ತಿಳಿಸುತ್ತ ಅಂತಹ ಸ್ತ್ರೀಯನ್ನು ಸರ್ವದಾ ಪೂಜಿಸಬೇಕು–ಎಂದು ವಿಧಿಸಿದೆ.[3]

## ಪತಿಸೇವೆಗಿಂತ ಬೇರೆ ಅನುಷ್ಠಾನದ ಆವಶ್ಯಕತೆ ಇಲ್ಲವೇ?

ಪತ್ನಿಯಾದವಳಿಗೆ ಪತಿಸೇವೆಯ ಮಹತ್ತ್ವವನ್ನು ತಿಳಿಸುವ ಕಡೆಗಳಲ್ಲೆಲ್ಲ ಅವಳಿಗೆ ಪತಿಸೇವೆಗಿಂತ ಬೇರೆ ವೈಯಕ್ತಿಕ ಆಧ್ಯಾತ್ಮಿಕ ಅಥವಾ ಧಾರ್ಮಿಕ ಅನುಷ್ಠಾನದ ಆವಶ್ಯಕತೆಯೇ ಇಲ್ಲ — ಎಂದು ಹೇಳಲಾಗುವುದು.[4]

ಆದರೆ ಆ ಎಲ್ಲ ಮಾತುಗಳಿಗೆ ಪತ್ನಿಯಾದವಳು ಪತಿಸೇವೆಯನ್ನು ಅವಶ್ಯವಾಗಿ ಮಾಡಬೇಕು; ತನ್ನ ವೈಯಕ್ತಿಕ ಅನುಷ್ಠಾನಕ್ಕಾಗಿ ಪತಿಸೇವೆಯಲ್ಲಿ

---

1. ಏವಂ ಧರ್ಮಪರಾ ಯುಕ್ತಾ ವಿಧವಾಪಿ ಪತಿವ್ರತಾ ।
ಪತಿಲೋಕಾನವಾಪ್ನೋತಿ ನ ಭವೇತ್ ಕ್ವಾಪಿ ದುಃಖಿತಾ । —ಕಾಶೀಖಂಡ-88

2. ಅಮಂಗಲೇಭ್ಯಸ್ಸರ್ವೇಭ್ಯೋ ವಿಧವಾ ಹ್ಯತ್ಯಮಂಗಲಮ್ ।
ವಿಧವಾದರ್ಶನಾತ್ ಸಿದ್ಧಿರ್ಜಂತೋರ್ಜಾತು ನ ಜಾಯತೇ —ಕಾಶೀಖಂಡ 53

3. ಏವಂಚರ್ಯಾಪರಾ ನಿತ್ಯಂ ವಿಧವಾಪಿ ಶುಭಾ ಮತಾ ।
....ನ ಗಂಗಯಾ ತಯಾ ಭೇದೋ ಯಾ ನಾರೀ ಪತಿದೇವತಾ ।
ರಮಾದೇವೀಸಮಾ ಸಾಕ್ಷಾತ್ತಸ್ಮಾತ್ತಾಂ ಪೂಜಯೇತ್ಸದಾ । —ಕಾಶೀಖಂಡ 89

4. ಪಾತಿವ್ರತ್ಯಾತ್ ಪರೋ ಧರ್ಮೋ ನಾರೀಣಾಂ ನೇಹ ವಿದ್ಯತೇ ।
ನ ವ್ರತೇನೋಪವಾಸೇನ ಧರ್ಮೇಣ ವಿವಿಧೇನ ಚ ।
ನಾರೀ ಸ್ವರ್ಗಮವಾಪ್ನೋತಿ ಪ್ರಾಪ್ನೋತಿ ಪತಿಪೂಜನಾತ್ —ಕಾಶೀಖಂಡ 1, 2

ನ್ಯೂನತೆಯನ್ನು ತೋರಿಸುವಂತಾಗಬಾರದು. —ಎಂಬ ಅಭಿಪ್ರಾಯವೇ ಹೊರತು ಅವರಿಗೆ ವೈಯಕ್ತಿಕ ಅನುಷ್ಠಾನದ ಆವಶ್ಯಕತೆಯೇ ಇಲ್ಲ—ಎಂಬ ಅಭಿಪ್ರಾಯವಲ್ಲ.

ವೇದಾನಧಿಕಾರಿಗಳಾದ ಸ್ತ್ರೀಯರ ಶ್ರೇಯಸ್ಸಿಗಾಗಿ ಮಹಾಭಾರತವನ್ನು ರಚಿಸಿರುವ[1] ಶ್ರೀ ವೇದವ್ಯಾಸರ ಪ್ರಕಾರ ಸ್ತ್ರೀಯರು ಮಹಾಭಾರತಾದಿಗಳ ಅಧ್ಯಯನಾದಿಗಳನ್ನೂ ನಡೆಸಬೇಕೆಂದು ಸಿದ್ಧಿಸುವುದು ತಾನೆ? ಸ್ತ್ರೀಯರಿಗೆ ಪತಿಯ ಸೇವೆಯಿಂದಲೇ ಶ್ರೇಯಸ್ಸಾಗುವುದಾದರೆ ಮಹಾಭಾರತಾದಿಗಳ ತಿಳುವಳಿಕೆಯ ಆವಶ್ಯಕತೆ ಇಲ್ಲ ಎಂದು ಅವರಿಗಾಗಿ ಮಹಾಭಾರತದ ನಿರ್ಮಾಣ ಆವಶ್ಯಕವೆನಿಸುತ್ತಿದ್ದಿಲ್ಲ ತಾನೇ? ವೇದಾನಧಿಕಾರಿಗಳ ಶ್ರೇಯಸ್ಸಿಗಾಗಿ ಮಹಾಭಾರತವನ್ನು ರಚಿಸಲಾಯಿತೆಂಬ ಭಾಗವತದ ಮಾತನ್ನು ವ್ಯಾಖ್ಯಾನಿಸಲು ಶ್ರೀ ಮಧ್ವಾಚಾರ್ಯರು ಉಲ್ಲೇಖಿಸಿರುವ 'ಸ್ಕಾಂದ'ವು[2] ವೇದಾಧಿಕಾರಿಗಳಾಗಿರುವ ಬ್ರಾಹ್ಮಣಾದಿಗಳಿಗೆ ವೇದಾರ್ಥವನ್ನು ತಿಳಿಯುವಲ್ಲಿ ಮಹಾಭಾರತವು ಉಪಯುಕ್ತವೆನಿಸಿದರೆ, ವೇದಾನಧಿಕಾರಿಗಳಾಗಿರುವ ಸ್ತ್ರೀ ಶೂದ್ರಾದಿಗಳ ಪಾಲಿಗೆ ಮಹಾಭಾರತವೇ ವೇದ ಎನಿಸಿದೆ ಮಹಾಭಾರತವಿಲ್ಲದೆ ಯಾರಿಗೂ ಸುಖ ದೊರಕದು—ಎಂದು ಸಂದೇಶಿಸುವ ಮೂಲಕ ಸ್ತ್ರೀಯರು ಮಹಾಭಾರತವನ್ನು ವೇದಾಧಿಕಾರಿಗಳು ವೇದವನ್ನು ಹೇಗೋ ಹಾಗೆಯೇ ಅಧ್ಯಯನ ನಡೆಸಬೇಕು—ಎಂದು ಸೂಚಿಸುವುದು. ಇದರಿಂದ ಸ್ತ್ರೀಯರು ಪತಿಸೇವೆಯನ್ನಲ್ಲದೆ, ತತ್ವಜ್ಞಾನದ ಸಂಪಾದನೆ ಮುಂತಾದ ವೈಯಕ್ತಿಕ ಸಾಧನೆಗಳನ್ನೂ ನಡೆಸಬೇಕೆಂಬುದು ಶ್ರೀ ಮಧ್ವಾಚಾರ್ಯರಿಗೂ

---

○ ನ ಪೃಥಗ್ ವಿದ್ಯತೇ ಸ್ತ್ರೀಣಾಂ ತ್ರಿವರ್ಗವಿಧಿಸಾಧನಮ್ ।
ಭಾವತೋ ಹ್ಯತಿದೇಶಾದ್ವಾ ಇತಿ ಶಾಸ್ತ್ರವಿಧಿಃ ಪರಃ । —ವೇದವ್ಯಾಸಸ್ಮೃತಿ 2-19

○ ಪತಿಶುಶ್ರೂಷಣಾನ್ನಾರ್ಯಾಸ್ತಪೋ ನಾನ್ಯದ್ ವಿಧೀಯತೇ । —ವಾ.ರಾ.ಅ. 118-9

○ ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ
ನ ವ್ರತಂ ನಾಪ್ಯುಪೋಷಿತಮ್ । ಪತಿಂ ಶುಶ್ರೂಷತೇ ಯತ್ತು
ತೇನ ಸ್ವರ್ಗೇ ಮಹೀಯತೇ —ವಿಷ್ಣುಧರ್ಮೋತ್ತರ 2-34-10

1. ಸ್ತ್ರೀಶೂದ್ರದ್ವಿಜಬಂಧೂನಾಂ ತ್ರಯೀ ನ ಶ್ರುತಿಗೋಚರಾ ।
ಕರ್ಮಶ್ರೇಯಸಿ ಮೂಢಾನಾಂ ಶ್ರೇಯ ಏವಂ ಭವೇದಿಹ
ಇತಿ ಭಾರತಮಾಖ್ಯಾನಂ ಕೃಪಯಾ ಮುನಿನಾ ಕೃತಮ್ —ಭಾಗ. 1-4-24

2. ಭಾರತಂ ಬ್ರಾಹ್ಮಣಾದೀನಾಂ ವೇದಾರ್ಥಪರಿಪತ್ತಯೇ ।
ತದೇವ ವೇದಸ್ತ್ವನ್ಯೇಷಾಂ ನರ್ತೇ ತತ್ ಕಸ್ಯಚಿತ್ ಸುಖಮ್
—ಸ್ಕಾಂದ (ಭಾ. ತಾ. ನಿ. 1-4-24)

ಸಮ್ಮತ ಎಂದು ತಿಳಿದುಬರುವುದು. ಅಲ್ಲದೆ ಮೂರು ವರ್ಣಗಳಿಗೆ ಸೇರಿದ ಸ್ತ್ರೀಯರೂ ವೇದಗಳನ್ನು ಬಿಟ್ಟು ಉಳಿದ ಮಹಾಭಾರತಾದಿ ಗ್ರಂಥಗಳನ್ನೂ ಅವಶ್ಯವಾಗಿ ತಿಳಿಯಬೇಕೆಂದು ಶ್ರೀ ಮಧ್ವಾಚಾರ್ಯರು ಪಾಂಡವರಿಗೆ ಭೀಷ್ಮರು ನೀಡಿರುವ ಸಂದೇಶವಾಗಿ ಸಂಗ್ರಹಿಸಿರುವರು.[1]

ಸ್ವಾಯಂಭುವ ಮನುವಿನ ಮಗಳು ದೇವಹೂತಿ ಸ್ತ್ರೀಯರಿಗೆ ಮುಕ್ತಿಯ ಸಾಧನೆಯಲ್ಲಿ ಪತಿಯ ಸೇವೆಯ ಜೊತೆಗೆ ವೈಯಕ್ತಿಕವಾದ ಆಧ್ಯಾತ್ಮಿಕ ಸಾಧನೆಯೂ ಅತ್ಯವಶ್ಯ ಎಂಬುದಕ್ಕೆ ಉತ್ತಮ ನಿದರ್ಶನಳಾಗಬಲ್ಲಳು. ಪತಿಯಾದ ಕರ್ದಮ ಪ್ರಜಾಪತಿಯನ್ನು ಚೆನ್ನಾಗಿ ಸೇವಿಸಿ,[2] ಅದರಿಂದ ಸಂತುಷ್ಟನಾದ ಅವನಿಂದ ಲೌಕಿಕ ಸುಖವನ್ನೂ, ಒಂಭತ್ತು ಹೆಣ್ಣು ಮಕ್ಕಳನ್ನೂ ಪಡೆದಳು. ಬಳಿಕ ಕರ್ದಮ ಪ್ರಜಾಪತಿ ವಿರಕ್ತನಾಗಿ ಅರಣ್ಯಕ್ಕೆ ಹೊರಡಲು ಸಿದ್ಧನಾಗಲು ದೇವಹೂತಿ ತಾನು ಇದುವರೆಗೂ ಮೋಕ್ಷಪ್ರಾಪ್ತಿಗೆ ಬೇಕಾದ ಸಾಧನೆಗಳನ್ನು ನಡೆಸಿಲ್ಲ ಎಂದು ಪಶ್ಚಾತ್ತಾಪ ಪಡುವಳು.[3] ಅದಕ್ಕೆ ಪ್ರಜಾಪತಿಯು ದೇವಹೂತಿಯ ಗರ್ಭದಿಂದ ಅಭಿವ್ಯಕ್ತನಾಗಲಿರುವ ಕಪಿಲನು ತತ್ತ್ವವಿದ್ಯೆಯನ್ನು ಉಪದೇಶಿಸಿ ಆಕೆಯ ಸಂಸಾರ ಬಂಧನವನ್ನು ತೊಲಗಿಸುವನೆಂದು ಸಮಾಧಾನಿಸುವನು.[4] ಒಂದು ವೇಳೆ ಸ್ತ್ರೀಯರಿಗೆ ಪತಿಸೇವೆಯಿಂದಲೇ ಸದ್ಗತಿ ದೊರಕುವುದೆಂದಿದ್ದರೆ, ಚೆನ್ನಾಗಿ ಪತಿಸೇವೆಯನ್ನು ನಡೆಸಿದ್ದ ದೇವಹೂತಿ ತಾನು ಆಧ್ಯಾತ್ಮಿಕ ಸಾಧನೆ ನಡೆಸಿಲ್ಲ–ಎಂದು ಪಶ್ಚಾತ್ತಾಪ ಪಟ್ಟದ್ದಾಗಲೀ, ಅದಕ್ಕೆ ಕರ್ದಮನು ಕಪಿಲನ ಮೂಲಕ ದೊರಕಲಿರುವ ಆಧ್ಯಾತ್ಮಿಕ ಉಪದೇಶದಿಂದ ಸಂಸಾರದಿಂದ ಬಿಡುಗಡೆ ಹೊಂದುವಿ– ಎಂದು ಸಮಾಧಾನಿಸಿದಾಗಲೀ – ಅರ್ಥಹೀನವೆನಿಸುವುದು.

---

1. ಜ್ಞೇಯಂ ಸರ್ವಂ ತ್ರಿವರ್ಣಸ್ಥಸ್ತ್ರೀಭಿರ್ವೇದಾನ್ ವಿನಾऽಖಿಲಮ್
—ಮ. ಭಾರ. ತಾ. ನಿ. 29-35

○ ನಿತ್ಯಂ ಪರ್ಯಚರತ್ ಪ್ರೀತ್ಯಾ ಭವಾನೀವ ಭವಂ ಪ್ರಭುಮ್ ।
—ಭಾಗ. 3-23-1

2. ವಿಶ್ರಂಭೇಣಾತ್ಮಶೌಚೇನ ಗೌರವೇಣ ದಮೇನ ಚ । ಶುಶ್ರೂಷಯಾ ಸೌಹೃದೇನ ವಾಚಾ ಮಧುರಯಾ ಚ ಭೋಃ । ವಿಸೃಜ್ಯ ಕಾಮಂ ದಂಭಂ ಚ ದ್ವೇಷಂ ಲೋಭಮಘಂ ಮದಮ್ । ಅಪ್ರಮತ್ತೋದ್ಯತಾ ನಿತ್ಯಂ ತೇಜೀಯಾಂಸಮತೋಷಯತ್ ।
—ಭಾಗ. 3-23-2, 3

3. ಸಾಹಂ ಭಗವತೋ ನೂನಂ ವಂಚಿತಾ ಮಾಯಯಾ ದೃಢಮ್ ।
ಯತ್ತ್ವಾಂ ವಿಮುಕ್ತಿದಂ ಪ್ರಾಪ್ಯ ನ ವಿಮುಮುಕ್ಷೇಯ ಬಂಧನಾತ್॥-ಭಾಗ.3-23-57

4. ....ಛೇತ್ತಾ ತೇ ಹೃದಯಗ್ರಂಥಿಮೌದರ್ಯೋ ಬ್ರಹ್ಮಭಾವನಃ ।
—ಭಾಗ. 3-24-4

ಹಾಗೆಯೇ ಮುಂದೆ ದೇವಹೂತಿಯಲ್ಲಿ ಅವತರಿಸುವ ಕಪಿಲ ವಾಸುದೇವನು ಸಂಸಾರ ಬಂಧನದಿಂದ ಬಿಡುಗಡೆ ಹೊಂದಲು ಪತಿಯ ಸೇವೆಯೇ ಸಾಕು—ಎಂದು ತನ್ನ ತಾಯಿಯನ್ನು ಸಮಾಧಾನಿಸಿದೆ, ಸಂಸಾರದ ಬಿಡುಗಡೆಗೆ ಉಪಯುಕ್ತವಾಗುವಂತೆ ಆಧ್ಯಾತ್ಮಿಕ ವಿದ್ಯೆಯ ಉಪದೇಶವನ್ನು ನೀಡುವನು. ದೇವಹೂತಿ ಆ ಉಪದೇಶವನ್ನು ಅಳವಡಿಸಿಕೊಂಡು ಪರಮಾತ್ಮನನ್ನು ಹೊಂದುವಳು.[1] ಹೊರತು ಬರೇ ತನ್ನ ಪತಿಯ ಸೇವೆಯಿಂದ ಅಲ್ಲ. ಇದರಿಂದ ಸ್ಪಷ್ಟವಾಗುವುದು ಸ್ವರ್ಗಾದಿಗಳ ಪ್ರಾಪ್ತಿಗೆ ಪತಿಯ ಸೇವೆಯೇ ಸಾಕಾದರೂ,[2] ಪರಮಪುರುಷಾರ್ಥವಾದ ಮುಕ್ತಿಯ ಪ್ರಾಪ್ತಿಗೆ ವೈಯಕ್ತಿಕವಾದ ಆಧ್ಯಾತ್ಮಿಕ ಸಾಧನೆಯೇ ಸ್ತ್ರೀಯರಿಗೂ ಬೇಕೇ ಬೇಕು—ಎಂಬುದಾಗಿ. ಕರ್ದಮ ಪ್ರಜಾಪತಿಯ ಕೈಹಿಡಿದು ಕಪಿಲರೂಪಿ ಪರಮಾತ್ಮನನ್ನೇ ಪುತ್ರನನ್ನಾಗಿ ಪಡೆದ ದೇವಹೂತಿ ತುಂಬ ಎತ್ತರ ಮಟ್ಟದ ಸ್ತ್ರೀಯಾಗಿರುವಳಾದರೂ ಪರಮಪುರುಷಾರ್ಥದ ಪ್ರಾಪ್ತಿಗೆ ಸ್ತ್ರೀಯಾದವಳಿಗೆ ಪತಿಸೇವೆಯ ಜೊತೆಗೆ ಆಧ್ಯಾತ್ಮಿಕ ಸಾಧನೆಯೂ ಬೇಕು—ಎಂದು ಸ್ತ್ರೀ ಸಾಮಾನ್ಯಳೂ ಅವಳ ಸಾಧನೆಯಿಂದ ತಿಳಿದುಕೊಳ್ಳಬಹುದಾಗಿದೆ.

## ಪತಿಯ ಅನುಮತಿ ಎಷ್ಟು ಆವಶ್ಯಕ?

ಸ್ತ್ರೀಯರು ತಮ್ಮ ಪತಿಯ ಅನುಜ್ಞೆಯನ್ನು ಪಡಕೊಳ್ಳದೆ ಏನೇ ಸಾಧನೆಯನ್ನು ನಡೆಸಿದರೂ ಅವೆಲ್ಲ ವ್ಯರ್ಥ ಎಂದಿದೆ.[3] ಪತಿ ನಡೆಸುವುದಕ್ಕಿಂತ ಅಧಿಕ ಪ್ರಮಾಣದಲ್ಲಿ ಉಪವಾಸ ವ್ರತಾದಿಗಳನ್ನು ಪತ್ನಿ ನಡೆಸಿದಲ್ಲಿ ಅದರಿಂದಾಗಿ ಪತಿಯ ಆಯುಷ್ಯ ಕಡಿಮೆ ಆಗುವುದೆಂದೂ ಎಚ್ಚರಿಸಲಾಗಿದೆ.[4]

---

1. ಏವಂ ಸಾ ಕಪಿಲೋಕ್ತೇನ ಮಾರ್ಗೇಣಾಚಿರತಃ ಪರಮ್ ।
ಆತ್ಮಾನಂ ಬ್ರಹ್ಮ ನಿರ್ವಾಣಂ ಭಗವಂತಮವಾಪ ಹ ॥ —ಭಾಗ. 3-33-30

2. '...ನಾರೀ ಸ್ವರ್ಗಮವಾಪ್ನೋತಿ....' '....ತೇನ ಸ್ವರ್ಗೇ ಮಹೀಯತೇ'
'....ತ್ರಿವರ್ಗವಿಧಿಸಾಧನಮ್ ।' — ಇತ್ಯಾದಿ ವಚನೈಃ ಸ್ವರ್ಗಾದಿ ಪ್ರಾಪ್ತ್ಯರ್ಥಮೇವ ಪತಿಶುಶ್ರೂಷಣೇನೈವಾಲಮಿತ್ಯುಚ್ಯತೇ ನ ತು ಮುಕ್ತಯೇ ಇತಿ ಸೂಚ್ಯತೇ ।

3. ಅಫಲಂ ಸರ್ವಮೇವ ಸ್ಯಾದ್ ಭರ್ತ್ರನನುಜ್ಞಾಂ ವಿನಾ ಕೃತಮ್ ।
—ವಿಷ್ಣುಧರ್ಮೋತ್ತರ 2-35-79

4. ಪತ್ಯುರಭ್ಯಧಿಕಂ ನಾರೀ ನೋಪವಾಸವ್ರತಂ ಚರೇತ್ ।
ಅನಾಯುಷ್ಯಂ ದ್ವಿಜಶ್ರೇಷ್ಠ ಪತ್ಯುಸ್ತಸ್ಯಾಸ್ತದುಚ್ಯತೇ ।
—ವಿಷ್ಣುಧರ್ಮೋತ್ತರ 2-34-21

ನಿಜ; ಪತಿಯಾದವನು ತನ್ನ ಪತ್ನಿಯ ಪಾಲಿಗೆ ಭಗವಂತನ ಪ್ರತೀಕವಂತೆ ಇರುವವನಾದುದರಿಂದ ಅವನ ಅನುಮತಿಯನ್ನು ಪಡೆದುಕೊಂಡು ಸಾಧನೆಗಳನ್ನು ನಡೆಸಬೇಕೆಂಬುದು ಔಚಿತ್ಯಪೂರ್ಣವಾದುದೇ. ಆದರೆ ಪತಿಯು ನಾಸ್ತಿಕ ಭಾವನೆಗೆ ಒಳಗಾದವನು, ಧಾರ್ಮಿಕ, ಆಧ್ಯಾತ್ಮಿಕ ಆಚರಣೆಗಳನ್ನು ಗೇಲಿ ಮಾಡುವವನು-ಆಗಿದ್ದ ನೆಂದರೆ ಅಂತಹ ಪತಿಯಿಂದ ಆಧ್ಯಾತ್ಮಿಕ ಆಚರಣೆಗಾಗಲೀ, ಧಾರ್ಮಿಕ ಆಚರಣೆ ಗಾಗಲೀ ಅನುಮತಿಯನ್ನು ನಿರೀಕ್ಷಿಸುವಂತೆಯೇ ಇಲ್ಲ. ಇಷ್ಟೇ ಅಲ್ಲದೆ ಅಂತಹ ಪತಿ ತನ್ನ ಪತ್ನಿ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಅನುಷ್ಠಾನಗಳಲ್ಲಿ ಪಾಲ್ಗೊಳ್ಳ ದಂತೆ ಪ್ರಬಲವಾಗಿ ಪ್ರತಿಷೇಧಿಸುವವನೂ ಆಗಿರಬಲ್ಲನು. ಅಂತಹ ಪ್ರಸಂಗಗಳಲ್ಲಿ ಪತ್ನಿಯಾದವಳು ಪತಿಯ ಅನುಮತಿ ದೊರಕುವುದಿಲ್ಲ ಎಂದು ಧಾರ್ಮಿಕ ಹಾಗೂ ಆಧ್ಯಾತ್ಮಿಕ ಸಾಧನೆಗಳಿಂದ ಹಿಂಜರಿಯಬಾರದು. ಒಂದು ವೇಳೆ, ಪತಿ ತನ್ನ ಆ ನಿಟ್ಟಿನ ಪ್ರವೃತ್ತಿಯನ್ನು ವಿರೋಧಿಸುತ್ತಿದ್ದರೂ ವಿನೀತಳಾಗಿಯೇ ಅದನ್ನು ಎದುರಿಸಿ ತನ್ನ ಪ್ರವೃತ್ತಿಯನ್ನು ಮುಂದುವರಿಸಬೇಕು.

ಪತಿಯ ಅನುಜ್ಞೆಯಿಲ್ಲದೆ ನಡೆಸುವ ಧರ್ಮವೆಲ್ಲ ವ್ಯರ್ಥ—ಎಂದು ತಿಳಿಸುತ್ತಿರುವ 'ವಿಷ್ಣುಧರ್ಮೋತ್ತರ'ದಲ್ಲಿ, ಗೋವಿಂದನು ಸರ್ವಾಂತರ್ಯಾಮಿ. ಪತ್ನಿಯಾದವಳ ಪಾಲಿಗೆ ಅವಳ ಪತಿಯಲ್ಲೂ ಅವನು ವಿಶೇಷವಾಗಿ ಸನ್ನಿಹಿತನಾಗಿರುವನು. ಲೋಕ ದಲ್ಲಿ ಅತ್ಯಂತ ಪೂಜ್ಯನಾಗಿರುವನು ಎಂದು ಭಗವಂತನ ವೈಶಿಷ್ಟ್ಯವನ್ನು ಪ್ರತಿಪಾದಿಸಿ, ಅಂತಹ ಭಗವಂತನ ಆರಾಧನೆಯನ್ನು ಪತಿಯ ಅನುಜ್ಞೆ ದೊರಕದಿದ್ದರೂ ನಡೆಸ ಬೇಕೆಂದು–ವಿಧಿಸಲಾಗಿದೆ. [1]

ಶ್ರೀಕೃಷ್ಣನಿಂದ ಕಳುಹಿಸಲ್ಪಟ್ಟಿದ್ದ ಗೋವಳ ಬಾಲಕರು ಬ್ರಾಹ್ಮಣರ ಪತ್ನಿಯ ರಲ್ಲಿ ಅನ್ನವನ್ನು ಕೇಳಿದಾಗ ಅವರು ಸಂತೋಷದಿಂದ ನಾಲ್ಕು ಬಗೆಯ ಅನ್ನವನ್ನು ಸಿದ್ಧಪಡಿಸಿ, ತಮ್ಮ ಪತಿ, ಪುತ್ರರು, ಸಹೋದರ ಮುಂತಾದ ಬಂಧುಗಳು ಪ್ರತಿ ಭಟಿಸಿದರೂ ಅದನ್ನು ಪರಿಗಣಿಸದೆ ಶ್ರೀಕೃಷ್ಣನಲ್ಲಿಗೆ ಹೋಗಿ ಅನ್ನವನ್ನು ಸಮರ್ಪಿಸು ವರು.

---

1. ಕೇಶವಾರಾಧನಂ ರಾಮ ತಥಾಪಿ ಸಫಲಂ ಸ್ತ್ರಿಯಃ ।
ಸರ್ವಭೂತಾನಿ ಗೋವಿಂದೋ ಭರ್ತಾ ನಾನ್ಯಸ್ತು ಯೋಷಿತಃ ।
ಭರ್ತ್ರನುಜ್ಞಾಂ ವಿನಾ ತಸ್ಮಾತ್ತತಃ ಪೂಜಾ ವಿಧೀಯತೇ ।
ನಾರಾಯಣಃ ಪೂಜ್ಯತಮೋ ಹಿ ಲೋಕೇ ನಾರಾಯಣಃ ಸರ್ವಗತಃ ಪ್ರಧಾನಃ ।
ನಾರಾಯಣಾರಾಧನತತ್ಪರಾ ಸ್ತ್ರೀ ಕಾಮಾನವಾಪ್ನೋತಿ ನ ಸಂಶಯೋಽತ್ರ
—ವಿ. ಧ. 2-35-78....81

ತಮ್ಮ ಪತಿ ಹಾಗೂ ಇತರ ಬಂಧುಗಳ ಪ್ರತಿಭಟನೆಯನ್ನು ಮೀರಿ ತನ್ನಲ್ಲಿಗೆ ಬಂದು ಅನ್ನವನ್ನು ಸಮರ್ಪಿಸಿರುವ ಬ್ರಾಹ್ಮಣ ಪತ್ನಿಯರ ಆ ಪ್ರವೃತ್ತಿಯನ್ನು ಅಭಿನಂದಿಸಿದ[1] ಶ್ರೀಕೃಷ್ಣನು ಪತಿಯ ಅನುಜ್ಞೆಯಿಲ್ಲದಿದ್ದರೂ ಪತ್ನಿಯಾದವಳು ಭಗವಂತನಿಗೆ ಪ್ರೀತಿಯನ್ನುಂಟುಮಾಡಬಲ್ಲ ಅನುಷ್ಠಾನಗಳನ್ನು ನಡೆಸಬೇಕೆಂಬುದಾಗಿ ಸೂಚಿಸಿರುವನು.

ಯಾರು ಈ ಸಂಸಾರ ಬಂಧನದಿಂದ ಬಿಡುಗಡೆಗೆ ಸ್ವಲ್ಪವೂ ನೆರವನ್ನು ನೀಡಲಾರನೋ ಅವನು ಪತಿ ಎಂದು ಕರೆಸಿಕೊಳ್ಳಲು ಅರ್ಹನೇ ಅಲ್ಲ[2] ಎಂಬ ಋಷಭದೇವನ ಹೇಳಿಕೆಯಿಂದಲೂ ಆಧ್ಯಾತ್ಮಿಕಸಾಧನೆಗೆ ನೆರವು ನೀಡದ ಪತಿಯ ಅನುಜ್ಞೆ ದೊರಕದಿದ್ದರೂ, ಅದಕ್ಕಾಗಿ ಸಾಧನೆಯಿಂದ ಹಿಂಜರಿಯಬೇಕಾಗಿಲ್ಲ ಎಂಬುದು ಸೂಚಿತವಾಗಬಲ್ಲದು. ಆದ್ದರಿಂದ ಸ್ತ್ರೀ ತನ್ನ ಪತಿಯ ಅನುಜ್ಞೆ ದೊರಕದಿದ್ದರೂ ಪತಿಯ ಸೇವೆಗೆ ಚ್ಯುತಿ ಬಾರದಂತೆ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಅನುಷ್ಠಾನಗಳನ್ನು ನಡೆಸಬೇಕೆಂಬು ಸಿದ್ಧಿಸುವುದು.

## ಕೃಷ್ಣಮಂತ್ರಜಪದ ಆವಶ್ಯಕತೆ:

ಸ್ತ್ರೀಯರಿಗೆ ವಿಧಿಸಲಾದ ಧಾರ್ಮಿಕ ಅನುಷ್ಠಾನಗಳ ಜೊತೆಗೆ ಮಹಾಭಾರತ, ರಾಮಾಯಣ, ಪುರಾಣ, ದಾಸಸಾಹಿತ್ಯ ಮುಂತಾದವುಗಳ ಶ್ರವಣ, ಮನನ, ನಿದಿಧ್ಯಾಸನ ರೂಪದ ಆಧ್ಯಾತ್ಮಿಕ ಸಾಧನೆಯೂ ವಿಹಿತವಾಗಿದೆ.

ಈ ಆಧ್ಯಾತ್ಮಿಕ ಸಾಧನೆಗೆ ಪ್ರತಿನಿಧಿಯಾಗಿ ಅವರು ಪ್ರತಿನಿತ್ಯ ಶ್ರೀಕೃಷ್ಣ ಮಂತ್ರದ ಜಪವನ್ನು ನಡೆಸಬೇಕು. ಈ ಮಂತ್ರದ ಜಪದಿಂದಾಗಿ ಅವರಿಗೆ ಆಧ್ಯಾತ್ಮಿಕ ಸಾಧನೆಗೆ ಸ್ಫೂರ್ತಿ ಉಂಟಾಗಬಲ್ಲದು. ಆಧ್ಯಾತ್ಮಿಕ ಸಾಧನೆಗೆ ತಾವೂ ಅಧಿಕಾರವುಳ್ಳವರೆಂಬ ಆತ್ಮವಿಶ್ವಾಸ ಮೂಡಬಲ್ಲದು.

ಸ್ತ್ರೀಯರು ಪುರುಷರಂತೆ ಮಂತ್ರಗಳನ್ನು ಜಪಿಸಬೇಕೆಂದು ವಿಶೇಷವಾದ ವಿಧಾನ ದೊರಕದೆ ಇರಬಹುದು. ವೃದ್ಧಹಾರೀತಸ್ಮೃತಿಯಲ್ಲಿ '(11–87) ಜಪ್ತ್ವಾ ಮಂತ್ರಂ ಗುರುಂ ಪಶ್ಚಾದ್....' ಎಂದು ಸ್ತ್ರೀಯರಿಗೆ ಗುರುಮಂತ್ರದ

---

1. ಯನ್ನೋ ದಿದೃಕ್ಷಯಾ ಪ್ರಾಪ್ತಾ ಉಪಪನ್ನಮಿದಂ ಹಿ ವಃ —ಭಾಗ. 10-23-25
2. '....ನ ಪತಿಶ್ಚ ಸ ಸ್ಯಾನ್ನ ಮೋಚಯೇದ್ ಯಃ ಸಮುಪೇತಮೃತ್ಯುಮ್ ।
—ಭಾಗ. 5–5–18

ಜಪವನ್ನು ವಿಧಿಸಿರುವುದುಂಟು. ಶ್ರೀ ವಾದಿರಾಜ ಶ್ರೀಪಾದರು ರಚಿಸಿರುವ 'ಮನೆವಾರ್ತೆ' ಹಾಡಲ್ಲಿ 'ಗುರುಗಳು ಕೊಟ್ಟಂಥ ಪರಮಮಂತ್ರವ ಜಪಿಸಿ....' (೧೬ನೇ ಪದ್ಯ) ಎಂಬುದಾಗಿ ಗುರುಗಳಿಂದ ಮಂತ್ರೋಪದೇಶ ಪಡೆದು, ಮಂತ್ರವನ್ನು ಸ್ತ್ರೀಯರೂ ಜಪಿಸಬೇಕೆಂಬುದು ಸೂಚಿತವಾಗಿದೆ. ವಿವಾಹವು ಸ್ತ್ರೀಯರಿಗೆ ಉಪನಯನದ ಪ್ರತಿನಿಧಿಯಂತೆ ಇರುವುದೆಂದು ಶಾಸ್ತ್ರದಲ್ಲಿ ಹೇಳಲಾಗಿದೆ—

ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ [1]

ಆದ್ದರಿಂದ ವಿವಾಹವಾದ ಪ್ರತಿಯೊಬ್ಬ ಸ್ತ್ರೀಯರೂ ಕೃಷ್ಣಮಂತ್ರವನ್ನು ಜಪಿಸಬಹುದು. ಪುರುಷರು ಜಾತಾಶೌಚದ, ಮೃತಾಶೌಚದ ಸಂದರ್ಭಗಳಲ್ಲಿ ಅನಿವಾರ್ಯವಾಗಿ ಮಂತ್ರಗಳ ಜಪವನ್ನು ಬಿಟ್ಟುಬಿಡುವಂತೆ ಸ್ತ್ರೀಯರೂ ರಜಸ್ವಲೆಯರಾದಾಗ ಜಪ ಮಾಡದಿದ್ದರೂ ಅದು 'ಮಂತ್ರತ್ಯಾಗ' ಎಂಬ ಅಪರಾಧ ಎನಿಸದು. ಶುದ್ಧರಾದ ಮೇಲೆ ಮಂತ್ರದ ಜಪವನ್ನು ಮುಂದುವರಿಸಲು ಬೇಕಾದ ಅರ್ಹತೆಯನ್ನೂ ಅವರು ಕಳೆದುಕೊಳ್ಳಲಾರರು.

ಕೃಷ್ಣಮಂತ್ರ ಜಪಿಸುವವನಿಗೆ ಹೆಚ್ಚಿನ ಶಕ್ತಿಸಾಮರ್ಥ್ಯವನ್ನು ನೀಡಬಲ್ಲ ಮಂತ್ರವೆಂದು ಶ್ರೀ ಮಧ್ವಾಚಾರ್ಯರು ಸಂದೇಶಿಸಿರುವರು. [2] ಶ್ರೀಕೃಷ್ಣ ಪರಮಾತ್ಮ

---

1. 'ಸಂಸ್ಕಾರ ಪರಾಮರ್ಶಾತ್ತದಭಾವಾಭಿಲಾಪಾಚ್ಚ'—ಎಂಬ ಬ್ರಹ್ಮಸೂತ್ರದ (1-3-36) ಭಾಷ್ಯದಲ್ಲಿ 'ಅಸ್ತಿ ಚ' ಎಂಬುದಾಗಿ ವ್ಯಾಸವಾಕ್ಯವಾಗಿ (ವ್ಯಾಸವಾಕ್ಯಂ ಚಾಸ್ತಿ ತತ್ಪ್ರಮಾಣಮ್–ತತ್ವಪ್ರದೀಪ) ಈ ಪ್ರಮಾಣವನ್ನು ಉದಾಹರಿಸಲಾಗಿದೆ.

2. ವಾಸಿಷ್ಠ ವೃಷ್ಣಿಪ್ರವರಮಂತ್ರಾಸ್ತತ್ರಾಪಿ ವೀರ್ಯದಾಃ । —ತಂ ಸಾ.ಸಂ 4-42

○ ಕೃಷ್ಣ ಮಂತ್ರದ ಮಹತ್ವವನ್ನು ಪರಿಶೀಲಿಸುವಾಗ ನಮ್ಮ ಕಣ್ಣೆದುರು ಸಾಧನೆಯ ಮಾರ್ಗದಲ್ಲಿ ಎತ್ತರಕ್ಕೆ ಏರಿರುವ ಭಂಡಾರಕೇರಿ ಫಲಿಮಾರು ಮಠಾಧೀಶರಾಗಿರುವ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರ ವ್ಯಕ್ತಿತ್ವದ ಅಭಿವ್ಯಕ್ತಿಯಲ್ಲಿ ಶ್ರೀಕೃಷ್ಣ ಮಂತ್ರದ ಪಾತ್ರವೂ ಇದೆ—ಎಂಬುದನ್ನು ಗಮನಿಸಬೇಕಾದದ್ದು. ಪುತ್ತಿಗೆ ಮಠದ ತಪಸ್ವಿಗಳಾಗಿದ್ದ ಶ್ರೀ ಸುಧೀಂದ್ರತೀರ್ಥ ಶ್ರೀಪಾದರು ಕೃಷ್ಣಮಂತ್ರ ಜಪದಲ್ಲಿ ಸಿದ್ಧಿ ಪಡೆದವರು. ಅವರು ಶ್ರೀ ವಿದ್ಯಾಮಾನ್ಯತೀರ್ಥರ ಉಪನಯನದ ಸಂದರ್ಭದಲ್ಲಿ ಕೃಷ್ಣಮಂತ್ರದ ಉಪದೇಶವನ್ನು ಅನುಗ್ರಹಿಸಿದವರು. ಹೀಗೆ ಪಡೆದ ಶ್ರೀಕೃಷ್ಣಮಂತ್ರದ ಉಪದೇಶವೇ ಮುಂದೆ ಅವರು ಸನ್ಯಾಸವನ್ನು ಸ್ವೀಕರಿಸಿ, ಯಶಸ್ವಿ ಯತಿಗಳಾಗಿ ಮೆರೆಯಲು ಸೋಪಾನವಾಯಿತೆಂದು ಭಾವಿಸಬಹುದಾಗಿದೆ.

ನು ಈ ಮಂತ್ರವನ್ನು ಜಪಿಸುವವರಿಗೆ ವಿಶೇಷವಾಗಿ ಫಲ ನೀಡಲೆಂದೇ ಒಂದು ರೂಪದಿಂದ ಭೂಮಿಯಲ್ಲಿಯೇ ನೆಲೆಸಿರುವನೆಂದ[1] ಮೇಲೆ ಅವನಿಗೆ ಈ ಮಂತ್ರದ ಜಪ ತುಂಬ ಪ್ರಿಯವಾದುದೆಂದು ಸಿದ್ಧಿಸುವುದು.

ಈ ದೃಷ್ಟಿಯಿಂದಲೂ ಸ್ತ್ರೀಯರು ಇದನ್ನು ಅವಶ್ಯವಾಗಿ ಜಪಿಸಬೇಕು. ಸ್ತ್ರೀಯರಿಗೆ ತಮ್ಮ ಪತಿಯೇ ಮುಖ್ಯ ಗುರು ಎನಿಸಿದ್ದು, ಅದರಿಂದಲೇ ಕೃಷ್ಣ ಮಂತ್ರದ ಉಪದೇಶವನ್ನು ಪಡೆದುಕೊಳ್ಳಬೇಕು. ಒಂದು ವೇಳೆ ಪತಿಗೆ ಕೃಷ್ಣ ಮಂತ್ರದ ಉಪದೇಶವಿಲ್ಲ ಎಂದರೆ ಬೇರೆ ಜ್ಞಾನಿಗಳ ಮೂಲಕ ಯತಿಗಳ ಮೂಲಕ ಮಂತ್ರೋಪದೇಶವನ್ನು ಪಡೆದುಕೊಳ್ಳಬೇಕು. ಪತಿಯಿಂದ ಉಪದೇಶವನ್ನು ಪಡಕೊಂಡವರೂ ತಮ್ಮ ಪಾಲಿಗೆ ಮಂತ್ರ ಹೆಚ್ಚು ಫಲಪ್ರದವಾಗಲೆಂದು[2] ಪುನಃ ಯತಿಗಳ ಮೂಲಕ ಉಪದೇಶವನ್ನು ಪಡೆದುಕೊಳ್ಳಬಹುದು.[3]

## ಸ್ತ್ರೀಧರ್ಮದ ಕುಸಿತಕ್ಕೆ ಕಾರಣಗಳು :

ಹೀಗೆ ಧರ್ಮಶಾಸ್ತ್ರದಲ್ಲಿ ನಿರೂಪಿತವಾಗಿರುವಂತೆ ಸ್ತ್ರೀಧರ್ಮದ ಸ್ವರೂಪವನ್ನು ತಿಳಿದುಕೊಂಡ ಬಳಿಕ ಅಂತಹ ಧರ್ಮ ಈಗಿನ ಸಮಾಜದಲ್ಲಿ ದಿನದಿಂದ ದಿನಕ್ಕೆ ಕ್ರಮೇಣ ಕಣ್ಮರೆಯಾಗುತ್ತಿರುವುದಕ್ಕೆ ಪ್ರಮುಖ ಕಾರಣಗಳಾವುವು? ಎಂಬುದನ್ನೂ ಪರಿಶೀಲಿಸಬೇಕು.

### 'ಪುರುಷಪ್ರಧಾನ ಸಮಾಜ' ಎಂಬ ಹುರುಳಿಲ್ಲದ ಆರೋಪ :

ಸ್ತ್ರೀಯರಿಗೆ ಶಾಸ್ತ್ರ ವಿಧಿಸಿರುವ ಪಾತಿವ್ರತ್ಯ ಧರ್ಮದಲ್ಲಿ ಕ್ರಮೇಣ ಅವಿಶ್ವಾಸದ ಗೆದ್ದಲನ್ನು ಹತ್ತಿಸುವುದರಲ್ಲಿ 'ಪುರುಷ ಪ್ರಧಾನ ಸಮಾಜ'ದಿಂದ ಸ್ತ್ರೀಯರ ವಿಷಯದಲ್ಲಿ ಶೋಷಣೆಯನ್ನು ನಡೆಸಲಾಗಿದೆ' – ಎಂಬ ಅಪವಾದ ಹಾಗೂ ಅದನ್ನು ಸುತ್ತುವರಿದು ಹೊರಟ ಅನೇಕ ಹುರುಳಿಲ್ಲದ ವಿಚಾರಗಳನ್ನು ಪ್ರಚುರಪಡಿಸುವ ನಾಟಕ, ಚಲನಚಿತ್ರ, ಕತೆ, ಕಾದಂಬರಿ ಮುಂತಾದವುಗಳದ್ದು ಪ್ರಮುಖ ಪಾತ್ರ.

ಅವುಗಳಲ್ಲಿ ತಮ್ಮ ವಾದಕ್ಕೆ ಪುಷ್ಟಿಕೊಡುವಂತೆ ಪುರುಷರ ಶೋಷಣೆಗೆ ಒಳಗಾದ ಒಂದೆರಡು ಸ್ತ್ರೀಯರ ಜೀವನವನ್ನು ಚಿತ್ರಿಸುವುದರ ಮೂಲಕ ಶಾಸ್ತ್ರದಲ್ಲಿ ಹೇಳಲಾದ ಸ್ತ್ರೀ ಧರ್ಮವೇ ಹೀಗೆ ಪೂರ್ವಾಗ್ರಹಪೀಡಿತವಾದದ್ದೆಂಬ ದುರ್ಭಾವನೆ ಒಡಮೂಡುವಂತೆ ಮಾಡಲಾಗುವುದು.

---

1. ಗೋಪಾಲಮಂತ್ರಂ ಭಜತಾಂ ಫಲಪ್ರದಸ್ತ್ವೇಕೇನ ರೂಪೇಣ ಸ ಭುವ್ಯದೃಶ್ಯತ
—ಮ. ಭಾರ. ತಾ. ನಿ. 32-27
2. 'ನಾರಾಯಣವರ್ಮ'ದ ಉಪದೇಶವನ್ನು ಮೊದಲೇ ಪಡೆದುಕೊಂಡಿದ್ದ ದೇವೇಂದ್ರ ಪುನಃ ವಿಶ್ವರೂಪಾಚಾರ್ಯರಿಂದ ಅದರ ಉಪದೇಶವನ್ನು ಪಡೆದುಕೊಂಡಂತೆ.
3. ಯತಿಗಳ ಮೂಲಕ ಮಂತ್ರೋಪದೇಶ ಪಡೆದುಕೊಳ್ಳಬಯಸುವವರಿಗೆ ಅದಕ್ಕೆಬೇಕಾದ ವ್ಯವಸ್ಥೆಯನ್ನು ಕಲ್ಪಿಸಿಕೊಡಲಾಗುವುದು.

ಸ್ತ್ರೀ ಧರ್ಮಗಳನ್ನೂ ಒಳಗೊಂಡಂತೆ ಧರ್ಮಗಳಿಗೆಲ್ಲ ಮೂಲಾಧಾರವೆನಿಸಿರುವ ವೇದ 'ಅಪೌರುಷೇಯ'ವೆನಿಸಿದ್ದು ಅದರಲ್ಲಿ ಸ್ವತಂತ್ರ ವ್ಯಕ್ತಿಯ ಅಭಿಪ್ರಾಯದ ಪ್ರವೇಶಕ್ಕೆ ಅವಕಾಶವೇ ಇಲ್ಲ.

ಇನ್ನು ವೇದ ಆಧಾರದಲ್ಲಿ ರಚಿತಗಳಾಗಿರುವ ಸ್ಮೃತಿ ಗ್ರಂಥಗಳು ಯಾವುದೇ ಲೌಕಿಕ ಆಸೆ ಆಮಿಷಗಳಿಗಾಗಲೀ, ಪೂರ್ವಾಗ್ರಹಗಳಿಗಾಗಲೀ ಬಲಿಯಾಗದ ಋಷಿ, ಮುನಿಗಳಿಂದ ವ್ಯಷ್ಟಿಯಾಗಿ ಹಾಗೂ ಸಮಷ್ಟಿಯಾಗಿ ಸಮಾಜದ ಹಿತಾಸಕ್ತಿಯಿಂದ ರೂಪುಗೊಂಡವು.

ಧರ್ಮಗಳ ಕುರಿತ, ಸಂಸ್ಕೃತಿಯ ಕುರಿತ ಸಾಕಷ್ಟು ಬೆಳಕು ಚೆಲ್ಲುತ್ತಿರುವ ಮಹಾಭಾರತಾದಿ ಇತಿಹಾಸ ಗ್ರಂಥಗಳನ್ನೂ, ಭಾಗವತಾದಿ ಪುರಾಣ ಗ್ರಂಥಗಳನ್ನೂ ಭಗವಂತನೇ ತನ್ನ ವೇದವ್ಯಾಸ, ನಾರಾಯಣ, ಹಯಗ್ರೀವಾದಿ ರೂಪಗಳಿಂದ ರಚಿಸಿರುವುದು.

ಹೀಗಿರುವಾಗ ಶಾಸ್ತ್ರದಲ್ಲಿ ನಿರೂಪಿತವಾಗಿರುವ ಸ್ತ್ರೀಧರ್ಮ ಪುರುಷಪ್ರಧಾನ ಸಮಾಜದ ಹಿತಾಸಕ್ತಿಯಿಂದ ಮೈತಳೆದದ್ದೆಂಬ ವಾದ ಎಷ್ಟೊಂದು ಅಸಂಗತ !

ಈ ರೀತಿಯಾದ ವಾದವನ್ನು ಮುಂದಿಡುವವರು ತಮ್ಮ ವಾದದ ಪುಷ್ಟಿಗೆ ತೋರಿಸಬಹುದಾದ ಕೆಲವು ವಿಚಾರಗಳನ್ನೂ ಪರಾಮರ್ಶಿಸಬಹುದು—

ಶಾಸ್ತ್ರದಲ್ಲಿ ಯಾವುದೇ ಸಾಧನೆಗೆ, ಉಪಾಸನೆಗೆ ಪುಲ್ಲಿಂಗದ 'ಪುರುಷ' ಮುಂತಾದ ಶಬ್ದಗಳಿಂದಲೇ ಅಧಿಕಾರಿಯನ್ನು ಉಲ್ಲೇಖಿಸುವ ಮೂಲಕ ಸ್ತ್ರೀಯರಿಗೆ ಅಧಿಕಾರವನ್ನು ನೀಡದ ಪ್ರಯುಕ್ತ ಅವರನ್ನು ಕಡೆಗಣಿಸಲಾಗಿದೆ—ಎಂದು ಭಾವಿಸಲು ಅವಕಾಶವಿದೆ. ಆದರೆ ಇಂತಹ ಹೆಚ್ಚಿನ ಪ್ರಸಂಗಗಳಲ್ಲಿ ಪುಲ್ಲಿಂಗದ ಶಬ್ದಗಳಿಂದ ಜೀವನನ್ನು ಅಧಿಕಾರಿಯನ್ನಾಗಿ ಉಲ್ಲೇಖಿಸಿರುವುದೇ ಹೊರತು ಗಂಡಸನ್ನು ಮಾತ್ರ ಅಲ್ಲ. ಹಾಗೆಯೇ 'ಪುರುಷ' ಮುಂತಾದ ಶಬ್ದಗಳಿಂದ ಶರೀರದಲ್ಲಿ ನೆಲೆಸಿರುವವನು (ಪುರಿ ಶೇತೇ ಇತಿ) ಎಂಬ ಅರ್ಥದಲ್ಲಿ ಜೀವಾತ್ಮನನ್ನೇ ಪರಾಮರ್ಶಿಸಿರುವುದು.[1] ಸ್ತ್ರೀಯರ ಜೀವವೂ ಪುಲ್ಲಿಂಗದ ಶಬ್ದಗಳಿಂದಲೇ, ಪುರುಷ

---

1. 'ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ'—ಎಂಬ ಗೀತೆಯ (2-15) ಪುರುಷ ಶಬ್ದದಿಂದ ಸ್ತ್ರೀಯರನ್ನು ಬೇರ್ಪಡಿಸಿದಂತಾಗಬಾರದೆಂದು ಶ್ರೀ ಮಧ್ವಾಚಾರ್ಯರಿಂದ ತಮ್ಮ ಗೀತಾ ಭಾಷ್ಯದಲ್ಲಿ ಗೀತೆಯ ಪುರುಷಶಬ್ದ 'ಶರೀರದಲ್ಲಿ ಇರುವವನು'— ಎಂಬ ಅಭಿಪ್ರಾಯದಲ್ಲಿ ಪ್ರಯೋಗಿಸಲ್ಪಟ್ಟದ್ದೇ ಹೊರತು ಗಂಡಸು ಎಂಬ ಅರ್ಥದಲ್ಲಿ ಅಲ್ಲ ಎಂದು ವ್ಯಾಖ್ಯಾನಿಸುವುದರ ಮೂಲಕ ಶಾಸ್ತ್ರದಲ್ಲಿ ಬೇರೆ ಕಡೆಗಳಲ್ಲೂ ಪುರುಷ ಇತ್ಯಾದಿ ಶಬ್ದಗಳಿಗೆ ಇದೇ ರೀತಿಯಾಗಿ ವ್ಯಾಖ್ಯಾನಿಸಬೇಕೆಂದು ಸೂಚಿತವಾಗಿದೆ.

ಮುಂತಾದ ಶಬ್ದಗಳಿಂದಲೇ ಪ್ರತಿಪಾದ್ಯವಾಗಿರುವುದರಿಂದ ಅದನ್ನೂ ಆ ಎಲ್ಲ ಶಬ್ದಗಳೂ ಪರಾಮರ್ಶಿಸಿಯೇ ತೀರುವವು.

ಶಾಸ್ತ್ರದಲ್ಲಿ ಕೆಲವೆಡೆ ಸ್ತ್ರೀಸಹವಾಸವನ್ನು ಆದಷ್ಟು ದೂರೀಕರಿಸಬೇಕೆಂದು ಹೇಳಿರುವುದು ಸ್ತ್ರೀಯನ್ನು ವಿಷಯ ಪದಾರ್ಥವೆಂದು ಪರಿಗಣಿಸಿ. ಅಂದರೆ ವಿಷಯ ಪದಾರ್ಥವನ್ನಾಗಿಯಷ್ಟೇ ಆಕೆಯನ್ನು ಸ್ವೀಕರಿಸುವುದರಲ್ಲಿ ಆದಷ್ಟು ನಿಯಂತ್ರಣ ತಂದುಕೊಳ್ಳಬೇಕು—ಎಂಬ ಅಭಿಪ್ರಾಯ. ಪುರುಷ ಸ್ತ್ರೀಯ ಕುರಿತು ಹೇಗೋ ಹಾಗೆಯೇ ಸ್ತ್ರೀ ಪುರುಷನ ಕುರಿತೂ ಆದಷ್ಟು ನಿಯಂತ್ರಣದಿಂದಿರಬೇಕೆಂಬುದೂ ಇಲ್ಲಿ ಸೂಚಿತವಾಗದಿರದು.

ದುಷ್ಟ ಸ್ತ್ರೀಯನ್ನು ಅಥವಾ ಪರಸ್ತ್ರೀಯನ್ನು ಸ್ತ್ರೀ ಶಬ್ದದಿಂದ ಪರಾಮರ್ಶಿಸಿ, ಅಂತಹ ಸ್ತ್ರೀಯ ಸಂಪರ್ಕವನ್ನು ನಡೆಸಬಾರದೆಂಬ ಅಭಿಪ್ರಾಯದಲ್ಲಿಯೂ ಕೆಲವೆಡೆ 'ಸ್ತ್ರೀ ಸಂಪರ್ಕ'ವನ್ನು ನಿಷೇಧಿಸಿರುವುದುಂಟು.

ಇನ್ನು ಕೆಲವೆಡೆ ಭಗವಂತನ ವಿಷಯದಲ್ಲಿ ತಾಳಿರುವ 'ಅನ್ಯಥಾ ಬುದ್ಧಿ'ಯನ್ನು 'ಸ್ತ್ರೀ' 'ಯೋಷಿತ್' 'ವನಿತಾ' 'ಪ್ರಮದಾ' ಮುಂತಾದ ಸ್ತ್ರೀವಾಚಕ ಶಬ್ದಗಳಿಂದಲೇ ಪರಾಮರ್ಶಿಸಿ, ಅಂತಹ ಸ್ತ್ರೀಯ ಸಂಗವನ್ನೂ, ಸಂಗಿಗಳ ಸಂಗವನ್ನೂ ದೂರೀಕರಿಸಬೇಕೆಂದು ಎಚ್ಚರಿಸಿರುವುದುಂಟು.[1]

ಅಂತೂ ಸ್ತ್ರೀ ಪುರುಷನ ಸಾಧನೆಗೆ ಮಾರಕಳೆನಿಸಿದ್ದು, ಆಕೆಯನ್ನು ಆದಷ್ಟು ದೂರವಿರಿಸಬೇಕೆಂಬುದೇನೂ ಶಾಸ್ತ್ರದ ಆಂತರ್ಯವಲ್ಲ.

ಸ್ತ್ರೀಗೆ ಸ್ವಾತಂತ್ರ್ಯ ನೀಡಬಾರದೆಂಬ ವಿಚಾರ ಶಾಸ್ತ್ರದಲ್ಲಿ ಬಂದಿರುವುದು ನಿಜ. ಸ್ತ್ರೀಯರು ಯಾವಾಗಲೂ ಅಸ್ವತಂತ್ರರಾಗಿಯೇ ಇರುವಂತೆ ಪುರುಷರು ನೋಡಿಕೊಳ್ಳಬೇಕು — ಎನ್ನುವ 'ಮನುಸ್ಮೃತಿ'[2] ಮುಂದೆ ರಕ್ಷಣೆಯ ವಿಷಯ

---

1. ಕೇಶವೇ ತ್ವನ್ಯಥಾ ಬುದ್ಧಿಃ ಸೈವ ಸ್ತ್ರೀ ಸಂಪ್ರಕೀರ್ತಿತಾ
ತ್ರಿಕಾಲದುಃಖದತ್ವೇನ ಪುಂಸಾಂ ಸಹನಿವಾಸನಾತ್ ।
ಜುಷ್ಟತ್ವಾದ್ ಯೋಷಿದಿತ್ಯುಕ್ತಾ ವಸನಾತ್ ವನಿತೇತಿ ಚ ।
ಪ್ರಮಾದಕರಣತ್ವಾತ್ತು ಪ್ರಮದೇತಿ ಚ ಗೀಯತೇ ।
ತ್ಯಜೇತ್ ತತ್ಸಂಗಿನಾಂ ಸಂಗಂ ಬುಭೂಷುಃ ಪುರುಷಃ ಸದಾ ।
ನ ತಾದೃಶಃ ಕ್ವಚಿದ್ ದೋಷಃ ಪುರುಷಸ್ಯಾಸುಖಾವಹಃ ।
—ಧರ್ಮವಿವೇಕೇ (ಭಾಗ. ತಾ. ನಿ. 11-14-29)

2. ಅಸ್ವತಂತ್ರಾಃ ಸ್ತ್ರಿಯಃ ಕಾರ್ಯಾಃ ಪುರುಷೈಃ ಸ್ವೈರ್ದಿವಾನಿಶಮ್ । —ಮ.ಸ್ಮೃ. 9-2

ಕ್ಕಷ್ಟೇ ಸಂಬಂಧಪಟ್ಟಿರುವುದು ಈ ಅಸ್ವಾತಂತ್ರ್ಯ ಎಂದು ಸ್ಪಷ್ಟೀಕರಿಸಿದೆ— ತಂದೆಯಾದವನು ಕೌಮಾರಾವಸ್ಥೆಯಲ್ಲಿಯೂ, ಪತಿಯಾದವನು ಯೌವನಾವಸ್ಥೆಯಲ್ಲಿಯೂ, ಮಕ್ಕಳು ವೃದ್ಧಾಪ್ಯಾವಸ್ಥೆಯಲ್ಲಿಯೂ ಸ್ತ್ರೀಯಾದವಳಿಗೆ ರಕ್ಷಣೆಯನ್ನು ನೀಡಿ ರಕ್ಷಣೆಯ ವಿಷಯದಲ್ಲಿ ಆಕೆಗೆ ಸ್ವಾತಂತ್ರ್ಯವನ್ನು ನೀಡಬಾರದು.[1]

ಇದು ಬರೇ ಮನುಸ್ಮೃತಿಕಾರನ ವೈಯಕ್ತಿಕವಾದ ಅಭಿಪ್ರಾಯವೆಂದು ಅವನನ್ನಷ್ಟೇ ಶಪಿಸುವಂತಿಲ್ಲ. ಬೇರೆ ಬೇರೆ ಧಾರ್ಮಿಕ ಗ್ರಂಥಗಳಲ್ಲೂ ಈ ಅಭಿಪ್ರಾಯದ ಮಾತುಗಳು ಬಂದಿವೆ.[2] ಆದ್ದರಿಂದ ಈ ವಿಚಾರ ವೈದಿಕ ಧರ್ಮ ಒಪ್ಪಿಕೊಂಡಿರುವಂತಹದ್ದು. ಸ್ತ್ರೀಯರಲ್ಲಿ ಚಾಪಲ್ಯ ಸ್ವಲ್ಪ ಅಧಿಕಪ್ರಮಾಣದಲ್ಲಿ ಇರುವುದರಿಂದ, ಆ ಪ್ರಯುಕ್ತ ಏನೂ ಅನರ್ಥ ಸಂಭವಿಸಬಾರದೆಂಬುದಕ್ಕಾಗಿ[3] ಈ ನಿಯಮ ಬಂದಿರುವುದೇ ಹೊರತು ಸ್ತ್ರೀಯರನ್ನು ಹೀಗೆ ಶೋಷಣೆಗೊಳಪಡಿಸಬೇಕೆಂಬ ದೃಷ್ಟಿಯಿಂದಲ್ಲ. ಎಷ್ಟೋ ಸ್ತ್ರೀಯರು ಇಂತಹ ಚಾಪಲ್ಯಕ್ಕೆ ಒಳಗಾಗುವವರಲ್ಲದಿದ್ದರೂ ಸಾಮಾನ್ಯವಾಗಿ ಸ್ತ್ರೀಯರು ಅಂತಹ ಸ್ವಭಾವದವರೆಂಬ ಕಾರಣದಿಂದ ಸಮಷ್ಟಿ ದೃಷ್ಟಿಯಿಂದ ಹೀಗೆ ಸಮನ್ವಯಗೊಳಿಸಿದೆ.

ಆದ್ದರಿಂದ ಈ ಎಲ್ಲ ವಿಚಾರಗಳ ಹಿನ್ನೆಲೆಯಲ್ಲಿ ಶಾಸ್ತ್ರದಲ್ಲಿ ಪುರುಷಪ್ರಧಾನ ಸಮಾಜದ ಹಿತಾಸಕ್ತಿಯಿಂದ ನಡೆದುಕೊಳ್ಳಲಾಗಿದೆ—ಎಂದು ಆರೋಪಿಸುವುದು ಅನುಚಿತ.

ಅಲ್ಲದೆ, ಶಾಸ್ತ್ರದಲ್ಲಿ ಸ್ತ್ರೀಗೆ ಎಷ್ಟು ಪ್ರಾಶಸ್ತ್ಯವನ್ನು ನೀಡಲಾಗಿದೆ— ಎಂಬುದನ್ನು ವಿಶ್ಲೇಷಿಸಿಕೊಂಡೆವೆಂದರೂ ಶಾಸ್ತ್ರಕಾರರು ಪುರುಷಪ್ರಧಾನ

---

1. ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ ।
ರಕ್ಷಂತಿ ಸ್ಥವಿರೇ ಪುತ್ರಾ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ । —ಮ.ಸ್ಮೃತಿ 9-3

2. ಅಸ್ವತಂತ್ರಾ ಸ್ತ್ರೀ ಪುರುಷಪ್ರಧಾನಾ । .... ಅಥಾಪ್ಯುದಾಹರಂತಿ ।
ಪಿತಾ ರಕ್ಷತಿ ಕೌಮಾರೇ....ಸ್ವಾತಂತ್ರ್ಯಮರ್ಹತಿ — ವಸಿಷ್ಠಸ್ಮೃತಿ 5-1, 4

○ ಏತದೇವ ಪರಂ ರಾಮ ರಾಮಾಣಾಂ ಧರ್ಮಕಾರಣಮ್ ।
ಯದಾಸಾಂ ಸರ್ವಕಾರ್ಯೇಷು ನಿತ್ಯಂ ಹಿ ಪರತಂತ್ರತಾ ॥
—ವಿ. ಧರ್ಮೋತ್ತರ 2-34-2

○ ಬಾಲ್ಯೇ ಪಿತುರ್ವಶೇ ತಿಷ್ಠೇತ್ ಪಾಣಿಗ್ರಾಹಸ್ಯ ಯೌವನೇ ।
ಪುತ್ರಾಣಾಂ ಭರ್ತರಿ ಪ್ರೇತೇ ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ —ವಿ. ಧ. 2-34-3

4. ಪಿತ್ರಾ ಭ್ರಾತ್ರಾ ಸುತೇನೇಹ ನೇಚ್ಛೇದ್ವಿರಹಮಾತ್ಮನಃ । ತೇಷಾಂ ಚ ವಿರಹೇಣ ಸ್ತ್ರೀ ಗರ್ಹ್ಯೇ ಕುರ್ಯಾದುಭೇ ಕುಲೇ —ವಿ. ಧರ್ಮೋತ್ತರ 2-34-4

ಸಮಾಜದ ಹಿತಾಸಕ್ತಿಗೊಳಗಾದವರೆಂಬ ಅಪವಾದ ಎಷ್ಟೊಂದು ಅರ್ಥಹೀನವಾದು ದೆಂಬುದು ಸ್ಪಷ್ಟವಾಗಬಲ್ಲದು.

ಹತ್ತು ಶ್ರೋತ್ರಿಯರನ್ನು ಆಚಾರ್ಯನೊಬ್ಬನು ಮೀರುತ್ತಿದ್ದರೆ, ಅಂತಹ ಹತ್ತು ಆಚಾರ್ಯರನ್ನು ಉಪಾಧ್ಯಾಯನೊಬ್ಬನು ಮೀರುವನು. ಅಂತಹ ಹತ್ತು ಉಪಾಧ್ಯಾಯರನ್ನು ತಂದೆಯೊಬ್ಬನು ಮೀರುತ್ತಿದ್ದು, ಅಂತಹ ಹತ್ತು ತಂದೆಯ ರನ್ನು ತಾಯಿಯೊಬ್ಬಳು ಮೀರಬಲ್ಲಳು. ಅಥವಾ ಗುರುತ್ವದ ದೃಷ್ಟಿಯಲ್ಲಿ ತಾಯಿ ಯಾದವಳು ಸಮಗ್ರ ಭೂಮಿಯನ್ನೇ ಅತಿಕ್ರಮಿಸಬಲ್ಲಳು—ಎಂದು ತಾಯಿಯ ಗುರುತ್ವ ಇತರರೆಲ್ಲರಿಗಿಂತಲೂ ಮಿಗಿಲಾದುದೆಂಬುದನ್ನು ತಿಳಿಸಿರುವ ಮಹಾಭಾರತ, 'ತಾಯಿಗೆ ಸರಿದೂಗುವ ಗುರುವೇ ಇಲ್ಲ' —ಎಂದು ಸಾರುವಷ್ಟು ಮುಂದುವರಿ ದಿದೆ. [1]

ಹೀಗೆ ಸ್ತ್ರೀಗೆ ತಾಯಿಯಾಗಿ ಮಹತ್ತ್ವವನ್ನು ನೀಡಲಾಗಿರುವುದಲ್ಲದೆ, ಪತ್ನಿ ಯಾಗಿಯೂ ಸಾಕಷ್ಟು ಪ್ರಾಶಸ್ತ್ಯವನ್ನು ಕೊಡಲಾಗಿದೆ.

ಒಳ್ಳೆಯ ಸಂತಾನವನ್ನು ಪಡೆಯುವುದು, ಧರ್ಮಕಾರ್ಯಗಳನ್ನು ನಡೆಸು ವುದು, ಗುರುಹಿರಿಯರ ಸೇವೆ, ಲೌಕಿಕ ಸುಖ, ತನಗೆ ಹಾಗೂ ಪಿತೃಗಳಿಗೆ ಸ್ವರ್ಗ ಇವೆಲ್ಲ ಮುಖ್ಯವಾಗಿ ಪತ್ನಿಯಾದವಳನ್ನು ಅವಲಂಬಿಸಿರುವವು. [2] ಧರ್ಮ, ಅರ್ಥ, ಕಾಮ, ಪುರುಷಾರ್ಥಗಳನ್ನು ನಿರ್ವಹಿಸುವ ಪ್ರಸಂಗಗಳಲ್ಲಿ ಪತ್ನಿ ಮುಖ್ಯ ಸಹಾಯಕಳು. [3] ಅಸಹಾಯಕನಾದ ಪುರುಷನಿಗೆ ಲೋಕಯಾತ್ರೆಯನ್ನು ನಿರ್ವಹಿಸುವಲ್ಲಿ ಮುಖ್ಯವಾಗಿ ನೆರವಾಗುವ ಪತ್ನಿಯು ಆತನ ಪಾಲಿಗೆ ಶ್ರೇಷ್ಠ ಸಂಪತ್ತು. [4] ಪತ್ನಿಗೆ ಸದೃಶನಾದ ಬಂಧುವಿಲ್ಲ; ಪತ್ನಿಗೆ ಸದೃಶವಾದ ಆಶ್ರಯ

---

1. ದಶೈವ ತು ಸದಾಽಚಾರ್ಯಃ ಶ್ರೋತ್ರಿಯಾನತಿರಿಚ್ಯತೇ । ದಶಾಚಾರ್ಯಾನು- ಪಾಧ್ಯಾಯ ಉಪಾಧ್ಯಾಯಾನ್ ಪಿತಾ ದಶ । ಪಿತ್ನೄನ್ ದಶ ತು ಮಾತೈಕಾ ಸರ್ವಾಂ ವಾ ಪೃಥಿವೀಮಪಿ । ಗುರುತ್ವೇನಾಭಿಭವತಿ ನಾಸ್ತಿ ಮಾತೃಸಮೋ ಗುರುಃ"
—ಮ. ಭಾರ. ಶಾಂತಿ 108/16, 17, 18

2. ಅಪತ್ಯಂ ಧರ್ಮಕಾರ್ಯಾಣಿ ಶುಶ್ರೂಷಾ ರತಿರುತ್ತಮಾ ।
ದಾರಾಧೀನಸ್ತಥಾ ಸ್ವರ್ಗಃ ಪಿತೄಣಾಮಾತ್ಮನಶ್ಚ ಹ । —ಮನು. 9-28

3. ಧರ್ಮಾರ್ಥಕಾಮಕಾಲೇಷು ಭಾರ್ಯಾ ಪುಂಸಃ ಸಹಾಯಿನೀ ॥
—ಭಾರ. ಶಾಂತಿ. 144-13

4. ಭಾರ್ಯಾ ಹಿ ಪರಮೋ ಹ್ಯರ್ಥಃ ಪುರುಷಸ್ಯೇಹ ಪಠ್ಯತೇ ।
ಅಸಹಾಯಸ್ಯ ಲೋಕೇಽಸ್ಮಿನ್ ಲೋಕಯಾತ್ರಾಸಹಾಯಿನೀ ॥ -ಭಾರ.ಶಾಂ. 144-14

ವಿಲ್ಲ. ಧರ್ಮಸಂಗ್ರಹದಲ್ಲಿ ಪತ್ನಿಗೆ ಸದೃಶನಾದ ಸಹಾಯಕನಿಲ್ಲ.[1]

ರೋಗಗಳಿಗೆ ತುತ್ತಾದವನ ಪಾಲಿಗಾಗಲೀ, ಕ್ಲೇಶಗಳಿಗೆ ಬಲಿಯಾದವನ ಪಾಲಿಗಾಗಲೀ, ಇತರ ಯಾವುದೇ ಬಗೆಯ ದುಃಖಗಳಿಗೆ ಗುರಿಯಾದವನ ಪಾಲಿಗಾಗಲೀ ಅವನ ಪತ್ನಿಗೆ ಸಮಾನವಾದ ಔಷಧ ಮತ್ತೊಂದು ಇರಲಾರದು.[2] ಮಕ್ಕಳು, ಮೊಮ್ಮಕ್ಕಳು, ಸೊಸೆಯಂದಿರು, ಭೃತ್ಯರು — ಇವರಿಂದೆಲ್ಲ ತುಂಬಿಕೊಂಡಿದ್ದರೂ ಪತ್ನಿಯೊಬ್ಬಳಿಲ್ಲವೆಂದರೆ ಅಂತಹ ಮನೆ ಗೃಹಸ್ಥನ ಪಾಲಿಗೆ ಶೂನ್ಯವೆನಿಸುವುದು.[3] ಗೃಹಿಣಿಯೇ ನಿಜವಾದ ಮನೆ. ಗೃಹಿಣಿ ಇಲ್ಲದ ಬರೀ ಮನೆ, ಮನೆಯೇ ಅಲ್ಲ, ಅದು ಅರಣ್ಯಸದೃಶವಾದುದು.[4] ಮನೆಯಲ್ಲಿ ಸ್ತ್ರೀಗೂ ಶ್ರೀದೇವಿಗೂ ಏನೂ ವಿಶೇಷವಿಲ್ಲ. ಅರ್ಥಾತ್ ಮನೆಯಲ್ಲಿ ಸ್ತ್ರೀ ಆ ಮನೆಯ ಪಾಲಿಗೆ ಶ್ರೀದೇವಿ ಎನಿಸುವಳು. ಆದ್ದರಿಂದ ತುಂಬ ಯತ್ನಪಟ್ಟು ಸ್ತ್ರೀಯರನ್ನು ಯಾವಾಗಲೂ ಗೌರವಿಸಬೇಕು.[5] ಪತ್ನಿಯನ್ನು ಪಡೆಯುವವರೆಗೂ ಪುರುಷನು ಅರ್ಧನಾಗಿರುವನೇ ಹೊರತು ಪೂರ್ಣನಾಗಿರುವುದಿಲ್ಲ.[6] ಯಾವ ಕುಲಗಳಲ್ಲಿ ಸಾಧ್ವಿಯರಾದ ಸ್ತ್ರೀಯರು ಕುಲದ ಹೊಣೆಗಾರಿಕೆಯನ್ನು ಹೊರುವವರಾಗಿರುವರೋ ಅಂತಹ ಕುಲಗಳು ಐಶ್ವರ್ಯದ ದೃಷ್ಟಿಯಿಂದ ಪರಿಗಣನೀಯವೆನಿಸದಿದ್ದರೂ ಮಹಾ

---

1. ನಾಸ್ತಿ ಭಾರ್ಯಾಸಮೋ ಬಂಧುರ್ನಾಸ್ತಿ ಭಾರ್ಯಾಸಮಾ ಗತಿಃ ।
ನಾಸ್ತಿ ಭಾರ್ಯಾಸಮೋ ಲೋಕೇ ಸಹಾಯೋ ಧರ್ಮಸಂಗ್ರಹೇ ॥
—ಭಾರ. ಶಾಂತಿ. 144-16

2. ತಥಾ ರೋಗಾಭಿಭೂತಸ್ಯ ನಿತ್ಯಂ ಕೃಚ್ಛ್ರಗತಸ್ಯ ಚ ।
ನಾಸ್ತಿ ಭಾರ್ಯಾಸಮಂ ಕಿಂಚಿನ್ನರಸ್ಯಾರ್ತಸ್ಯ ಭೇಷಜಮ್ ॥ —ಭಾರ. ಶಾಂತಿ. 144-15

3. ಪುತ್ರಪೌತ್ರವಧೂಭೃತ್ಯೈರಾಕೀರ್ಣಮಪಿ ಸರ್ವತಃ ।
ಭಾರ್ಯಾಹೀನಂ ಗೃಹಸ್ಥಸ್ಯ ಶೂನ್ಯಮೇವ ಗೃಹಂ ಭವೇತ್ ॥
—ಭಾರ. ಶಾಂತಿ 144-5

4. ನ ಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹಮುಚ್ಯತೇ ।
ಗೃಹಂ ತು ಗೃಹಿಣೀಹೀನಮರಣ್ಯಸದೃಶಂ ಮತಮ್ । —ಭಾರ. ಶಾಂತಿ. 144-6

5. ಸ್ತ್ರಿಯಃ ಶ್ರಿಯಶ್ಚ ಗೇಹೇಷು ನ ವಿಶೇಷೋಽಸ್ತಿ ಕಶ್ಚನ ।
ತಸ್ಮಾತ್ ಸರ್ವಪ್ರಯತ್ನೇನ ಪೂಜನೀಯಾಃ ಸದಾ ಸ್ತ್ರಿಯಃ ।
—ವಿ. ಧರ್ಮೋತ್ತರ 2-34-20

6. ಯಾವನ್ನ ವಿಂದತೇ ಜಾಯಾಂ ತಾವದರ್ಧೋ ಭವೇತ್ ಪುಮಾನ್ ।
—ವೇದವ್ಯಾಸ ಸ್ಮೃತಿ 2-14

ತುಲಗಳೆನಿಸುವವು[1] ಸಾಧ್ವಿ ಸ್ತ್ರೀಯರ ಅಪಮಾನ ಯಾವ ಕುಲದಲ್ಲಿ ನಡೆದಿದೆಯೋ ಆ ಕುಲವೇ ಭಸ್ಮವಾಗುವುದು. ಅಂತಹ ಸ್ತ್ರೀಯರಿಗೆ ಗೌರವಾದರಗಳು ಸಂದ ಕುಲವು ಏಳಿಗೆಯನ್ನು ಹೊಂದುವುದು.[2] ಪತಿವ್ರತಾ ಸ್ತ್ರೀಯರ ಪ್ರಭಾವ ಮಹತ್ವಪೂರ್ಣವಾದುದು; ತೇಜಸ್ಸು ಸಹಿಸಲಶಕ್ಯವಾದುದು. ಅಂತಹವರನ್ನೆಂದೂ ಸಿಟ್ಟಿಗೆಬ್ಬಿಸಬಾರದು; ಅಸಡ್ಡೆ ತೋರಿಸಬಾರದು; ಅಪಮಾನಿಸಬಾರದು.[3]

ಯಾವ ಸ್ತ್ರೀ ಪತಿವ್ರತೆಯಾಗಿದ್ದು 'ಸಾಧ್ವೀ' ಎನಿಸುವಳೋ ಅಂತಹವಳನ್ನು ರಾಜನೇ ಮುಂತಾದ ಪ್ರತಿಯೊಬ್ಬನೂ ನಮಸ್ಕರಿಸಬೇಕು; ಗೌರವಿಸಬೇಕು; ಸ್ತುತಿಸಬೇಕು.[4] ಸ್ತ್ರೀಯರು ತಿಂಗಳು ತಿಂಗಳು ತ್ಯಜಿಸುವ ರಜಸ್ಸು, ಅವರ ಪಾಪಗಳನ್ನೂ ದೂರೀಕರಿಸುವುದು. ಆದುದರಿಂದ ಸ್ತ್ರೀಯರು ಎಂದೂ ಕೆಡುವುವುದಿಲ್ಲ.[5] ಸ್ತ್ರೀಯರಿಗೆ ಸೋಮನು ಶೌಚವನ್ನೂ, ಗಂಧರ್ವನು ಶಿಕ್ಷಿತವಾದ ಮಾತನ್ನೂ, ಅಗ್ನಿಯು ಪಾವಿತ್ರ್ಯವನ್ನೂ ನೀಡುವರು. ಆದ್ದರಿಂದ ಸ್ತ್ರೀಯರು ನಿರ್ದುಷ್ಟರಾಗಿರುವರು.[6] ಬ್ರಾಹ್ಮಣರು ಪಾದದ ಭಾಗದಲ್ಲಿ ಪವಿತ್ರರು; ಗೋವುಗಳು ಬೆನ್ನಿನ ಭಾಗದಲ್ಲಿ ಪವಿತ್ರಗಳು. ಆಡು ಹಾಗೂ ಕುದುರೆ ಮುಖದ ಭಾಗ

---

1. ಯೇಷು ಸಾಧ್ವ್ಯಃ ಸ್ತ್ರಿಯೋ ರಾಮ ಕುಲೇಷು ಕುಲಧೂರ್ವಹಾಃ ।
ಮಹಾಕುಲಾನಿ ತಾನೀಹ ಕೃಶಾನ್ಯಪಿ ಧನೈರ್ಯದಿ ॥
—ವಿ. ಧರ್ಮೋತ್ತರ 2-33-13

2. ಸಾಧ್ವೀನಾಮುಪಮಾನೇನ ಕುಲಂ ದಹತಿ ಪೂರುಷಃ ।
ತಾಸಾಂ ಸಂಪೂಜನಾದ್ರಾಮ ಸ್ವಕುಲಂ ಚೋನ್ನತಿಂ ನಯೇತ್ ।
—ವಿ. ಧರ್ಮೋತ್ತರ 2-33-10

3. ತಾಸಾಂ ಪ್ರಭಾವೋ ಹಿ ಮಹಾಂಸ್ತೇಜಶ್ಚೈವಾತಿದುಃಸಹಮ್ ।
ನ ಕೋಪನೀಯಾ ನೋಪೇಕ್ಷ್ಯಾ ನೈವ ತಾಶ್ಚ ವಿಮಾನಯೇತ್ ।
—ವಿ. ಧರ್ಮೋತ್ತರ 2-33-4

○ 'ನ ಧಿಕ್ಕುರ್ಯಾತ್ ಕದಾಚನ........' —ವಿ. ಪುರಾಣ 3-12-30

4. ನಮಸ್ಕಾರ್ಯಾಶ್ಚ ಪೂಜ್ಯಾಶ್ಚ ವಂದನೀಯಾಶ್ಚ ಭಾರ್ಗವ ।
ರಾಜ್ಞಾ ಸರ್ವಪ್ರಯತ್ನೇನ ತಥಾ ಲೋಕೈಶ್ಚ ಸರ್ವಶಃ ।
—ವಿ. ಧರ್ಮೋತ್ತರ 2-33-8

5. ರಾಮಾಸ್ತು ಭೃಗುಶಾರ್ದೂಲ ನ ಪ್ರದುಷ್ಯಂತಿ ಕರ್ಹಿಚಿತ್ ।
ಮಾಸಿ ಮಾಸಿ ರಜಸ್ತಾಸಾಂ ದುಷ್ಕೃತಾನ್ಯಪಕರ್ಷತಿ । —ವಿ. ಧರ್ಮೋತ್ತರ 2-33-16

6. ಸೋಮಸ್ತಾಸಾಂ ದದೌ ಶೌಚಂ ಗಂಧರ್ವಃ ಶಿಕ್ಷಿತಾಂ ಗಿರಮ್ ।
ಅಗ್ನಿಶ್ಚ ಸರ್ವಮೇಧ್ಯತ್ವಂ ತಸ್ಮಾನ್ನಿಷ್ಕಲ್ಮಷಾಃ ಸ್ತ್ರಿಯಃ । —ವಿ.ಧರ್ಮೋತ್ತರ 2-32-17

ದಲ್ಲಿ ಪವಿತ್ರಗಳು. ಸ್ತ್ರೀಯರಾದರೂ ಸಮಗ್ರವಾಗಿ ಪವಿತ್ರರು.[1]

ಹೀಗೆ ಸ್ತ್ರೀಯರಿಗೆ ಇಷ್ಟೊಂದು ಮಹತ್ತ್ವವನ್ನು, ಪಾವಿತ್ರ್ಯವನ್ನು ಶಾಸ್ತ್ರದಲ್ಲಿ ನೀಡಲಾಗಿದೆ ಎಂದ ಮೇಲೆ ಅಂತಹ ಶಾಸ್ತ್ರದಲ್ಲಿ ಸ್ತ್ರೀಯರಿಗೆ ಶೋಷಣೆಯನ್ನು ಮಾಡಲಾಗಿದೆ ಎಂದು ಆರೋಪಿಸುವುದು ತೀರಾ ಅನುಚಿತ ತಾನೇ?

**ಕಚೇರಿಗಳಲ್ಲಿ ಉದ್ಯೋಗ :**

ಸ್ತ್ರೀ ಧರ್ಮಗಳನ್ನು ಉದ್ಧ್ವಂಸಗೊಳಿಸುವುದರಲ್ಲಿ ಪ್ರಧಾನಪಾತ್ರ ಕಚೇರಿಗಳಲ್ಲಿ ಸ್ತ್ರೀಯರ ದುಡಿಯುವ ಪ್ರವೃತ್ತಿದ್ದು. 'ಗೃಹಿಣೀ ಗೃಹಮುಚ್ಯತೇ' ಎನ್ನುವಷ್ಟು ಮನೆಯ ವಾತಾವರಣ ಅದರ ಗೃಹಿಣಿಯನ್ನು ಅವಲಂಬಿಸಿರುತ್ತದೆ ಎಂದ ಮೇಲೆ, ಅಂತಹ 'ಗೃಹಿಣಿ' ಮನೆಗೆ ಬೀಗ ಜಡಿದು ಕಚೇರಿಗೆ ಹೋದಳೆಂದರೆ ಆ ಮನೆ ಮನೆಯಾಗಿ ಹೇಗೆ ತಾನೇ ಉಳಿದೀತು? ತಾನು ಕಚೇರಿಯಲ್ಲಿ ಗುಮಾಸ್ತೆಯಾಗಿಯೂ, ಮನೆಯಲ್ಲಿ ಗೃಹಿಣಿಯಾಗಿಯೂ ದುಡಿಯುವೆನೆಂದು ಎಷ್ಟು ಹೇಳಿಕೊಂಡರೂ ಮನೆಯಲ್ಲಿ ಪೂರ್ಣಾವಧಿಯ ಗೃಹಿಣಿಯಾಗಿ ಸೇವೆ ಸಲ್ಲಿಸಲು ಸಾಧ್ಯವೇ ಇಲ್ಲ ತಾನೇ? ನಿಗದಿತ ಅವಧಿಯೊಳಗೆ ಕಚೇರಿಗಳಲ್ಲಿ ಹಾಜರಿರಬೇಕಾದ ಅವಳು ಬೆಳಿಗ್ಗೆ ಹೊರಡುವ ಸಿದ್ಧತೆಯಲ್ಲಿಯೇ ಮುಳುಗಿದ್ದು, ಪತಿಯ ಸೇವೆಯನ್ನು, ಶಿಶುಗಳ ಲಾಲನೆ ಪೋಷಣೆಗಳನ್ನು, ಗುರುಹಿರಿಯರ ಶುಶ್ರೂಷೆಯನ್ನು ನಿರ್ವಹಿಸಲು ಅದೆಷ್ಟು ಅವಧಾನವನ್ನು ಹೊಂದಿದ್ದಾಳು? ಅವಳ ರಜಾದಿನಗಳನ್ನು ವಿಚಾರಿಸಿಕೊಂಡು ಬಂದರಷ್ಟೇ ಅತಿಥಿ ಅಭ್ಯಾಗತರಿಗೆ ಏನಾದರೂ ಆತಿಥ್ಯ ದೊರಕೀತು!

ಹೀಗೆ ಕಚೇರಿಗಳ ಉದ್ಯೋಗದಲ್ಲಿ ತೊಡಗಿದವಳಿಗೆ ಗೃಹಿಣಿಯ ಧರ್ಮಗಳನ್ನು ನಡೆಸಲು ಅವಕಾಶ, ಅವಧಾನ ದೊರಕಲಾರದು. ಇದಕ್ಕಿಂತಲೂ ಅಪಾಯವೆಂದರೆ ಪ್ರತಿ ತಿಂಗಳು ಪತಿಯಂತೆಯೇ ತಾನೂ ದೊಡ್ಡ ಮೊತ್ತದ ಸಂಪಾದನೆಯನ್ನು ಪಡೆಯುವೆನೆಂದಾಗ ತಾನು ಪತಿಗೆ ಯಾಕೆ ಅಷ್ಟೊಂದು ವಿಧೇಯಳಾಗಿರಬೇಕೆಂದು ಕಾಣಲು ಪ್ರಾರಂಭಿಸಿದರೆ ಆಶ್ಚರ್ಯವಿಲ್ಲ. ಎಷ್ಟೊಂದು ವಿವೇಚನೆಯನ್ನು ತಂದುಕೊಂಡರೂ ದೊಡ್ಡ ಪ್ರಮಾಣದ ಹಣದಿಂದಾಗಿ ಅಹಂಕಾರವನ್ನುಂಟು ಮಾಡುವ ಅದರ ಸ್ವಭಾವದಿಂದ ಪ್ರಭಾವಿತರಾಗದೆ ಇರಲು ಸಾಧ್ಯವೇ ಇಲ್ಲ.

---

1. ಬ್ರಾಹ್ಮಣಾಃ ಪಾದತೋ ಮೇಧ್ಯಾ ಗಾವೋ ಮೇಧ್ಯಾಸ್ತು ಪೃಷ್ಠತಃ ।
ಅಜಾಶ್ವೌ ಮುಖತೋ ಮೇಧ್ಯೌ ಸ್ತ್ರಿಯೋ ಮೇಧ್ಯಾಸ್ತು ಸರ್ವತಃ
—ವಿ. ಧರ್ಮೋತ್ತರ 2-22-13

ಅಲ್ಲದೆ, ಕಚೇರಿಗಳಲ್ಲಿ ದುಡಿಯುವಾಗ ಪರಪುರುಷರ ವಿಶೇಷ ಸಂಪರ್ಕಕ್ಕೊಳಗಾಗುವುದು ಅನಿವಾರ್ಯವಾದುದರಿಂದ, ಅಂತಹ ಸಂಪರ್ಕದಿಂದಾಗಿ ಮಾನಸಿಕ ವ್ಯಭಿಚಾರಕ್ಕೆ ತುತ್ತಾಗಬೇಕಾದ ಸಾಧ್ಯತೆಯೂ ಇಲ್ಲದಿಲ್ಲ.

ಆದ್ದರಿಂದ ತಿಂಗಳು ತಿಂಗಳು ದೊರಕಬಹುದಾದ ಮೂರು ನಾಲ್ಕು ಸಾವಿರ ರೂ. ಒಂದೆಡೆಯಾದರೆ, ಮತ್ತೊಂದೆಡೆ ಗೃಹಿಣಿಯಾಗಿ, ಪ್ರೀತಿಯ ತಾಯಿಯಾಗಿ, ಮಮತೆಯ ಪತ್ನಿಯಾಗಿ ಕರ್ತವ್ಯಗಳನ್ನು ಪೂರೈಸಲಾಗದ ಶೋಚನೀಯ ಸ್ಥಿತಿ ಎಂಬುದನ್ನು ಪರಿಶೀಲಿಸಿಕೊಂಡು ನಡೆಯಬೇಕಾಗಿದೆ.

**ಚಿತ್ರ ನಟಿಯರನ್ನು ಅನುಕರಿಸುವುದು :**

ಸ್ತ್ರೀಧರ್ಮಗಳ ಕುಸಿತಕ್ಕೆ ಮತ್ತೊಂದು ಪ್ರಬಲ ಕಾರಣ ಸ್ತ್ರೀಯರು ತಮ್ಮ ಅಲಂಕಾರ, ಉಡುಪು ತೊಡುಪುಗಳಿಗೆ, ಆಚಾರ ವಿಚಾರಗಳಿಗೆ ಹೆಚ್ಚಾಗಿ ಚಿತ್ರನಟಿಯರನ್ನು ಅನುಕರಿಸುತ್ತಿರುವುದು. ದೂರದರ್ಶನದಲ್ಲಿ, ಚಲನಚಿತ್ರಗಳಲ್ಲಿ, ಬೇರೆ ಬೇರೆ ಪತ್ರಿಕೆಗಳಲ್ಲಿ ಮತ್ತೆ ಮತ್ತೆ ಕಾಣುತ್ತಿರುವ ಅವರ ನಟನೆಗಳು, ವಿಚಾರಗಳು, ವೇಷಭೂಷಣಗಳು ಸ್ತ್ರೀಯರನ್ನು ಸಾಕಷ್ಟು ಪ್ರಭಾವಿತರನ್ನಾಗಿಸುವವು. ಅವರು ತಮಗರಿವಿಲ್ಲದೆಯೇ ಅಲ್ಲಿ ಬಿತ್ತರಿಸಲಾಗುವ ಸಂಸ್ಕೃತಿಯನ್ನೇ ಕ್ರಮೇಣ ತಮ್ಮದ್ದನ್ನಾಗಿಸುವಷ್ಟು ಅವುಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ.

ಹೀಗಾಗಿ ಪಾತಿವ್ರತ್ಯಕ್ಕೆ ಮಾರಕಗಳಾದ, ವೈಧವ್ಯಕ್ಕೆ ಸಂಕೇತಗಳಾದ ಕೇಶ ಕರ್ತನ [1] ಮುಂತಾದವುಗಳನ್ನೂ ಪ್ಯಾಶನ್ನಾಗಿ ಅಳವಡಿಸಿಕೊಳ್ಳುವುದುಂಟು.

**ಇನ್ನಿತರ ಕಾರಣಗಳು :**

ಕಾಲದ ಪ್ರಭಾವ, ಸ್ತ್ರೀಧರ್ಮಗಳನ್ನು ಯಥಾರ್ಥವಾಗಿ, ಸ್ಪಷ್ಟವಾಗಿ ಬೋಧಿಸುವವರ ಕೊರತೆ, ಸ್ತ್ರೀಧರ್ಮಗಳ ಕುರಿತ ಪ್ರತಿಭಟನೆಯ ಮನೋಭಾವ ಮೂಡಿಸುವಂತಹ ಆಧುನಿಕ ಶಿಕ್ಷಣ ಪದ್ಧತಿ, ಮಹಿಳಾ ಸಮಾಜಗಳು—ಮುಂತಾದವೂ ಸ್ತ್ರೀಧರ್ಮಗಳಲ್ಲಿಯ ಅವಿಶ್ವಾಸಕ್ಕೆ ತಮ್ಮ ತಮ್ಮ ಕೊಡುಗೆಯನ್ನು ಸಾಕಷ್ಟು ಸಲಿಸುತ್ತಾ ಬಂದಿವೆ.

---

1. 'ನ ಜಾತು ವಿಧವಾವೇಷಂ ಕದಾಚಿದಪಿ ಧಾರಯೇತ್ ॥
—ಎಂದು ವಿಷ್ಣುಧರ್ಮೋತ್ತರದಲ್ಲಿ (2-34-40) ವಿಧವಾ ಸ್ತ್ರೀಯರಿಗೆ ವಿಹಿತವಾದ ವೇಷವನ್ನು-ಉಳಿದ ಸ್ತ್ರೀಯರು ಎಂದೂ ತೊಡಬಾರದೆಂದು ಎಚ್ಚರಿಸಿದೆ.

ಈ ನಿಟ್ಟಿನಲ್ಲಿ ಧರ್ಮಾಭಿಮಾನಿಗಳು ಚೆನ್ನಾಗಿ ಮನವರಿಕೆ ಮಾಡಿಕೊಂಡು ತಮ್ಮ ತಮ್ಮ ಅಧಿಕಾರದ ವಲಯಕ್ಕೆ ಸೇರಿರುವ ಕ್ಷೇತ್ರದಲ್ಲಿ ಧಾರ್ಮಿಕ ಕುಸಿತ ಮುಂದುವರಿಯದಂತೆ ತಕ್ಕ ಕ್ರಮ ಕೈಗೊಳ್ಳುವುದು ಅತ್ಯವಶ್ಯ.

X X X X

# ಅಥ ಸ್ತ್ರೀ ಜಪಕ್ರಮಃ

## ಪೂರ್ವಸಿದ್ಧತೆ:

ಅಥ ಸ್ನಾನಸಂಕಲ್ಪ :

(ಎರಡು ಬಾರಿ ಆಚಮನ ಮಾಡಿ, ಸಂಕಲ್ಪ ಮಾಡಬೇಕು—ಮುಂದೆ ಕೃಷ್ಣ ಷಡಕ್ಷರ ಮಂತ್ರದ ಜಪಕ್ಕೆ ಹೇಳಲಾಗುವ ಸಂಕಲ್ಪದಂತೆಯೇ ದೇಶಕಾಲಗಳನ್ನೆಲ್ಲ ಉಚ್ಚರಿಸಿ ಕೊನೆಯಲ್ಲಿ ಉದ್ದೇಶಾದಿಗಳನ್ನು ಹೀಗೆ ಉಲ್ಲೇಖಿಸಬೇಕು) ಭಾರತೀ ರಮಣ ಮುಖ್ಯಪ್ರಾಣಾಂತರ್ಗತ ವಾಸುದೇವ ಸಂಕರ್ಷಣ ಪ್ರದ್ಯುಮ್ನಾನಿರುದ್ಧ ಚತುಮೂರ್ತ್ಯಾದ್ಯನಂತಾವತಾರಾತ್ಮಕ ಶ್ರೀ ನಿರ್ದೋಷಾನಂತಕಲ್ಯಾಣಗುಣ ಪರಿಪೂರ್ಣಕ್ಷೀರಾಬ್ಧಿಶಾಯಿ ಪಾಂಡುರಂಗ ವಿಠ್ಠಲಾತ್ಮಕ ಶ್ರೀ ಮಾಸನಿಯಾಮಕ ರುಕ್ಮಿಣೀ ಸತ್ಯಭಾಮಾ ಸಮೇತ ಶ್ರೀ ಮಾಂಗಲ್ಯಮೂರ್ತಿ ಶ್ರೀ ಗೋಪಾಲಕೃಷ್ಣ ಪ್ರೀತ್ಯರ್ಥಂ, ಅಂತಃಕರಣಶುದ್ಧ್ಯರ್ಥಂ, ಜ್ಞಾತಾಜ್ಞಾತದೋಷಪರಿಹಾರಾರ್ಥಂ ಅಶ್ವತ್ಥನಾರಾಯಣತುಲಸೀ ವಿಷ್ಣುವೈಷ್ಣವಸನ್ನಿಧೌ ಭಾಗೀರಥ್ಯಾದಿಸಾರ್ಧ ತ್ರಿಕೋಟಿತೀರ್ಥಾಭಿಮಾನಿದೇವತಾಸನ್ನಿಹಿತೇऽಸ್ಮಿನ್ ಜಲಾಶಯೇ ಪ್ರಾತಃ (ಮಧ್ಯಾಹ್ನ) ಸ್ನಾನಮಹಂ ಕರಿಷ್ಯೇ । (ನೀರುಬಿಡಬೇಕು)

ಅಥ ಸ್ನಾನಾರ್ಘ್ಯ ಪ್ರದಾನಮ್ :

ನಮಃ ಕಮಲನಾಭಾಯ ನಮಸ್ತೇ ಜಲಶಾಯಿನೇ ।
ನಮಸ್ತೇऽಸ್ತು ಹೃಷೀಕೇಶ ಗೃಹಾಣಾರ್ಘ್ಯಂ ನಮೋऽಸ್ತು ತೇ । [1]

[ಬೊಗಸೆಯಲ್ಲಿ ನೀರು ಬಿಡುವುದರ ಮೂಲಕ ಶ್ರೀವಿಷ್ಣುವಿಗೆ ಅರ್ಘ್ಯವನ್ನು ಬಿಡಬೇಕು]

ಏಹಿ ಸೂರ್ಯ ಸಹಸ್ರಾಂಶೋ ತೇಜೋರಾಶೇ ಜಗತ್ಪತೇ ।
ಅನುಕಂಪಯ ಮಾಂ ಭಕ್ತ್ಯಾ ಗೃಹಾಣಾರ್ಘ್ಯಂ ನಮೋऽಸ್ತುತೇ । [2]

[ಬೊಗಸೆಯಲ್ಲಿ ನೀರು ಬಿಡುವುದರ ಮೂಲಕ ಸೂರ್ಯನಿಗೆ ಅರ್ಘ್ಯವನ್ನು ನೀಡಬೇಕು]

---

1. ಪದ್ಮವನ್ನು ಹೊಕ್ಕುಳಲ್ಲಿ ಹೊತ್ತಿರುವ, ಸಮುದ್ರಶಾಯಿಯಾದ ಹೃಷೀಕೇಶ ಇದೋ ನಿನಗೆ ಪ್ರಣಾಮ. ಈ ಅರ್ಘ್ಯ ನಿನಗೆ ಸಲ್ಲಲಿ.
2. ಸಾವಿರಾರು ಕಿರಣಗಳುಳ್ಳ, ತೇಜಸ್ಸಿನ ರಾಶಿಯಂತೆ ಇರುವ, ಜಗತ್ತಿಗೆ ಪೋಷಕನಾದ ಹೇ ಸೂರ್ಯ ಬೇಗ ಉದಯಿಸಿ ಬಾ. ನನ್ನ ಮೇಲೆ ಅನುಕಂಪೆಯನ್ನು ತೋರಿಸು. ಭಕ್ತಿಯಿಂದ ನಾನು ನೀಡುತ್ತಿರುವ ಈ ಅರ್ಘ್ಯ ನಿನಗೆ ಸಲ್ಲಲಿ.

ಬ್ರಹ್ಮಕಮಂಡಲುಸಂಭೂತೇ ಪೂರ್ಣಚಂದ್ರನಿಭಾನನೇ ।
ತ್ರೈಲೋಕ್ಯವಂದಿತೇ ಗಂಗೇ ಗೃಹಾಣಾರ್ಘ್ಯಂ ನಮೋಽಸ್ತು ತೇ [1] ॥
[ಬೊಗಸೆಯಲ್ಲಿ ನೀರು ಬಿಡುವುದರ ಮೂಲಕ ಗಂಗಾದೇವಿಗೆ ಅರ್ಘ್ಯವನ್ನು ಬಿಡಬೇಕು]

## ಅಥ ಗಂಗಾ ಪ್ರಾರ್ಥನಾ :

ನಂದಿನೀ ನಲಿನೀ ಸೀತಾ ಮಾಲತೀ ಚ ಮಲಾಪಹಾ ।
ವಿಷ್ಣುಪಾದಾಬ್ಜಸಂಭೂತಾ ಗಂಗಾ ತ್ರಿಪಥಗಾಮಿನೀ ॥
ಭಾಗೀರಥೀ ಭೋಗವತೀ ಜಾಹ್ನವೀ ತ್ರಿದಶೇಶ್ವರೀ ।
ದ್ವಾದಶೈತಾನಿ ನಾಮಾನಿ ಯತ್ರಯತ್ರ ಜಲಾಶಯೇ ॥
ಸ್ನಾನಕಾಲೇ ಪಠೇನ್ನಿತ್ಯಂ ತತ್ರ ತತ್ರ ವಸಾಮ್ಯಹಮ್ । [2]

[ಈ ಮಂತ್ರದಿಂದ ಜಲಾಶಯದಲ್ಲಿ ಗಂಗಾದೇವಿಯನ್ನು ಚಿಂತಿಸಿ, ಕುಂಕುಮ, ಅರಸಿನಗಳನ್ನು ಆಕೆಗೆ ಸಮರ್ಪಿಸಿ, ಅವಳ ಪ್ರಸಾದವೆಂದು ಭಾವಿಸಿ ಅರಸಿನವನ್ನು ತನ್ನ ಅಂಗಗಳಲ್ಲಿ ಲೇಪಿಸಿಕೊಂಡು ಕಂಠದವರೆಗೆ ಮೀಯಬೇಕು.]

[ಸ್ನಾನ ಮಾಡಿದ ಬಳಿಕ ಮುಂದಿನ ಮಂತ್ರವನ್ನು ಪಠಿಸಿ, ಸ್ನಾನವನ್ನು ದೇವರಿಗೆ ಸಮರ್ಪಿಸಬೇಕು.]

ಮಯಾ ಕೃತ ಪ್ರಾತಃ (ಮಧ್ಯಾಹ್ನ) ಸ್ನಾನಾಖ್ಯ ಕರ್ಮಣಾ
ಪತ್ಯಂತರ್ಗತಃ ಶ್ರೀ ಗೋಪಾಲಕೃಷ್ಣಃ ಪ್ರೀಯತಾಮ್ ।

## ಅಥ ಊರ್ಧ್ವಪುಂಡ್ರಮುದ್ರಾಧಾರಣಮ್ :

[ಆಚಮನ ಮಾಡಿ, ಮುಂದಿನ ಮಂತ್ರವನ್ನು ಪಠಿಸುತ್ತ ಗೋಪೀಚಂದನವನ್ನು ತೇದಬೇಕು.]

---

1. (ಚತುರ್ಮುಖನ ಕಮಂಡಲು ಜಲವೇ ತ್ರಿವಿಕ್ರಮನ ಪಾದಪ್ರಕ್ಷಾಲನದಿಂದಾಗಿ ಗಂಗೆಯಾಗಿ ಹರಿಯಿತು.) ಹೀಗೆ ಚತುರ್ಮುಖನ ಕಮಂಡಲುದಿಂದ ಪ್ರಾದುರ್ಭೂತಳಾದವಳೇ ! ಪೂರ್ಣಚಂದ್ರನಿಗೆ ಸದೃಶವಾದ ಮುಖವುಳ್ಳವಳೇ ಮೂರು ಲೋಕಗಳಿಂದಲೂ ವಂದಿತಳಾದವಳೇ ! ಹೇ ಗಂಗೇ ಇದೋ ನಿನಗೆ ಪ್ರಣಾಮ. ನಾನು ಕೊಡುತ್ತಿರುವ ಅರ್ಘ್ಯವನ್ನು ಸ್ವೀಕರಿಸು.

2. ನಂದಿನೀ ಮುಂತಾದ ನನ್ನ ಹನ್ನೆರಡು ನಾಮಗಳನ್ನು ಸ್ನಾನಕಾಲದಲ್ಲಿ ಯಾವ ಯಾವ ಜಲಾಶಯಗಳಲ್ಲಿ ಪಠಿಸಲಾಗುವುದೋ ಆ ಎಲ್ಲ ಜಲಾಶಯಗಳಲ್ಲಿ ನಿಯತವಾಗಿ ನಾನು ಸನ್ನಿಹಿತಳಾಗಿರುವೆನು ಎಂಬುದಾಗಿ ಗಂಗಾದೇವಿ ಆಶ್ವಾಸನೆ ಕೊಟ್ಟಿರುವಳು.

ಗೋಪೀಚಂದನ ಪಾಪಘ್ನ ವಿಷ್ಣುದೇಹಸಮುದ್ಭವ ।
ಚಕ್ರಾಂಕಿತ ನಮಸ್ತೇಽಸ್ತು ಧಾರಣಾನ್ಮುಕ್ತಿದೋ ಭವ[1] ।

[ತೇದಿದ ಗೋಪೀಚಂದನದಿಂದ ಹಣೆಯ ಮೇಲೆ ಮುತ್ತೈದೆಯರೂ, ವಿಧವೆಯರೂ ಊರ್ಧ್ವಪುಂಡ್ರವನ್ನು ಧರಿಸಿಕೊಳ್ಳಬೇಕು. ಬಳಿಕ ಚಕ್ರಾದಿ ಪಂಚ ಮುದ್ರೆಗಳನ್ನು ಹಚ್ಚಿಕೊಳ್ಳಬೇಕು.[2] ]

ಸುದರ್ಶನ ಮಹಾಜ್ವಾಲ ಕೋಟಿಸೂರ್ಯಸಮಪ್ರಭ ।
ಅಜ್ಞಾನಾಂಧಸ್ಯ ಮೇ ನಿತ್ಯಂ ವಿಷ್ಣೋರ್ಮಾರ್ಗಂ ಪ್ರದರ್ಶಯ[3] ।

[ಹೀಗೆ ಸುದರ್ಶನ ಚಕ್ರವನ್ನು ಪ್ರಾರ್ಥಿಸಿ ಬಲಕೆನ್ನೆಗೆ ೧, ಎದೆಗೆ ೩, ಹೊಟ್ಟೆಗೆ ೫, ಬಲಭಾಗಕ್ಕೆ ೨, ಬಲಸ್ತನದ ಮೇಲೆ ೩, ಬಲ ಭುಜಕ್ಕೆ ೨, ಕುತ್ತಿಗೆ ಬಲಬದಿಗೆ ೧, ಎಡ ಭುಜಕ್ಕೆ ೧, ಹೀಗೆ ಹದಿನೆಂಟು ಚಕ್ರದ ಮುದ್ರೆಗಳನ್ನು ಧರಿಸಿಕೊಳ್ಳಬೇಕು.]

ಪಾಂಚಜನ್ಯ ನಿಜಧ್ವಾನಧ್ವಸ್ತಪಾತಕಸಂಚಯ ।
ತ್ರಾಹಿ ಮಾಂ ಪಾಪಿನಂ ಘೋರಸಂಸಾರಾರ್ಣವಪಾತಿನಮ್[4] ॥

---

1. ಹೇ ಗೋಪೀಚಂದನ, ನೀನು ಪಾಪವನ್ನು ಪರಿಹರಿಸುವವನು. ಶ್ರೀ ವಿಷ್ಣುವಿನ ಶರೀರದಿಂದ ನಿನ್ನ ಅಭಿವ್ಯಕ್ತಿಯಾಗಿದೆ. ಶ್ರೀ ವಿಷ್ಣುವಿನ ಚಿಹ್ನೆಯಾದ ಚಕ್ರದ ಗುರುತು ನಿನ್ನಲ್ಲಿ ಕಾಣಿಸಿಕೊಳ್ಳುವುದು. ನಿನಗೆ ಪ್ರಣಾಮ. ನಿನ್ನನ್ನು ಧರಿಸಿಕೊಂಡಿರುವೆ. ಅದರ ಫಲವಾಗಿ ಪಾಪದಿಂದ ಮುಕ್ತಿಯನ್ನೂ, ಕ್ರಮೇಣ ಸಂಸಾರದಿಂದಲೂ ಬಿಡುಗಡೆಯನ್ನು ಅನುಗ್ರಹಿಸು.

2. ಸ್ತ್ರಿಯಃ ಶೂದ್ರಾಸ್ತಥೈವಾನ್ಯೇ ನ ತಚ್ಚಿಹ್ನವಿವರ್ಜಿತಾಃ ।
ಭವೇಯುಃ ಸರ್ವದಾ ತಸಾಚ್ಛಂಕಚಕ್ರಗದಾಂಬುಜೈಃ । —ಪರಮೇಶ್ವರ ಸಂಹಿತಾ

3. ಹೇ ಸುದರ್ಶನ ಚಕ್ರ! ನೀನು ಮಹಾಜ್ವಾಲೆಗಳನ್ನೊಳಗೊಂಡವನು. ನಿನ್ನ ಪ್ರಭೆ ಕೋಟಿ ಸೂರ್ಯರ ಪ್ರಭೆಗೆ ಸಮಾನವಾದುದು. ಅಂತಹ ನೀನು ಅಜ್ಞಾನದಿಂದ ಕುರುಡನಾದ ನನಗೆ ಯಾವಾಗಲೂ ಶ್ರೀ ವಿಷ್ಣುವಿನ ಮಾರ್ಗವನ್ನು ತೋರಿಸಿಕೊಡು.

4. ಹೇ ಪಾಂಚಜನ್ಯ ಶಂಖವೇ! ನಿನ್ನ ಧ್ವನಿಯಿಂದ ಪಾತಕಗಳ ಸಮೂಹವನ್ನೇ ನಿರ್ಮೂಲನ ಗೊಳಿಸುವ ನೀನು ಈ ಭಯಂಕರವಾದ ಸಂಸಾರ ಸಾಗರದಲ್ಲಿ ಬಿದ್ದಿರುವ ಪಾಪಿಯಾದ ನನ್ನನ್ನು ಉದ್ಧರಿಸು.

(ಹೀಗೆ ಪಾಂಚಜನ್ಯ ಶಂಖವನ್ನು ಪ್ರಾರ್ಥಿಸಿ ಎಡಕೆನ್ನೆಗೆ ೧, ಹೊಟ್ಟೆಯ ಎಡಭಾಗಕ್ಕೆ ೨, ಎಡ ಸ್ತನಕ್ಕೆ ೩, ಎಡಭುಜಕ್ಕೆ ೨, ಎಡ ಕಿವಿಯ ಕೆಳಗೆ ೧, ಬಲ ಭುಜಕ್ಕೆ ೧ — ಹೀಗೆ ಹತ್ತು ಶಂಖದ ಮುದ್ರೆಗಳನ್ನು ಹೆಚ್ಚಾಗಿ ಎಡ ಮಗ್ಗುಲಲ್ಲಿ ಧರಿಸಿಕೊಳ್ಳಬೇಕು.)

ಬ್ರಹ್ಮಾಂಡಭುವನಾರಂಭಮೂಲಸ್ತಂಭೋ ಗದಾಧರಃ ।
ಕೌಮೋದಕೀ ಕರೇ ಯಸ್ಯ ತಂ ನಮಾಮಿ ಗದಾಧರಮ್ ॥ 1

(ಹೀಗೆ ಕೌಮೋದಕೀ ಗದೆಯನ್ನು ಧರಿಸಿರುವ ಶ್ರೀ ವಿಷ್ಣುವನ್ನೂ ಗದಾರೂಪದಲ್ಲಿರುವ ಅವನನ್ನೂ ಸ್ತುತಿಸುತ್ತ ಹಣೆಗೆ ೧, ಹೊಟ್ಟೆಯ ಮತ್ತು ಎದೆಯ ಬಲ ಬಾಗಕ್ಕೆ ೧, ೧, ಬಲ ತೋಳಿಗೆ ೨ ಹೀಗೆ ಗದೆಯ ಒಟ್ಟು ಐದು ಮುದ್ರೆಗಳನ್ನು ಧರಿಸಿಕೊಳ್ಳಬೇಕು.)

ಸಂಸಾರಭಯಭೀತಾನಾಂ ಯೋಗಿನಾಮಭಯಪ್ರದಃ ।
ಪದ್ಮಹಸ್ತೇನ ಯೋ ದೇವೋ ಯೋಗೀಶಂ ತಂ ನಮಾಮ್ಯಹಮ್ । 2

(ಹೀಗೆ ಪದ್ಮವನ್ನು ಧರಿಸಿರುವ ಶ್ರೀ ಹರಿಯನ್ನೂ ಪದ್ಮರೂಪದಲ್ಲಿರುವ ಅವನನ್ನೂ ಸ್ತುತಿಸುತ್ತ ಎದೆಗೆ ೧, ಹೊಟ್ಟೆಯ ಮತ್ತು ಎದೆಯ ಎಡಭಾಗಕ್ಕೂ ೧, ೧, ಬಲ ಭುಜಕ್ಕೆ ೨ ಹೀಗೆ ಒಟ್ಟು ಐದು ಪದ್ಮದ ಮುದ್ರೆಗಳನ್ನು ಧರಿಸಿಕೊಳ್ಳಬೇಕು.)

ನಾರಾಯಣ ನಮಸ್ತೇಽಸ್ತು ನಾಮಮುದ್ರಾಂಕಿತಂ ನರಮ್ ।
ದೃಷ್ಟ್ವೈವ ಲಭತೇ ಮುಕ್ತಿಂ ಚಾಂಡಾಲೋ ಬ್ರಹ್ಮಘಾತಕಃ । 3

[ಹೀಗೆ ನಾರಾಯಣನನ್ನು ಸ್ತುತಿಸುತ್ತ, ಅವನ ನಾರಾಯಣ ಎಂಬ ನಾಮದ ಗುರುತು ಉಳ್ಳ ನಾರಾಯಣ ಮುದ್ರೆಯನ್ನು ಎಲ್ಲ ನಾಮಗಳ ಮೇಲೆ ಹಚ್ಚಿಕೊಳ್ಳಬೇಕು]

---

1. ಬ್ರಹ್ಮಾಂಡವೆಂಬ ಭುವನದ ನಿರ್ಮಾಣದಲ್ಲಿ ಆಧಾರಭೂತವಾದ ಕಂಭದಂತೆ ಇರುವವನು ಗದಾಧಾರಿಯಾದ ಶ್ರೀ ವಿಷ್ಣುವು. ಕೌಮೋದಕೀ ಎಂಬ ಗದೆಯನ್ನು ಕೈಯಲ್ಲಿ ಧರಿಸಿರುವ ಅವನನ್ನು ನಮಸ್ಕರಿಸುವೆನು.

2. ಸಂಸಾರಭಯದಿಂದ ಕೂಡಿರುವ ಯೋಗಿಗಳಿಗೆ ಅಭಯವನ್ನು ಅನುಗ್ರಹಿಸಿರುವ ಯೋಗೀಶನಾದ ಶ್ರೀಹರಿಯು ತನ್ನ ಒಂದು ಕೈಯಲ್ಲಿ ಪದ್ಮವನ್ನು ಧರಿಸಿಕೊಂಡಿರುವನು. ಅಂತಹ ಶ್ರೀ ಹರಿಯನ್ನು ನಮಸ್ಕರಿಸುವೆನು.

3. ಹೇ ನಾರಾಯಣ! ನಿನಗೆ ಪ್ರಣಾಮ. ನಿನ್ನ ನಾರಾಯಣ ಎಂಬ ನಾಮವನ್ನೊಳಗೊಂಡ ನಾರಾಯಣ ಮುದ್ರೆಗಳಿಂದ ಚಿಹ್ನಿತನಾದ ಮನುಷ್ಯನನ್ನು ನೋಡಿಯೇ ಬ್ರಹ್ಮಹತ್ಯೆಯನ್ನೆಸಗಿದ ಚಾಂಡಾಲನೂ ಮುಕ್ತಿಯನ್ನು ಹೊಂದುವನು.

**ಅಥ ಕುಂಕುಮಧಾರಣಮ್ :**

ಊರ್ಧ್ವಪುಂಡ್ರಂ ಲಲಾಟೇ ತು ಭರ್ತುರಾಯುಷ್ಯವರ್ಧಕಮ್ ।
ಲಲಾಟಕುಂಕುಮಂ ಚೈವ ಸದಾ ಲಕ್ಷ್ಮೀನಿವಾಸಕಮ್ । [1]

(ಈ ಮಂತ್ರವನ್ನು ಹೇಳುತ್ತ ಊರ್ಧ್ವಪುಂಡ್ರ ರೂಪದಲ್ಲಿ ಕುಂಕುಮವನ್ನು ಹಚ್ಚಿಕೊಳ್ಳಬೇಕು )

# ಸ್ತ್ರೀ ಜಪ ಪದ್ಧತಿ

## ಆಚಮನ :

ಕೇಶವಾಯ ಸ್ವಾಹಾ । ನಾರಾಯಣಾಯ ಸ್ವಾಹಾ । ಮಾಧವಾಯ ಸ್ವಾಹಾ । [ಈ ಮೂರು ನಾಮಗಳನ್ನು ಪಠಿಸುತ್ತ ಉದ್ದಿನ ಕಾಳು ಮುಳುಗುವಷ್ಟೇ ಪ್ರಮಾಣದಲ್ಲಿ ಬಲ ಅಂಗೈಯನ್ನು ಗೋಕರ್ಣಾಕೃತಿಯನ್ನಾಗಿಸಿ ಅದರ ಬುಡದಿಂದ ಮೂರು ಬಾರಿ ನೀರನ್ನು ತೆಗೆದುಕೊಳ್ಳಬೇಕು.]

ಗೋವಿಂದಾಯ ನಮಃ
ವಿಷ್ಣವೇ ನಮಃ } (ಮೇಲಿನ ಮತ್ತು ಕೆಳಗಿನ ತುಟಿಗಳನ್ನು ಅಡ್ಡವಾಗಿ ತೊಳೆದುಕೊಳ್ಳಬೇಕು)

ಮಧುಸೂದನಾಯ ನಮಃ (ಬಾಯಿಯನ್ನು ಕೆಳಗಿನಿಂದ ಮೇಲಕ್ಕೆ ತೊಳೆದುಕೊಳ್ಳಬೇಕು)

ತ್ರಿವಿಕ್ರಮಾಯ ನಮಃ (ಪಾದಗಳ ಮೇಲ್ಭಾಗಕ್ಕೆ ನೀರನ್ನು ಸಿಂಪಡಿಸಬೇಕು)

ವಾಮನಾಯ ನಮಃ (ಅಂಗುಷ್ಠ ಮತ್ತು ಉಂಗುರ ಬೆರಳುಗಳನ್ನು ಜೋಡಿಸಿ ಎರಡು ಕಣ್ಣುಗಳನ್ನು ಮುಟ್ಟಬೇಕು)

ಶ್ರೀಧರಾಯ ನಮಃ (ಅಂಗುಷ್ಠ ಮತ್ತು ತೋರ್ಬೆರಳುಗಳಿಂದ ತೋಳನ್ನು ಮುಟ್ಟಬೇಕು)

ಹೃಷೀಕೇಶಾಯ ನಮಃ (ಅಂಗುಷ್ಠ ಮತ್ತು ಕಿರು ಬೆರಳುಗಳಿಂದ ಕಿವಿಗಳನ್ನು ಮುಟ್ಟಬೇಕು)

---

1. ಸ್ತ್ರೀಯ ಹಣೆಯ ಮೇಲೆ ರಾರಾಜಿಸುತ್ತಿರುವ ಊರ್ಧ್ವಪುಂಡ್ರ ರೂಪದಲ್ಲಿರುವ ಕುಂಕುಮ ಪತಿಯ ಆಯುಷ್ಯವನ್ನು ಹೆಚ್ಚಿಸುವಂತಹದ್ದು. ಹಾಗೂ ಅದು ಲಕ್ಷ್ಮೀ ದೇವಿಯ ಸನ್ನಿಧಾನಕ್ಕೆ ಪಾತ್ರವಾದದ್ದು.

ಪದ್ಮನಾಭಾಯ ನಮಃ (ಎಲ್ಲ ಬೆರಳುಗಳಿಂದ ಎಡಗೈಯನ್ನು ಮುಟ್ಟಬೇಕು)
ದಾಮೋದರಾಯ ನಮಃ (ಮಧ್ಯ ಬೆರಳಿನಿಂದ ಮೂಲಾಧಾರವನ್ನು ಮುಟ್ಟಬೇಕು)
ಪರಮಾತ್ಮನೇ ನಮಃ (ಎಲ್ಲ ಬೆರಳುಗಳಿಂದ ಹೃದಯವನ್ನು ಮುಟ್ಟಬೇಕು)

**ಸಂಕಲ್ಪ :**

1 ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣೋ
ದ್ವಿತೀಯಪರಾರ್ಧೇ ಶ್ವೇತವರಾಹಕಲ್ಪೇ ವೈವಸ್ವತಮನ್ವಂತರೇ
ಅಷ್ಟಾವಿಂಶತಿತಮೇ ಕಲಿಯುಗೇ ಪ್ರಥಮಪಾದೇ
ಜಂಬೂದ್ವೀಪೇ ಭಾರತವರ್ಷೇ ಭರತಖಂಡೇ
ಮೇರೋರ್ದಕ್ಷಿಣಪಾರ್ಶ್ವೇ ದಂಡಕಾರಣ್ಯೇ ಗೋದಾವರ್ಯಾಃ
ದಕ್ಷಿಣಕೂಲೇ ಶಾಲೀವಾಹನಶಕೇ ಬುದ್ಧಾವತಾರೇ ಅಸ್ಮಿನ್
ಪ್ರವರ್ತಮಾನೇ....ಸಂವತ್ಸರೇ....ಅಯನೇ....ಋತೌ....ಅರ್ಕೇ....
ಮಾಸೇ....ಪಕ್ಷೇ....ಶುಭತಿಥೌ....ವಾಸರಯುಕ್ತಾಯಾಂ,
ಶುಭ ನಕ್ಷತ್ರ, ಶುಭ ಯೋಗ, ಶುಭಕರಣೈವಂಗುಣ ವಿಶೇಷಣ
ವಿಶಿಷ್ಟಾಯಾಂ ಶುಭತಿಥೌ ಅಸ್ಮತ್‌ಪತ್ಯಂತರ್ಗತ ಭಾರತೀ

---

ಅಥ ತೀರ್ಥಾಭಿಮಾನಿ ದೇವತಾ ಪ್ರಾರ್ಥನಾ—

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ।

ಜಪ ಮಾಡಲು ಬಳಸಲಾಗುವ ನೀರನ್ನು ಮುಟ್ಟಿಕೊಂಡು ಅದರಲ್ಲಿ ಗಂಗಾದಿ ನದಿಗಳ ಅಭಿಮಾನಿ ದೇವತೆಗಳ ಸನ್ನಿಧಾನವನ್ನು ಪ್ರಾರ್ಥಿಸಬೇಕು—

ಹೇ ಗಂಗೇ, ಯಮುನೇ, ಗೋದಾವರಿ, ಸರಸ್ವತಿ, ನರ್ಮದೇ, ಸಿಂಧು, ಕಾವೇರಿ– ಹೀಗೆ ಏಳು ನದಿಗಳ ಅಭಿಮಾನಿ ದೇವತೆಗಳೇ ಈ ನೀರಿನಲ್ಲಿ ಸನ್ನಿಹಿತರಾಗಿರಿ.

1. ಶ್ರೀ ವಿಷ್ಣುವಿನ ಆದೇಶಾನುಸಾರವಾಗಿ ಕಾಲಚಕ್ರ ಉರುಳುತ್ತಿದೆ. ಅದರಲ್ಲಿ ಚತುರ್ಮುಖನ ಎರಡನೇ ಪರಾರ್ಧದ ಶ್ವೇತವರಾಹ ಕಲ್ಪ ಎಂಬುದಾಗಿ ಮೊದಲಿನ ವರ್ಷದ ಮೊದಲ ದಿನದ ಹಗಲು ಈಗ ನಡೆಯುತ್ತಿದೆ. ಈ ಶ್ವೇತ ವರಾಹ ಕಲ್ಪದಲ್ಲೂ ಏಳನೆಯದಾದ ವೈವಸ್ವತ ಮನ್ವಂತರದ ಇಪ್ಪತ್ತೆಂಟನೆಯ ಚತುರ್ಯುಗದಲ್ಲಿ ಕಲಿಯುಗ ನಡೆಯುತ್ತಿದೆ. ನಾಲ್ಕು ಪಾದಗಳನ್ನೊಳಗೊಂಡ ಕಲಿಯುಗದ ಮೊದಲ ಪಾದ ಈಗ ನಡೆಯುತ್ತಿದೆ.
ಭೂಲೋಕದ ಸಪ್ತದ್ವೀಪಗಳಲ್ಲಿ ಜಂಬೂದ್ವೀಪ ಒಂದಾಗಿದ್ದು, ಅವುಗಳಲ್ಲಿರುವ

ರಮಣಮುಖ್ಯಪ್ರಾಣಾಂತರ್ಗತವಾಸುದೇವಸಂಕರ್ಷಣಪ್ರದ್ಯುಮ್ನಾನಿರುದ್ಧ ಚತುರ್ಮೂರ್ತ್ಯಾದ್ಯಂನತಾವತಾರಾತ್ಮಕ ಶ್ರೀಕೃಷ್ಣಪ್ರೇರಣಯಾ ಶ್ರೀಕೃಷ್ಣ-ಪ್ರೀತ್ಯರ್ಥಂ ಯಥಾಶಕ್ತಿ ಶ್ರೀಕೃಷ್ಣಷಡಕ್ಷರಜತರ್ಪಣಾಖ್ಯಂ ಕರ್ಮ ಕರಿಷ್ಯೇ ।
(ಉದ್ಧರಣೆಯಿಂದ ನೀರು ತೆಗೆದು ಅಂಗೈಗೆ ಹಾಕಿ ಬಿಡಬೇಕು.)

---

ಒಂಭತ್ತು ಖಂಡಗಳಲ್ಲಿ ಭಾರತವೂ ಒಂದು. ಈ ಭಾರತದ ದಂಡಕಾರಣ್ಯ ಪ್ರದೇಶದಲ್ಲಿ ಗೋದಾವರಿಯ ದಕ್ಷಿಣ ತೀರದಲ್ಲಿ ನಾವಿದ್ದೇವೆ. ಕಲಿಯುಗದ ಪ್ರಥಮ ಪಾದದಲ್ಲಿ ಶಾಲಿವಾಹನ ಶಕೆ ನಡೆಯುತ್ತಿದೆ. ವಿಷ್ಣುವಿನ ದಶಾವತಾರಗಳಲ್ಲಿ ಒಂಭತ್ತನೆಯದಾದ ಬುದ್ಧಾವತಾರವಾಗಿದೆ. ಸಂವತ್ಸರ, ಅಯನ, ಋತು, ಅರ್ಕ, ಮಾಸ, ಪಕ್ಷ, ತಿಥಿ, ವಾರ, ನಕ್ಷತ್ರ, ಯೋಗ, ಕರಣ ಮುಂತಾದ ಕಾಲ ವಿಭಾಗಗಳ ಚಕ್ರ ಶ್ರೀ ವಿಷ್ಣುವಿನ ಆದೇಶಾನುಸಾರವಾಗಿ ಏನೂ ಅಡಚಣೆ ಇಲ್ಲದೆ ನಿರಂತರವಾಗಿ ಉರುಳುತ್ತಿದೆ.

(ದೇವರನ್ನೂ, ಆನಂದತೀರ್ಥರೇ ಮುಂತಾದ ಗುರುಗಳನ್ನೂ ಪ್ರಾರ್ಥಿಸಬೇಕು)

## ದೇವರ ಗುರುಗಳ ಪ್ರಾರ್ಥನೆ :

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।
ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥

ಶುಭ್ರವಾದ ಉಡುಪನ್ನು ತೊಟ್ಟಿರುವ ಚಂದ್ರನಂತೆ ಚಿನ್ನದ ಬಣ್ಣವನ್ನು ಹೊಂದಿರುವ, ನಾಲ್ಕು ತೋಳುಗಳುಳ್ಳ, ಮಂದಹಾಸ ಯುಕ್ತವಾದ ಮುಖವುಳ್ಳ, ಶ್ರೀ ವಿಷ್ಣುವನ್ನು ಸಕಲ ವಿಘ್ನಗಳ ಪರಿಹಾರಕ್ಕಾಗಿ ಧ್ಯಾನಿಸಬೇಕು.

ರಮಾಪತಿಂ ಪೂರ್ಣಗುಣಂ ಮುಕುಂದಂ ವ್ಯಾಸಂಚ ವಿಜ್ಞಾನ ಸಹಸ್ರ ಭಾನುಮ್
ಪೂರ್ಣಪ್ರಬೋಧಂ ಚ ಸುತತ್ವದೀಪಂ ಕ್ರಮಾದ್ಗುರೂಂಶ್ಚ ಪ್ರಣಮಾಮಿ ಮೂರ್ಧ್ನಾ ॥

ರಮಾದೇವಿಯ ಪತಿಯಾದ, ಗುಣಪೂರ್ಣನಾದ ಮುಕುಂದನನ್ನೂ, ವಿಜ್ಞಾನಾತ್ಮಕಗಳಾದ ಸಾವಿರಾರು ಕಿರಣಗಳುಳ್ಳ ಶ್ರೀ ವೇದವ್ಯಾಸರನ್ನೂ, ಒಳ್ಳೆಯ ತತ್ವಗಳನ್ನು ಪ್ರಚುರಪಡಿಸಿರುವ ಪೂರ್ಣಪ್ರಜ್ಞರೆನಿಸಿರುವ ಶ್ರೀ ಮಧ್ವ ಗುರುಗಳನ್ನೂ ಉಳಿದ ಗುರುಗಳನ್ನೂ ಅವರವರ ಯೋಗ್ಯತೆಗನುಗುಣವಾಗಿ ತಲೆಬಾಗಿ ನಮಿಸುವೆನು.

ಈ ಸಂದರ್ಭದಲ್ಲಿ ಇನ್ನೂ ಕೆಲವು ಶ್ಲೋಕಗಳನ್ನು ಪಠಿಸಬಹುದು—

ಸರ್ವವಿಘ್ನಪ್ರಶಮನಂ ಸರ್ವಸಿದ್ಧಿಕರಂ ಪರಮ್ ।
ಸರ್ವಜೀವಪ್ರಣೇತಾರಂ ವಂದೇ ವಿಜಯದಂ ಹರಿಮ್ ।

ಸಕಲ ವಿಘ್ನಗಳ ಪರಿಹಾರಕನಾದ, ಎಲ್ಲ ಬಗೆಯ ಸಿದ್ಧಿಗಳನ್ನು ಅನುಗ್ರಹಿಸುವ, ಎಲ್ಲೆಡೆ ಗೆಲುವನ್ನು ದಯಪಾಲಿಸುವ ಸಕಲ ಜೀವರಿಗೆ ಪ್ರೇರಕನಾದ, ಸರ್ವೋತ್ತಮನಾದ

ಶ್ರೀ ಹರಿಯನ್ನು ನಮಿಸುವೆನು, ಸ್ತುತಿಸುವೆನು.

ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತಪ್ರವರೋ ಹಿ ಯಃ ।
ಶ್ರೀ ಮದಾನಂದತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಮ್ ।

ಲಕ್ಷ್ಮೀನಾರಾಯಣನನ್ನು ನಮಿಸುವೆನು ಹಾಗೂ ಅವನ ಭಕ್ತರಲ್ಲಿ ಶ್ರೇಷ್ಠರಾದ ಶ್ರೀಮದಾನಂದತೀರ್ಥ ಎಂಬ ಹೆಸರಿನ ಗುರುಗಳನ್ನೂ ನಮಸ್ಕರಿಸುವೆನು.

ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।
ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥

ವೇದ, ರಾಮಾಯಣ, ಪುರಾಣ, ಮಹಾಭಾರತ – ಮುಂತಾದ ಸಚ್ಛಾಸ್ತ್ರಗಳಲ್ಲಿ ಮೊದಲು, ಮಧ್ಯ ಹಾಗೂ ಅಂತ್ಯ ಹೀಗೆ ಎಲ್ಲೆಡೆ ಶ್ರೀ ವಿಷ್ಣುವಿನ ಗುಣಗಾನ ನಡೆದಿದೆ.

ಸರ್ವೋತ್ತಮೋ ವಿಷ್ಣುರಥೋ ರಮಾ ಚ ಬ್ರಹ್ಮಾ ಚ ವಾಯುಶ್ಚ ತದೀಯಪತ್ನ್ಯೌ ।
ಸರ್ವೇ ಚ ದೇವಾಃ ಸತತಂ ಪ್ರಸನ್ನಾ ಹರೌ ಸುಭಕ್ತಿಂ ಮಯಿ ಸಂದಿಶಂತು ।

ಸರ್ವಶ್ರೇಷ್ಠನಾದ ಶ್ರೀ ಹರಿ, ರಮಾದೇವಿ, ಚತುರ್ಮುಖ, ವಾಯು, ಚತುರ್ಮುಖನ ಪತ್ನಿ ಸರಸ್ವತೀ ದೇವಿ, ವಾಯು ದೇವನ ಪತ್ನಿ ಭಾರತೀ ದೇವಿ ಹಾಗೂ ಉಳಿದೆಲ್ಲ ದೇವತೆಗಳು ನನ್ನ ಬಗ್ಗೆ ಅನುಗ್ರಹೋನ್ಮುಖರಾಗಿ ಶ್ರೀ ಹರಿಯ ವಿಷಯದಲ್ಲಿ ದೃಢವಾದ ಭಕ್ತಿಯನ್ನು ನನಗೆ ಕರುಣಿಸಲಿ.

ನಮೋ ವಸ್ತಾತ್ತ್ವಿಕಾ ದೇವಾ ವಿಷ್ಣುಭಕ್ತಿಪರಾಯಣಾಃ ।
ಧರ್ಮಮಾರ್ಗೇ ಪ್ರೇರಯಂತು ಭವಂತಃ ಸರ್ವ ಏವ ಹಿ ॥

ಶ್ರೀ ವಿಷ್ಣುವಿನ ಅನನ್ಯ ಭಕ್ತರಾದ ತತ್ತ್ವಾಭಿಮಾನಿ ದೇವತೆಗಳೇ ಇದೋ ನಿಮಗೆ ಪ್ರಣಾಮ. ನೀವೆಲ್ಲರೂ ಧರ್ಮಮಾರ್ಗದಲ್ಲಿ ಸಂಚರಿಸುವಂತೆ ಪ್ರೇರಿಸಿರಿ.

## ಆಸನ ಶುದ್ಧಿಗಾಗಿ ಪ್ರಾರ್ಥನೆ :

ಪೃಥ್ವಿ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ ।
ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ ॥

(ಭೂಮಿಯನ್ನು ಮುಟ್ಟಿಕೊಂಡು ಪ್ರಾರ್ಥಿಸಬೇಕು)

ಹೇ ಭೂದೇವಿ ನೀನು ವರಾಹ ರೂಪಿ ಅಥವಾ ಕೂರ್ಮ ರೂಪಿ ಪರಮಾತ್ಮನಿಂದ ಧರಿಸಲ್ಪಟ್ಟಿರುವೆ. ಎಲ್ಲ ಲೋಕಗಳನ್ನೂ ಧರಿಸಿರುವವಳು ನೀನು. ಅಂತಹ ನೀನು ನನ್ನನ್ನೂ ಅನುಗ್ರಹಪೂರ್ವಕವಾಗಿ ಧರಿಸಿಕೊಳ್ಳು. ಹಾಗೂ ನನ್ನ ಆಸನವನ್ನು ಪವಿತ್ರಗೊಳಿಸು.

## ಭೂತಾದಿಗಳ ದೂರೀಕರಣ :

ಅಪಸರ್ಪಂತ್ವಿತ್ಯಸ್ಯ ಮಂತ್ರಸ್ಯ ವಾಮದೇವ ಋಷಿಃ ।

ಪ್ರಕೃತಿಶ್ಛಂದಃ ಸತ್ಯೋ ದೇವತಾ ಸಮಸ್ತಭೂತೋಚ್ಚಾಟನೇ ವಿನಿಯೋಗಃ ।
ಅಪಸರ್ಪಂತು ತೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ ।
ಯೇ ಭೂತಾ ಅಂತರಿಕ್ಷಸ್ಥಾ ಯೇ ಭೂತಾ ದಿವಿ ಸಂಸ್ಥಿತಾಃ ।
ಯೇ ಭೂತಾ ವಿಘ್ನಕರ್ತಾರಸ್ತೇ ನಶ್ಯಂತು ಶಿವಾಜ್ಞಯಾ ।
ಭೂತಪ್ರೇತಪಿಶಾಚಾ ಯೇ ಯೇ ಚಾನ್ಯೇ ಭುವಿಭಾರಕಾಃ ।
ತೇಷಾಮಪ್ಯವಿರೋಧೇನ ಜಪಕರ್ಮ ಸಮಾರಭೇ ॥
ನಿರಸ್ತಃ ಪರಾವಸುಃ । ಇದಮಹಮರ್ವಾವಸೋಃ ಸದನೇ ಸೀದಾಮಿ ।

ಯಾವ ಭೂತಗಳು ಭೂಮಿಯಲ್ಲಿ ಇವೆಯೋ ಅವು ದೂರ ಸರಿಯುವಂತಾಗಲಿ. ಯಾವ ಭೂತಗಳು ಜಪಾದಿ ಅನುಷ್ಠಾನಕ್ಕೆ ವಿಘ್ನವನ್ನುಂಟು ಮಾಡುವವೋ ಅವು ರುದ್ರ ದೇವನ ಆದೇಶದ ಮೇರೆಗೆ ಕಣ್ಮರೆಯಾಗಿ ಹೋಗಲಿ. ಭೂಮಿಗೆ ಭಾರದಂತೆ ಇರುವ ಭೂತ ಪ್ರೇತ ಪಿಶಾಚ ಮುಂತಾದವುಗಳ ವಿರೋಧವಿಲ್ಲದೆ ಜಪಕರ್ಮವನ್ನು ಆರಂಭಿಸುವೆನು.

ಪರಾವಸು ತೊಲಗಲಿ. ಅರ್ವಾವಸು ಕೊಡುವ ಆಸನದಲ್ಲಿ ಕುಳಿತುಕೊಳ್ಳುತ್ತೇನೆ.

## ಕರಶುದ್ಧಿ :

ಯಂ ಬಲ ಕೈಯ ಮಣಿಕಟ್ಟನ್ನು ಮುಟ್ಟುವುದು
ರಂ ಬಲ ಮುಂದೋಳನ್ನು ಮುಟ್ಟುವುದು
ವಂ ಬಲ ಮೊಳಕೈ ಗಂಟನ್ನು ಮುಟ್ಟುವುದು
ಯಂ ಬಲ ಕೈ ಬೆರಳುಗಳ ಕಡೆ ಸಂಧಿಯನ್ನು ಮುಟ್ಟುವುದು
ರಂ ಬಲ ಕೈ ಬೆರಳುಗಳ ನಡು ಸಂಧಿಯನ್ನು ಮುಟ್ಟುವುದು
ವಂ ಬಲ ಕೈ ಬೆರಳುಗಳ ತುದಿ ಸಂಧಿಯನ್ನು ಮುಟ್ಟುವುದು
ಯಂ ಬಲ ಕೈಯ ಬಲ ಭಾಗವನ್ನು ಮುಟ್ಟುವುದು
ರಂ ಬಲ ಕೈಯ ಎಡ ಭಾಗವನ್ನು ಮುಟ್ಟುವುದು
ವಂ ಬಲಕೈಯ ಹಿಂಭಾಗವನ್ನು ಮುಟ್ಟುವುದು

ಹೀಗೆಯೇ ಕ್ರಮವಾಗಿ ಎಡಗೈಯ ಮಣಿಕಟ್ಟು, ಮೊಳಕೈಗಂಟು, ಮುಂದೋಳು ಮುಂತಾದುವನ್ನು ಯಂ, ರಂ, ವಂ ಮುಂತಾದ ಬೀಜ ಮಂತ್ರಗಳನ್ನು ಪಠಿಸುತ್ತ ಮುಟ್ಟಬೇಕು.

ಶ್ರೀಂ ಅಸ್ತ್ರಾಯ ಫಟ್ (ಈ ಅಸ್ತ್ರಮಂತ್ರದಿಂದ ಚಿಟಿಕಿ ಹೊಡೆಯುವುದರ ಮೂಲಕ ದಿಗ್ಬಂಧನ ಮಾಡಿಕೊಂಡು ಮೂರು ಬಾರಿ ಕೈ ಚಪ್ಪಾಳೆ ತಟ್ಟಬೇಕು.)

## ಗುರು ನಮಸ್ಕಾರ :

ಶ್ರೀ ಗುರುಭ್ಯೋ ನಮಃ । ಪರಮ ಗುರುಭ್ಯೋ ನಮಃ । ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ । ವೇದವ್ಯಾಸಾಯ ನಮಃ । ಭಾರತ್ಯೈ ನಮಃ । ಸರಸ್ವತ್ಯೈ ನಮಃ । ವಾಯವೇ ನಮಃ । ಬ್ರಹ್ಮಣೇ ನಮಃ । ಶ್ರೀ ಲಕ್ಷ್ಮ್ಯೈ ನಮಃ । ಶ್ರೀ ನಾರಾಯಣಾಯ ನಮಃ । ಶ್ರೀ ಕೃಷ್ಣಾಯ ನಮಃ । ಶ್ರೀ ವಾಸುದೇವಾಯ ನಮಃ ।

(ಕೈ ಮುಗಿದು ಪ್ರತಿಯೊಬ್ಬರಿಗೂ ಪ್ರಣಾಮವನ್ನು ಸಲ್ಲಿಸಬೇಕು)

## ಪಾಪ ಪುರುಷನ ವಿಸರ್ಜನೆ:

ಬ್ರಹ್ಮಹತ್ಯಾ ಶಿರಸ್ಕಂ ಚ ಸ್ವರ್ಣಸ್ತೇಯಭುಜದ್ವಯಮ್ । ಸುರಾಪಾನ ಹೃದಾಯುಕ್ತಂ ಗುರುತಲ್ಪಕಟಿದ್ವಯಮ್ । ತತ್ಸಂಯೋಗಪದದ್ವಂದ್ವಮಂಗ-ಪ್ರತ್ಯಂಗ ಪಾತಕಮ್ । ಉಪಪಾತಕರೋಮಾಣಂ ರಕ್ತಶ್ಮಶ್ರುವಿಲೋಚನಮ್ । ಖಡ್ಗಚರ್ಮಧರಂ ಕೃಷ್ಣಂ ಕುಕ್ಷೌ ಪಾಪಂ ವಿಚಿಂತಯೇತ್[1]

(ಹೊಟ್ಟೆಯ ಎಡಭಾಗವನ್ನು ಮುಟ್ಟಿಕೊಂಡು ಅಲ್ಲಿ ಪಾಪಪುರುಷನನ್ನು ಚಿಂತಿಸಬೇಕು)

ಷಟ್ಕೋಣಮಂಡಲಮಧ್ಯಸ್ಥೋ ನೀಲವರ್ಣೋ ವಾಯ್ವಂತರ್ಗತಃ ಶ್ರೀ ಪ್ರದ್ಯುಮ್ನೋ ಭಗವಾನ್ ಮಚ್ಛರೀರಸ್ಥಂ ಪಾಪಪುರುಷಂ ವಾಯುನಾ ಶೋಷಯತು ।[2]

(ಹೊಕ್ಕುಳನ್ನು ಮುಟ್ಟಿಕೊಂಡು 'ಯಂ' ಎಂಬ ವಾಯು ಬೀಜ ಮಂತ್ರವನ್ನು ಆರು ಬಾರಿ ಜಪಿಸಬೇಕು.)

ತ್ರಿಕೋಣ ಮಂಡಲ ಮಧ್ಯಸ್ಥೋ ರಕ್ತವರ್ಣೋ ವಹ್ನ್ಯಂತರ್ಗತಃ ಶ್ರೀ ಮದ-ನಿರುದ್ಧೋ ಭಗವಾನ್ ಮುಚ್ಛರೀರಸ್ಥಂ ಪಾಪಪುರುಷಂ ವಹ್ನಿನಾ ನಿರ್ದಹತು[3]
(ಎದೆಯನ್ನು ಮುಟ್ಟಿಕೊಂಡು 'ರಂ' ಎಂಬ ಅಗ್ನಿಬೀಜಮಂತ್ರವನ್ನು ಹನ್ನೆರಡು ಬಾರಿ ಜಪಿಸಬೇಕು.)

---

1. ಬ್ರಹ್ಮಹತ್ಯಾ ಪಾತಕವು ಶಿರಸ್ಸು, ಚಿನ್ನವನ್ನು ಕದ್ದ ಪಾತಕ ಎರಡು ಬಾಹುಗಳು. ಮದ್ಯಪಾನ ಪಾತಕ ಹೃದಯ. ಗುರುಹಿರಿಯರ ಸ್ತ್ರೀಯರನ್ನು ಭೋಗಿಸಿದ ಪಾತಕ ಸೊಂಟ. ಈ ನಾಲ್ಕು ಬಗೆಯ ಪಾತಕಗಳನ್ನು ಎಸಗುವವರ ಸಂಪರ್ಕದ ಪಾತಕ ಎರಡು ಕಾಲುಗಳು. ಉಳಿದೆಲ್ಲ ಪಾತಕಗಳು ಬೇರೆ ಬೇರೆ ಅಂಗ, ಉಪಾಂಗಗಳು. ಉಪಪಾತಕಗಳು ರೋಮಗಳು. ಹೀಗೆ ಮಹಾಪಾತರ ಪಾತಕ ಉಪಪಾತಕಗಳೇ ಯಾರ ಶಿರಸ್ಸೇ ಮುಂತಾದ ಅಂಗ ಉಪಾಂಗಗಳ ಸ್ಥಾನದಲ್ಲಿ ಇರುವವೋ ಅಂತಹ ಕೆಂಪಾದ ಮೀಸೆ ಹಾಗೂ ಕಣ್ಣುಗಳುಳ್ಳ, ಕತ್ತಿ, ಗುರಾಣಿಗಳನ್ನು ಧರಿಸಿರುವ, ಕಪ್ಪು ಮೈಬಣ್ಣದ ಪಾಪ ಪುರುಷನನ್ನು ಹೊಟ್ಟೆಯ ಎಡ ಮಗ್ಗುಲಲ್ಲಿ ಚಿಂತಿಸಿಕೊಳ್ಳಬೇಕು.

2. ನಾಭಿಯ ಮೂಲದಲ್ಲಿ ಷಟ್ಚಕ್ರ ಮೂಲಾಧಾರದಲ್ಲಿ ನೀಲವರ್ಣನಾಗಿ ವಾಯ್ವಂತರ್ಗತನಾಗಿ ಇರುವ ಪ್ರದ್ಯುಮ್ನ ರೂಪಿ ಭಗವಂತನು ನನ್ನ ಶರೀರದಲ್ಲಿರುವ ಪಾಪ ಪುರುಷನನ್ನು ವಾಯುವಿನ ಮೂಲಕ ಶುಷ್ಕಗೊಳಿಸಲಿ.

3. ಹೃದಯ ತ್ರಿಕೋಣ ಮಂಡಲದಲ್ಲಿ ಕೆಂಪು ಬಣ್ಣದವನಾಗಿ, ಅಗ್ನ್ಯಂತರ್ಗತನಾಗಿ ಇರುವ ಅನಿರುದ್ಧರೂಪಿ ಭಗವಂತನು ನನ್ನ ಶರೀರದಲ್ಲಿರುವ ಪಾಪ ಪುರುಷನನ್ನು ಅಗ್ನಿಯ ಮೂಲಕ ಸುಡಲಿ.

ವರ್ತುಲವಮಂಡಲಮಧ್ಯಸ್ಥಃ ಶ್ವೇತವರ್ಣೋ
ವರುಣಾಂತರ್ಗತಶ್ರೀವಾಸುದೇವೋ ಭಗವಾನ್
ಮಚ್ಛರೀರಮಮೃತವೃಷ್ಟ್ಯಾಽಽಪ್ಲಾವಯತು । 1

[ನೆತ್ತಿಯನ್ನು ಮುಟ್ಟಿಕೊಂಡು 'ವಂ' ಬೀಜಮಂತ್ರವನ್ನು 24 ಬಾರಿ ಜಪಿಸಬೇಕು.]

---

ನಾಸಾಗ್ರಸ್ಥಃ ಸಂಕರ್ಷಣೋ ಭಗವಾನ್ ಮಚ್ಛರೀರಸ್ಥದಗ್ಧಪಾಪಪುರುಷಸ್ಯ
ಭಸ್ಮ ನಿಃಸಾರಯತು ।

ಮೂಗಿನ ತುದಿಯಲ್ಲಿರುವ ಶ್ರೀ ಸಂಕರ್ಷಣ ರೂಪಿ ಪರಮಾತ್ಮನು ನನ್ನ ಶರೀರದಲ್ಲಿದ್ದು ಸುಡಲ್ಪಟ್ಟ ಪಾಪಪುರುಷನ ಬೂದಿಯನ್ನು ಹೊರಹೊಮ್ಮಿಸಲಿ (ಎಡ ಮೂಗಿನ ದ್ವಾರದಿಂದ ಗಾಳಿಯನ್ನು ಹೊರಹೊಮ್ಮಿಸಿ ಪಾಪಪುರುಷನ ಭಸ್ಮ ಹೊರಹೊಮ್ಮಿತೆಂದು ಚಿಂತಿಸಬೇಕು)

1. ವೃತ್ತಾಕಾರದ ಮಂಡಲದ ನಡುವೆ ಬಿಳಿ ಬಣ್ಣದವನಾಗಿ ವರುಣಾಂತರ್ಗತನಾದ ವಾಸುದೇವನಿರುವನು. ಅವನು ನನ್ನ ಶರೀರವನ್ನು ಅಮೃತಧಾರೆಯಿಂದ ತೋಯಿಸಲಿ.

## ಪುಣ್ಯ ಪುರುಷನ ಧ್ಯಾನ:

ಅಶ್ವಮೇಧ ಶಿರಸ್ಕಂ ಚ ಮಹಾದಾನಭುಜದ್ವಯಮ್ ।
ಸೋಮಪಾನಹೃದಾಯುಕ್ತಂ ಬ್ರಹ್ಮಚರ್ಯಕಟಿದ್ವಯಮ್ ।
ತತ್ಸಂಯೋಗಪದದ್ವಂದ್ವಂ ಸಾಂಗೋಪಾಂಗಶುಭತ್ರಯಮ್ ।
ಸರ್ವವ್ರತಾಂಗರೋಮಾಣಂ ಗುರುಸೇವಾದಿಲೋಚನಮ್ ।
ಸಿಂಹಾಸನೇ ಸಮಾಸೀನಂ ಸ್ವರ್ಣವರ್ಣಂ ಕಿರೀಟಿನಂ
ಗೀರ್ವಾಣನುತಪಾದಾಬ್ಜಂ ಪುಣ್ಯಂ ಹೃದಿ ವಿಭಾವಯೇ ।

ಅಶ್ವಮೇಧ ಪುಣ್ಯಪುರುಷನ ಶಿರಸ್ಸು, ಮಹಾದಾನಗಳು ಎರಡು ತೋಳುಗಳು, ಸೋಮರಸದ ಪಾನ ಹೃದಯ, ಬ್ರಹ್ಮಚರ್ಯ ಎರಡು ತೊಡೆಗಳು, ಅಶ್ವಮೇಧಾದಿಗಳನ್ನು ನಡೆಸಿದ ಪುಣ್ಯಾತ್ಮರ ಸಂಪರ್ಕ ಎರಡು ಪಾದಗಳು. ಯಜ್ಞ, ಪಾನ, ತಪಸ್ಸು ಎಂಬ ಶುಭತ್ರಯ ಉಳಿದ ಅಂಗ ಉಪಾಂಗಗಳು. ಎಲ್ಲ ಬಗೆಯ ವ್ರತಗಳು ರೋಮಗಳು, ಗುರುಸೇವಾದಿ ಸತ್ಕರ್ಮಗಳು ಕಣ್ಣುಗಳು. ಇಂತಹ ಚಿನ್ನದ ಬಣ್ಣದ, ಕಿರೀಟ ಧರಿಸಿದ ದೇವತೆಗಳಿಂದ ಸ್ತುತಿಸಲ್ಪಡುವ ಪಾದಾರವಿಂದವುಳ್ಳ, ಸಿಂಹಾಸನದಲ್ಲಿ ಕುಳಿತಿರುವ ಪುಣ್ಯಪುರುಷನನ್ನು ಹೃದಯದಲ್ಲಿ ಧ್ಯಾನಿಸುವೆನು.

[ಎದೆಯನ್ನು ಮುಟ್ಟಿಕೊಂಡು ~~ಈ~~ ಮಂತ್ರದ ಮೂಲಕ ಧ್ಯಾನಿಸಬೇಕು]

## ಪ್ರಾಣಾಯಾಮ :

### 'ಶ್ರೀ ಕ್ಲೀಂ ಕೃಷ್ಣಾಯ ನಮಃ ಶ್ರೀ'

[ಮೂಗಿನ ಬಲಭಾಗದ ರಂಧ್ರದಿಂದ ದೇಹದೊಳಗಿದ್ದ ಗಾಳಿಯನ್ನೆಲ್ಲ ಹೊರಗೆ ಹಾಕುವುದರ ಮೂಲಕ 'ರೇಚಕ'ವನ್ನು ನಡೆಸಬೇಕು. ಎಡಭಾಗದ ರಂಧ್ರದ ಮೂಲಕ ಗಾಳಿಯನ್ನು ಸ್ವೀಕರಿಸಿ 'ಪೂರಕ'ವನ್ನು ನಡೆಸಬೇಕು. ಹೀಗೆ ಪೂರಕದ ಮೂಲಕ ಸ್ವೀಕರಿಸಿದ ಗಾಳಿಯನ್ನು ಮೂಗಿನ ಎರಡೂ ರಂಧ್ರಗಳನ್ನು ಗಟ್ಟಿಯಾಗಿ ಮುಚ್ಚಿಕೊಳ್ಳುವ ಮೂಲಕ 'ಕುಂಭಕ'ವನ್ನು ನಡೆಸಬೇಕು. ಈ ಕುಂಭಕದ ಸ್ಥಿತಿಯಲ್ಲಿ 'ಶ್ರೀ ಕ್ಲೀಂ ಕೃಷ್ಣಾಯ ನಮಃ ಶ್ರೀ' — ಎಂಬ ಮೂಲಮಂತ್ರವನ್ನು ಎಂಟು ಬಾರಿ ಜಪಿಸಬೇಕು.]

---

### ಪ್ರಾಣಾಯಾಮದ ವಿಷಯದಲ್ಲಿ ಗಮನಿಸಬೇಕಾದ ಅಂಶಗಳು :

೧. ಪ್ರಾಣಾಯಾಮಕ್ಕೆ ಎರಡು ಮುಖಗಳು. ರೇಚಕ, ಪೂರಕ ಹಾಗೂ ಕುಂಭಕ ಪ್ರಕ್ರಿಯೆಗಳಿಗೊಳಪಡಿಸಿ ಉಸಿರಾಟದ ವಾಯುವನ್ನು ನಿಯಂತ್ರಿಸುವುದು ಒಂದು ಮುಖವಾದರೆ, ಹೀಗೆ ಉಸಿರಾಟದ ಗಾಳಿಯನ್ನು ನಿಯಂತ್ರಿಸುವ ಸಂದರ್ಭದಲ್ಲಿ ಮುಖ್ಯವಾಗಿ ಪ್ರಾಣ ಎನಿಸುವ ಭಗವಂತನನ್ನೂ, ಅವನ ಬಳಿಕ ಪ್ರಾಣ ಎನಿಸುವ ವಾಯುದೇವನನ್ನೂ ಧ್ಯಾನಿಸಿ ಒಲಿಸಿಕೊಳ್ಳುವುದಕ್ಕೆ ಸಂಬಂಧಿಸುವಂತೆ ಪ್ರಣವ, ವ್ಯಾಹೃತಿ, ಗಾಯತ್ರಿ ಅಥವಾ ಆಯಾ ಮೂಲ ಮಂತ್ರಗಳನ್ನು ಮಾನಸಿಕವಾಗಿ ಆವರ್ತನೆ ಮಾಡುವುದು – ಮತ್ತೊಂದು ಮುಖ.

೨. ಯಾವ ಮಂತ್ರದ ಜಪಕ್ಕೆ ತೊಡಗಲಾಗಿದೆಯೋ ಆ ಮಂತ್ರವನ್ನು ಪ್ರಾಣಾಯಾಮದ ಕುಂಭಕಸ್ಥಿತಿಯಲ್ಲಿ ಇಪ್ಪತ್ನಾಲ್ಕುಬಾರಿ ಅಥವಾ ಹನ್ನೆರಡು ಬಾರಿ ಜಪಿಸಬೇಕು. (ಬರೇ ಮೂರು ಬಾರಿ ಅಲ್ಲ).

೩. ಮೂಗಿನ ಬಲರಂಧ್ರದಿಂದ ದೇಹದ ಎಲ್ಲ ಗಾಳಿಯನ್ನು ಹೊರ ಕಳುಹಿಸುವುದು 'ರೇಚಕ' ಎನಿಸಿದೆ. ದೇಹದ ಬಲ ಮಗ್ಗುಲಲ್ಲಿ 'ಪಿಂಗಲಾ' ಎಂಬ ನಾಡಿ ಇದ್ದು ಆ ಬದಿಯಲ್ಲಿಯೇ ದೇಹದ ಕಲುಷಿತ ರಕ್ತದ ಚಲನೆ ನಡೆಯುವುದರಿಂದ ಮೂಗಿನ ಬಲ ಮಗ್ಗುಲ ರಂಧ್ರದಿಂದ ಕೆಟ್ಟ ವಾಯುವನ್ನು ಹೊರಹೊಮ್ಮಿಸಬೇಕು.

೪. ಮೂಗಿನ ಎಡರಂಧ್ರದಿಂದ ಒಳ್ಳೆಯ ಗಾಳಿಯನ್ನು ದೇಹದೊಳಗೆ ಸೇರಿಸಿಕೊಳ್ಳುವುದು ಪೂರಕ ಎನಿಸಿದೆ. ದೇಹದ ಎಡ ಮಗ್ಗುಲಲ್ಲಿ 'ಇಡಾ' ಎಂಬ ನಾಡಿ ಇದ್ದು, ಆ ಬದಿಯಲ್ಲಿಯೇ ದೇಹದ ಶುದ್ಧ ರಕ್ತದ ಚಲನೆ ನಡೆಯುವುದರಿಂದ ಮೂಗಿನ ಎಡ ರಂಧ್ರದಿಂದಲೇ ಪೂರಕವನ್ನು ನಡೆಸಬೇಕು. ಅಶುದ್ಧ ರಕ್ತದ ಚಲನೆ ಇರುವ ಬಲ ಮಗ್ಗುಲಿನ ಮೂಗಿನ ರಂಧ್ರದಿಂದ ಗಾಳಿಯನ್ನು ಒಳಗೆ ತೆಗೆದುಕೊಂಡಲ್ಲಿ ಆ ಅಶುದ್ಧ ರಕ್ತದ ಸಂಪರ್ಕದಿಂದ ಶುದ್ಧ ಗಾಳಿಗೂ ಕಾಲುಷ್ಯ ತಗಲೀತು!

## ಋಷ್ಯಾದಿಗಳ ಸ್ಮರಣೆ :

ಅಸ್ಯ ಶ್ರೀ ಕೃಷ್ಣ ಷಡಕ್ಷರ ಮಂತ್ರಸ್ಯ ಬ್ರಹ್ಮಾ ಋಷಿಃ (ತಲೆಯನ್ನು ಮುಟ್ಟಿಕೊಳ್ಳಬೇಕು) ದೈವೀ ಗಾಯತ್ರೀ ಛಂದಃ (ವಾಗಿಂದ್ರಿಯದ ಆಧಾರವಾದ ಬಾಯಿಯನ್ನು ಮುಟ್ಟಿಕೊಳ್ಳಬೇಕು.) ಶ್ರೀಕೃಷ್ಣೋ ದೇವತಾ (ಎದೆಯನ್ನು ಮುಟ್ಟಿಕೊಳ್ಳಬೇಕು.)

---

೫. ಪೂರಕ ಪ್ರಕ್ರಿಯೆಯಿಂದ ಒಳಗೆ ಸೇರಿಸಿಕೊಂಡ ಶುದ್ಧ ವಾಯುವನ್ನು ಮೂಗಿನ ಎರಡು ರಂಧ್ರಗಳನ್ನೂ ಬಿಗಿಯಾಗಿ ಹಿಡಿದುಕೊಂಡು ಬಂಧಿಸಿಕೊಳ್ಳುವುದು 'ಕುಂಭಕ' ಎನಿಸಿದೆ. ಕುಂಭಕ ಸ್ಥಿತಿಯಲ್ಲಿ ಹೃದಯದಲ್ಲಿ ಸುಷುಮ್ನಾ ನಾಡಿಯಲ್ಲಿ ವಾಯುವನ್ನು ವಿಶೇಷವಾಗಿ ಧರಿಸಿಕೊಳ್ಳುವುದು.

೬. ಹದಿನಾರು ಹ್ರಸ್ವವರ್ಣಗಳನ್ನು ಉಚ್ಚರಿಸಲು ಬೇಕಾದ ಅವಧಿಯಲ್ಲಿ ರೇಚಕವನ್ನೂ, ಇದಕ್ಕಿಂತ ಎರಡು ಪಾಲು ಅವಧಿಯಲ್ಲಿ ಪೂರಕವನ್ನೂ, ರೇಚಕದ ಅವಧಿಗಿಂತ ನಾಲ್ಕು ಪಾಲು ಅವಧಿಯಲ್ಲಿ ಕುಂಭಕವನ್ನೂ ನಡೆಸಬೇಕು.

೭. ಪ್ರಾಣಾಯಾಮವನ್ನು ನಡೆಸುವ ಕಾಲದಲ್ಲಿ ನೇರವಾಗಿ ಕುಳಿತುಕೊಳ್ಳಬೇಕು. ಬಾಗಿ ಕುಳಿತುಕೊಂಡಲ್ಲಿ ರೇಚಕದ ಸ್ಥಿತಿಯಲ್ಲಿ ದೇಹದ ಅಶುದ್ಧ ಗಾಳಿ ಪೂರ್ಣವಾಗಿ ಹೊರ ಹೊಮ್ಮದ ಸ್ವಲ್ಪ ಪ್ರಮಾಣದ ಅಶುದ್ಧ ಗಾಳಿ ಹಾಗೆಯೇ ಉಳಿದುಕೊಂಡು, 'ಪೂರಕ' ಸ್ಥಿತಿಯಲ್ಲಿ ಒಳಗೆ ಸೇರಿಸಿಕೊಂಡ ಶುದ್ಧ ಗಾಳಿಯನ್ನೂ ತನ್ನ ಸಂಪರ್ಕದಿಂದಾಗಿ ಅಶುದ್ಧಗೊಳಿಸೀತು! ಅಶುದ್ಧ ನೀರಿನ ಜೊತೆಗೆ ಸೇರಿಕೊಂಡ ಶುದ್ಧ ನೀರೂ ಅಶುದ್ಧವೆನಿಸುವಂತೆ. ಆದ್ದರಿಂದ ರೇಚಕ ಸ್ಥಿತಿಯಲ್ಲಿ ದೇಹದ ಅಶುದ್ಧ ಗಾಳಿ ಪೂರ್ಣವಾಗಿ ಹೊರಹೊಮ್ಮುವಂತೆ ಎಚ್ಚರಿಕೆ ವಹಿಸಬೇಕು.

೮. ಕುಂಭಕ ಸ್ಥಿತಿಯಲ್ಲಿ ವಾಯುವು ಮಲ ಮೂತ್ರ ವಿಸರ್ಜಿಸುವ ದ್ವಾರಗಳಿಂದ ಹೊರ ಹೊಮ್ಮುವ ಸಾಧ್ಯತೆ ಇರವುದರಿಂದ, ಆ ದ್ವಾರಗಳನ್ನೂ ಮುಚ್ಚಿಕೊಳ್ಳಬೇಕು.

೯. ಪ್ರಾಣಾಯಾಮದ ಪೂರ್ವ ಸಿದ್ಧತೆಯಾಗಿ ರೇಚಕವನ್ನೂ, ಪೂರಕವನ್ನೂ ಆಗಾಗ್ಗೆ ನಡೆಸುತ್ತ ನಾಸಾಶುದ್ಧಿ ಹಾಗೂ ನಾಡೀಶುದ್ಧಿಗಳನ್ನು ಗಳಿಸಿಕೊಂಡಿದ್ದಿರಬೇಕು.

೧೦. ಹೀಗೆ ಸಾಕಷ್ಟು ಎಚ್ಚರ ವಹಿಸಿ ನಡೆಸಲಾಗುವ 'ಪ್ರಾಣಾಯಾಮ'ದಿಂದ ಹರಿಗುರುಗಳ ಅನುಗ್ರಹದ ಜೊತೆಗೆ ಮಾನಸಿಕ ಏಕಾಗ್ರತೆ, ಮುಖ್ಯವಾಗಿ ಉಸಿರಾಟವನ್ನು ಅವಲಂಬಿಸಿರುವ ದೈಹಿಕ ಆರೋಗ್ಯವೂ ಸಿದ್ಧಿಸುವುದು

○ ಶ್ರೀ ಬನ್ನಂಜೆ ಗೋವಿಂದಾಚಾರ್ಯರ 'ಸಭಾಷ್ಯಂ ಪ್ರಾಣಸೂತ್ರಮ್' ಎಂಬ ಕೃತಿಗೆ ಕೃತಜ್ಞತೆ.

## ಷಡಂಗನ್ಯಾಸ :

ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ [ಹೃದಯವನ್ನು ಬಲಗೈಯಿಂದ ಮುಟ್ಟಿಕೊಳ್ಳಬೇಕು] ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ [ತಲೆಯನ್ನು ಮುಟ್ಟಿಕೊಳ್ಳಬೇಕು] ಪೂರ್ಣಪ್ರಭಾತ್ಮನೇ ಶಿಖಾಯೈ ವಷಟ್ [ಜುಟ್ಟನ್ನು ಮುಟ್ಟಿಕೊಂಡು ಹೇಳಬೇಕು] ಪೂರ್ಣಾನಂದಾತ್ಮನೇ ಕವಚಾಯ ಹುವ್ [ಎದೆಯ ಮೇಲೆ ಸ್ವಸ್ತಿಕಾಕಾರದಲ್ಲಿ ಕೈಗಳನ್ನು ಹಿಡಿದುಕೊಳ್ಳಬೇಕು] ಪೂರ್ಣತೇಜ ಆತ್ಮನೇ ನೇತ್ರಾಭ್ಯಾಂ ವೌಷಟ್ [ಕಣ್ಣುಗಳನ್ನು ಮುಟ್ಟಿಕೊಳ್ಳಬೇಕು] ಪೂರ್ಣಶಕ್ತ್ಯಾ-ತ್ಮನೇ ಅಸ್ತ್ರಾಯ ಫಟ್ [ಮೂರು ಚಪ್ಪಾಳೆ ತಟ್ಟುವುದರ ಮೂಲಕ ದಿಗ್ಬಂಧ ಮಾಡಿಕೊಳ್ಳಬೇಕು]

## ಧ್ಯಾನ :

ಧ್ಯಾಯೇದ್ಧರಿನ್ಮಣಿನಿಭಂ ಜಗದೇಕವಂದ್ಯಂ
ಸೌಂದರ್ಯಸಾರಮರಿಶಂಖವರಾಭಯಾನಿ ।
ದೋರ್ಭಿರ್ದಧಾನಮಜಿತಂ ಸರಸಂ ಚ
ಭೈಷ್ಮೀಸತ್ಯಾಸಮೇತಮಖಿಲಪ್ರದಮಿಂದಿರೇಶಮ್ ॥

ಅಸ್ಮತ್ಪತ್ಯಂತರ್ಗತ ಶ್ರೀ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀ ಗೋಪಾಲಕೃಷ್ಣ ಪ್ರೇರಣಯಾ ಶ್ರೀ ಗೋಪಾಲಕೃಷ್ಣಪ್ರೀತ್ಯರ್ಥಂ ಯಥಾ-ಶಕ್ತಿ ಶ್ರೀಕೃಷ್ಣ ಷಡಕ್ಷರ ಮಂತ್ರ ಜಪತರ್ಪಣಮಹಂ ಕರಿಷ್ಯೇ

---

1. ಎಲ್ಲರಿಂದ ಮುಖ್ಯವಾಗಿ ಸ್ತುತ್ಯನಾದ, ಸೌಂದರ್ಯ ಪರಿಪೂರ್ಣನಾದ, ನಾಲ್ಕು ಕೈಗಳಲ್ಲಿ ಚಕ್ರ ಶಂಖಗಳನ್ನೂ ವರ, ಅಭಯ ಮುದ್ರೆಗಳನ್ನೂ ಧರಿಸಿರುವ, ಭಕ್ತರ ಮೇಲೆ ಕರುಣಾ ರಸವನ್ನು ಬೀರುತ್ತಿರುವ, ಸಕಲ ಪುರುಷಾರ್ಥಗಳನ್ನು ನೀಡುವ, ರುಕ್ಮಿಣಿಸತ್ಯಭಾಮೆಯು ರೊಡನೆ ಕೂಡಿರುವ, ನೀಲಮಣಿಯಂತೆ ನೀಲವರ್ಣದ ಸರ್ವೋತ್ತಮನಾದ ಇಂದಿರಾ ಪತಿ ಯನ್ನು ಧ್ಯಾನಿಸಬೇಕು.

2. ಹರಿನ್ಮಣಿಃ ಇಂದ್ರನೀಲಮಣಿಃ —ಛಲಾರೀಯ

ಹರಿನ್ಮಣಿ ಅಂದರೆ ನಿಜವಾಗಿ ಪಚ್ಚೆ ಮಣಿ ಹೊರತು ನೀಲಮಣಿಯಲ್ಲ. ಆದರೆ ಸಂಸ್ಕೃತ ದಲ್ಲಿ ಹರಿತ್ ಎಂಬ ಶಬ್ದ ನೀಲ ಮತ್ತು ಪಚ್ಚೆ ಎಂಬ ಎರಡು ಅರ್ಥಗಳಲ್ಲೂ ಇರುವುದರಿಂದ ಇಲ್ಲಿ ಹರಿನ್ಮಣಿ ಶಬ್ದಕ್ಕೆ ನೀಲಮಣಿ ಎಂಬ ಅರ್ಥ ಕೂಡುತ್ತದೆ – ಬ.ಗೋ. [ತಂ. ಸಾ. ಸಂ. ಟಿಪ್ಪಣಿ]

(ಎಂದು ಉದ್ಧರಣೆಯಿಂದ ಅಂಗೈ ಮೇಲೆ ನೀರು ಬಿಡುವುದರ ಮೂಲಕ ಸಂಕಲ್ಪಿಸಬೇಕು.)

**ಶ್ರೀ ಕ್ಲೀಂ ಕೃಷ್ಣಾಯ ನಮಃ ಶ್ರೀ**

ಈ ಮೂಲ ಮಂತ್ರವನ್ನು ಜಪಿಸಬೇಕು. ಜಪವನ್ನು ಬಲಗೈಯ ಅನಾಮಿಕ ಬೆರಳಿನ ಮಧ್ಯ ಗ್ರಂಥಿಯಿಂದ ಆರಂಭಿಸಿ ತೋರುಬೆರಳ ಬುಡದ ಗ್ರಂಥಿಯವರೆಗೆ ನಡುಬೆರಳಿನ ಬುಡದ ಮತ್ತು ಮಧ್ಯಗ್ರಂಥಿಗಳಿಗೆ ಪ್ರದಕ್ಷಿಣಾಕಾರವಾಗಿ ಹತ್ತು ಗ್ರಂಥಿಗಳಲ್ಲಿ ಹತ್ತು ಸಂಖ್ಯೆಯನ್ನು ಎಣಿಸಬೇಕು.]

ಶ್ರೀಕ್ಲೀಂ ಕೃಷ್ಣಾಯ ನಮಃ ಶ್ರೀ ಕೃಷ್ಣಂ ತರ್ಪಯಾಮಿ [ಎಂಬುದಾಗಿ ಹತ್ತು ಮಂತ್ರ ಜಪಕ್ಕೆ ಒಂದರಂತೆ ತರ್ಪಣೆ ನೀಡಬೇಕು.]

## ಉಪಸಂಹಾರ :

[ಧ್ಯಾನ, ಅಂಗನ್ಯಾಸ, ಋಷಿ ಛಂದಸ್ಸು ದೇವತೆಗಳ ಉಲ್ಲೇಖ ಹಾಗೂ ಪ್ರಾಣಾಯಾಮ–ಇವುಗಳನ್ನು ನಡೆಸಬೇಕು.]

## ಕೃಷ್ಣಾರ್ಪಣ :

ಅನೇನ ಶ್ರೀಕೃಷ್ಣಷಡಕ್ಷರಮಂತ್ರಜಪತರ್ಪಣಕರಣೇನ ಪತ್ಯಂತರ್ಗತಃ
ಶ್ರೀ ಮುಖ್ಯಪ್ರಾಣಾಂತರ್ಗತಃ ಗೋಪಾಲಕೃಷ್ಣಃ ಪ್ರೀಯತಾಮ್ ।
ಶ್ರೀಕೃಷ್ಣಾರ್ಪಣಮಸ್ತು ।

ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪೋಜಪಕ್ರಿಯಾದಿಷು ।
ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ । 1

ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಜನಾರ್ದನ ।
ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ತೇ । 2

---

1. ಯಾರ ಸ್ಮರಣೆಯಿಂದ, ನಾಮೋಚ್ಚಾರಣೆಯಿಂದ ತಪಸ್ಸು, ಜಪ ಮುಂತಾದ ಕ್ರಿಯೆಗಳಲ್ಲಿಯ ನ್ಯೂನತೆ ತೊಲಗಿ ಪರಿಪೂರ್ಣತೆಯು ಸಿದ್ಧಿಸುವುದೋ – ಅಂತಹ ಅಚ್ಯುತನನ್ನು ಸ್ತುತಿಸುವೆನು, ನಮಿಸುವೆನು.

2. ಹೇ ಜನಾರ್ದನ! ಹೇ ದೇವ! ಮಂತ್ರದಿಂದ ಹೀನವಾದ, ಕ್ರಿಯೆಯಿಂದ ಹೀನವಾದ, ಭಕ್ತಿಯಿಂದ ಹೀನವಾದ ನನ್ನ ಕರ್ಮ ಪೂರ್ಣವೆನಿಸಿ ನಿನಗೆ ಸಮರ್ಪಿತವಾಗಲಿ.

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾಽನುಸೃತಸ್ವಭಾವಃ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥ [1]

ಅನೇನ (ತಿಥ್ಯಾದಿಗಳನ್ನು ಉಲ್ಲೇಖಿಸಿ,) ಪ್ರಾತಃ ಕಾಲೇ ಜಪತರ್ಪಣಕರಣೇನ ಪತ್ಯಂತರ್ಗತಃ ಶ್ರೀಮುಖ್ಯಪ್ರಾಣಾಂತರ್ಗತಃ ಶ್ರೀ ಗೋಪಾಲಕೃಷ್ಣಃ ಪ್ರೀಯತಾಮ್ ।

(ಆಚಮನ ಮಾಡಬೇಕು)

ಜಪಕಾಲೇ ಮಧ್ಯೇ ಮಂತ್ರತಂತ್ರ ಸ್ವರವರ್ಣ ಲೋಪದೋಷ ಪ್ರಾಯಶ್ಚಿತ್ತಾರ್ಥಂ ನಾಮತ್ರಯಜಪಂ ಕರಿಷ್ಯೇ (ಎಂದು ಸಂಕಲ್ಪಿಸಿ) ಅಚ್ಯುತಾಯ ನಮಃ ಅನಂತಾಯ ನಮಃ ಗೋವಿಂದಾಯ ನಮಃ (ಎಂದು ಸಾಧ್ಯವಾದಷ್ಟು ಬಾರಿ ಪಠಿಸಬೇಕು.)

---

1. ದೈಹಿಕವಾಗಿ, ವಾಚಿಕವಾಗಿ, ಮಾನಸಿಕವಾಗಿ, ಇತರ ಇಂದ್ರಿಯಗಳ ಮೂಲಕ, ನಿಶ್ಚಯಕ್ಕೆ ಕಾರಣವಾಗಿರುವ ಅಂತಃಕರಣದ ಪ್ರಭೇದದ ಮೂಲಕ, ಸ್ವಭಾವದ ಮೂಲಕ ಸ್ವತಂತ್ರನಾಗಿದ್ದು ಸ್ವಭಾವ ಎನಿಸುವ ಭಗವಂತನ ಪ್ರೇರಣಾನುಸಾರ ನಾನು ಏನೇನನ್ನು ನಡೆಸಿರುವೆನೋ ಅವೆಲ್ಲವುಗಳಿಂದ ಶ್ರೀ ನಾರಾಯಣನು ಸಂತುಷ್ಟನಾಗಲಿ – ಎಂದು ಅವನಿಗೆ ಸಮರ್ಪಿಸುವೆನು.

ಪರಿಶಿಷ್ಟ—೧

# ಜಪದ ಅಂಗಗಳ ಹಿನ್ನೆಲೆ ಹಾಗೂ ಉದ್ದೇಶ

## ಪೂರ್ವಸಿದ್ಧತೆಯ ಆಂತರ್ಯ :

ಮಂತ್ರದ ಜಪ ಎಷ್ಟೆಷ್ಟು ಶುದ್ಧವಾಗಿ, ಪವಿತ್ರವಾಗಿ ನಡೆಸಲ್ಪಡುವುದೋ ಅವರ ಪಾಲಿಗೆ ಅದು ಅಷ್ಟಷ್ಟು ಫಲಪ್ರದವಾಗಬಲ್ಲದಾದುದರಿಂದ ಆದಷ್ಟು ಪವಿತ್ರರಾಗಿ ಜಪದಲ್ಲಿ ತೊಡಗಬೇಕು. ಅದಕ್ಕಾಗಿ ಪೂರ್ವಸಿದ್ಧತೆಯ ಅಂಗವಾಗಿ ಶೌಚ ತುಲಸೀ ವಂದನೆ ಸ್ನಾನಾದಿಗಳನ್ನು ಶಾಸ್ತ್ರವಿಧಿಗನುಗುಣವಾಗಿ ನಡೆಸಬೇಕು.

## ಸ್ನಾನದ ಅನುಸಂಧಾನ :

ಜಡವಾದ ನೀರಿನ ಸಂಬಂಧವನ್ನು ದೇಹಕ್ಕೆ ಕಲ್ಪಿಸಿ ಕೊಡುವುದೇ 'ಸ್ನಾನ' ಎನಿಸಿದಲ್ಲಿ ಅಂತಹ ಸ್ನಾನದಿಂದ ದೇಹಕ್ಕೆ ಬಾಹ್ಯ ನೈರ್ಮಲ್ಯ ದೊರಕೀತು. ಆದರೆ ಅಂತಹ ಸ್ನಾನ ಅಂತಃಕರಣದ ಮೇಲೆ ಯಾವುದೇ ಪ್ರಭಾವವನ್ನು ಬೀರದು. ಸ್ನಾನದಿಂದ ಅಂತಃಕರಣದ ಮೇಲೆಯೂ ಪ್ರಭಾವ ಬೀರುವಂತಾಗಬೇಕಾದರೆ ಸ್ನಾನದ ಉದ್ದೇಶಾದಿಗಳ ಉಲ್ಲೇಖವನ್ನೊಳಗೊಂಡ ಸಂಕಲ್ಪ ಹಾಗೂ ಸ್ನಾನ ಕಾಲದಲ್ಲಿ ನೀರಿನಲ್ಲಿ ಸನ್ನಿಹಿತರಾಗಿರುವ ಗಂಗಾದಿ ತೀರ್ಥಾಭಿಮಾನಿಗಳ ಸ್ಮರಣೆ ಅತ್ಯವಶ್ಯ.

## ಪಾವಿತ್ರ್ಯ ಹಾಗೂ ದೀಕ್ಷೆಗಾಗಿ ಊರ್ಧ್ವ ಪುಂಡ್ರಾದಿಧಾರಣೆ :

ಹೀಗೆ ಸ್ನಾನದಿಂದ ಒಂದು ಮಟ್ಟದ ಪಾವಿತ್ರ್ಯ ದೊರಕಿತೆಂದರೆ, ಇನ್ನಷ್ಟು ಪಾವಿತ್ರ್ಯಕ್ಕಾಗಿ ಗೋಪೀಚಂದನದಿಂದ ಕುಂಕುಮದಿಂದ ಊರ್ಧ್ವ ಪುಂಡ್ರದ ಧಾರಣೆಯನ್ನು ನಡೆಸಬೇಕು. ಗೋಪೀಚಂದನದಲ್ಲಿ ಭಗವಂತನ ವಿಶೇಷ ಸನ್ನಿ-ಧಾನವಾದರೆ, ಕುಂಕುಮದಲ್ಲಿ ಲಕ್ಷ್ಮೀದೇವಿಯ ಸನ್ನಿಧಾನಾತಿಶಯ. ಇವುಗಳ ಅನುಸಂಧಾನಪೂರ್ವಕವಾದ ಸಂಪರ್ಕದಿಂದಲೇ ಪಾವಿತ್ರ್ಯ ಸಿದ್ಧಿಸುವುದು. ಭಗವಂತನ ಚಿಹ್ನೆಯಾದ ಊರ್ಧ್ವಪುಂಡ್ರವನ್ನು ಅವುಗಳಿಂದ ಹಾಕಿಕೊಂಡರಂತೂ ವಿಶೇಷವಾದ ಪಾವಿತ್ರ್ಯ ದೊರಕಬಲ್ಲದು.

ಚಕ್ರ, ಶಂಖ, ಗದಾ ಹಾಗೂ ಪದ್ಮ ಇವುಗಳೂ ಭಗವಂತನ ಆಯುಧಗಳು. ಇವುಗಳು ಜಪಕಾಲದಲ್ಲಿ ರಕ್ಷೆಯನ್ನು ಕೊಟ್ಟು ವೈಷ್ಣವ ದೀಕ್ಷೆಯನ್ನು ನೆನಪಿಸಿ ಕೊಡುವವುಗಳು. ಭಗವಂತನ ನಾರಾಯಣ ನಾಮದಿಂದ ಅಲಂಕೃತವಾದದ್ದು

ನಾರಾಯಣ ಮುದ್ರೆ. ಇಂತಹ ಮುದ್ರೆಗಳಿಂದ ಚಿಹ್ನಿತವಾಗುವ ಶರೀರ ಹಾಗೂ ಅದರ ಅವಯುವಗಳು ಭಗವಂತನಿಗೆ ಸಮರ್ಪಿತವಾದವುಗಳೆಂಬುದಾಗಿ ಭಗವತ್ಸಮರ್ಪಣೆಯ ಅನುಸಂಧಾನಕ್ಕೆ ಪುಷ್ಟಿ ನೀಡಬಲ್ಲವು.

ಯಾವ ಮುದ್ರೆಯನ್ನು ಎಲ್ಲಿ ಹಚ್ಚಿಕೊಳ್ಳಬೇಕು—ಎಂಬುದನ್ನು ಸಂಗ್ರಹಿಸಿ 'ಸಾತ್ತ್ವತಸಂಹಿತೆ' ನಮ್ಮ ಮುಂದಿಟ್ಟಿದೆ—

ಚಕ್ರಪದ್ಮಂ ಚ ದಕ್ಷೇ ತು ಗದಾಶಂಖಂ ತು ವಾಮತಃ ।
ಅಷ್ಟಾಕ್ಷರಾಂಕಿತಾಂ ಮುದ್ರಾಂ ಸರ್ವಸ್ಥಾನೇಷು ಧಾರಯೇತ್ ।
ಹೃದಿ ಪದ್ಮಂ ಲಲಾಟೇ ಚ ಗದಾಂ ಶಿರಸಿ ಪಂಚ ಚ ॥

ಚಕ್ರ ಪದ್ಮ ಮುದ್ರೆಗಳನ್ನು ಹೊಟ್ಟೆಯ, ಕೊರಳ ಬಲಬದಿ ಬಲ ಭುಜಗಳಲ್ಲಿಯೂ, ಗದಾ ಶಂಖಗಳನ್ನು ಹೊಟ್ಟೆಯ ಕೊರಳ ಎಡಬದಿ ಎಡ ಭುಜಗಳಲ್ಲಿಯೂ, ನಾರಾಯಣ ಮುದ್ರೆಯನ್ನು ಎಲ್ಲ ಕಡೆಯೂ, ಎದೆಯ ಮೇಲೆ ಪದ್ಮ ಮುದ್ರೆಯನ್ನೂ, ಹಣೆಯಲ್ಲಿ ಗದಾ ಮುದ್ರೆಯನ್ನೂ ನೆತ್ತಿಯ ಮೇಲೆ ಐದು ಮುದ್ರೆಗಳನ್ನೂ ಧರಿಸಿಕೊಳ್ಳಬೇಕು.

## ಅತ್ಯಾವಶ್ಯಕವಾದುದರ ನಿರೂಪಣೆ :

'ಸ್ತ್ರೀಜಪಪದ್ಧತಿ' – ಎಂಬುದಾಗಿ 1924ನೇ ಇಸವಿಯಲ್ಲಿಯೇ ಮುದ್ರಿಸಲಾಗಿತ್ತು. ಆ ಪುಸ್ತಕ ಈಗ ದೊರಕುವುದಿಲ್ಲ. ಅಲ್ಲದೆ, ಧಾರ್ಮಿಕ ಅನುಷ್ಠಾನಗಳಿಗೆ ಅವಕಾಶವೇ ಇಲ್ಲ–ಎಂದು ಆರೋಪಿಸಲಾಗುತ್ತಿರುವ ಈ ಕಾಲದಲ್ಲೂ ಆಚರಿಸಲು ಯೋಗ್ಯವಾಗುವಂತೆ ಆದಷ್ಟು ಸಂಕ್ಷಿಪ್ತ ರೂಪದಲ್ಲಿ ಸ್ತ್ರೀ ಜಪದ ಕ್ರಮವನ್ನು ಪರಿಚಯಿಸಿಕೊಡಬೇಕೆಂದು ಇಲ್ಲಿ ಯತ್ನಿಸಲಾಗಿದೆ. ಆದ್ದರಿಂದ,

ಯಾವತೋ ಹ್ಯನನುಷ್ಠಾನೇ ಕರ್ಮಪೂರ್ತಿರ್ನ ವಿದ್ಯತೇ ।
ತಾವತ್ಸಮಸ್ತಂ ಕಥಿತಂ...." (ತಂ. ಸಾ. ಸಂ. 3–139)

—ಎಂಬುದಾಗಿ ಶ್ರೀಮದಾಚಾರ್ಯರು ಎಷ್ಟು ಪ್ರಮಾಣದ ಅನುಷ್ಠಾನವನ್ನು ನಡೆಸದಿದ್ದರೆ ಕರ್ಮವು ಪರಿಪೂರ್ಣವೆನಿಸಲಾರದೋ ಅಷ್ಟು ಪ್ರಮಾಣದಲ್ಲಿ ಸಮಗ್ರವಾಗಿ ಇಲ್ಲಿ ತಿಳಿಸಲಾಗಿದೆ ಎಂದು ತಮ್ಮ ತಂತ್ರಸಾರ ಸಂಗ್ರಹದಲ್ಲಿ ಹಾಗೂ ಸದಾಚಾರ ಸ್ಮೃತಿಯಲ್ಲಿ ಕೃಷ್ಣ ಮಂತ್ರ ಜಪಕ್ಕೆ ಸಂಬಂಧಪಡುವಂತೆ ಯಾವ ಯಾವ ಅಂಗಗಳನ್ನು ಉಲ್ಲೇಖಿಸಿರುವರೋ ಅವಷ್ಟನ್ನೇ – ಆಚಮನ, ಸಂಕಲ್ಪ, ಹರಿಗುರು ಪ್ರಣಾಮ, ಪಾಪ ಪುರುಷ ವಿಸರ್ಜನೆ, ಪ್ರಾಣಾಯಾಮ, ಋಷ್ಯಾದಿ

ಗಳ ಸ್ಮರಣ, ಷಡಂಗನ್ಯಾಸ, ಧ್ಯಾನ, ಜಪ, ಕೃಷ್ಣಾರ್ಪಣ ಹೀಗೆ ಹತ್ತು ಅಂಗಗಳನ್ನಷ್ಟೇ ಮೇಲ್ಭಾಗದಲ್ಲಿ ಅವಶ್ಯವಾಗಿ ಆಚರಣೀಯಗಳೆಂದು ನೀಡಲಾಗಿದೆ. ಉಳಿದ ತೀರ್ಥಾಭಿಮಾನಿ ಸ್ಮರಣೆ. ಹರಿಗುರು ಸ್ಮರಣೆ. ಆಸನಶುದ್ಧಿ. ಭೂದೇವಿ ಪ್ರಾರ್ಥನೆ. ಕರಶುದ್ಧಿ. (ಪಾಪ ಪುರುಷ ವಿಸರ್ಜನೆಯಲ್ಲಿ ನಾಸಾ ಪುಟದಿಂದ ಭಸ್ಮ ನಿಸ್ಸಾರಣ, ಪುಣ್ಯ ಪುರುಷ ಧ್ಯಾನ ಮುಂತಾದ ಅಂಗಗಳು ಸ್ತ್ರೀ ಜಪದಲ್ಲಿ ಸಂಪ್ರದಾಯಕ್ಕನುಗುಣವಾಗಿ ಸೇರಿಕೊಂಡಿರುವುದರಿಂದ ಅವುಗಳ ಆಚರಣೆಯಲ್ಲಿಯೂ ವಿಶೇಷವಾದ ಆಸಕ್ತಿ ಇರುವುದಾದರೆ ಅಂತಹವರು ಅವುಗಳನ್ನು ಅವಶ್ಯವಾಗಿ ಆಚರಿಸಬೇಕೆಂಬ ದೃಷ್ಟಿಯಿಂದ ಅವನ್ನೂ ಅಡಿಭಾಗದಲ್ಲಿ ನೀಡಲಾಗಿದೆ.

## ಅಂತರಂಗದ ಸ್ನಾನರೂಪದ ಆಚಮನ :

ಜಪಾನುಷ್ಠಾನಕ್ಕೆ ಸಾಧನವಾಗಿ ಬಳಸಲಾಗುವ ದೇಹ ಮತ್ತು ವಾಗಿಂದ್ರಿಯ ಮುಂತಾದವುಗಳಲ್ಲಿ ಭಗವದ್ರೂಪಗಳ ಅನುಸಂಧಾನಕ್ಕೆ ಪೋಷಕವಾಗಿರುವ ಆಚಮನವು ಆಂತರಂಗಿಕ ಸ್ನಾನವೆನಿಸಿದೆ—ಎಂದು ತಿಳಿಸಿರುವ ಯೋಗದೀಪಿಕಾದಲ್ಲಿ (2–35....40) ಮಂತ್ರಾಚಮನವೆಂದು ಪ್ರಸ್ತುತಪಡಿಸಲಾದ [1] ಆಚಮನವನ್ನೇ ಋಗ್ವೇದಾದಿ ನಾಮಗಳ ಸ್ಥಾನದಲ್ಲಿ ಕೇಶವಾದಿ ನಾಮಗಳನ್ನು ಉಲ್ಲೇಖಿಸಿ ನೀಡಲಾಗಿದೆ.

ಯೋಗದೀಪಿಕಾದಲ್ಲಿ 'ಮಂತ್ರಾಚಮನ'ವನ್ನು ಹೀಗೆ ನಿರೂಪಿಸಲಾಗಿದೆ—

**ಸ ಆಚಮೋಽಂತರಂಗಾನಾಂ ಸ್ನಾನರೂಪೋ ನಿಗದ್ಯತೇ ।**
**ಋಗ್ಯಜುಃ ಸಾಮವೇದೈಸ್ತು ಚತುರ್ಥ್ಯಂತೈಃ ಸತದ್ವಯೈಃ ।**
**ಅಶ್ನೀತ ತ್ರಿರ್ಮುಖಂ ತಿರ್ಯಗ್ ಮಾರ್ಜಯೇದ್ದ್ವಿಃ ಸ್ಪೃಶನ್ನಪಃ ।**
**'ಅಥರ್ವವೇದಾಯ ನಮ' ಇತಿ ಪ್ರಾಚ್ಯೋ ಮನುಸ್ತ್ವಯೋಃ ।**
**'ಇತಿಹಾಸ ಪುರಾಣಾಭ್ಯಾಂ ನಮ' ಇತ್ಯಪರೋ ಮತಃ ।**
**'ಅಗ್ನಯೇ ನಮ' ಇತ್ಯುಕ್ತ್ವಾ ಮಾರ್ಜಯೇದಥ ಆನನಮ್ ।**
**'ವಿಷ್ಣವೇ ನಮ' ಇತ್ಯುಕ್ತ್ವಾ ಸಿಂಚೇತ್ ಪ್ರಪದಯೋರ್ಜಲಮ್ ।**
**ಸಾಂಗುಷ್ಠಯಾಽನಾಮಿಕಯಾ ಸ್ಪೃಶೇಚ್ಚಕ್ಷುರ್ದ್ವಯಂ ಕ್ರಮಾತ್ ।**
**ತಥಾ ನಾಸೇ ತು ತರ್ಜನ್ಯಾ ಶ್ರೋತ್ರೇಽಂಗುಲ್ಯಾ ಕನಿಷ್ಠಯಾ ।**
**ಸಮುಸ್ತಾಭಿರ್ವಾಮಪಾಣಿಂ ಸೀಮಾಂ ಮಧ್ಯತಯಾ ಸ್ಪೃಶೇತ್ ।**

---

1. **ಶ್ರೀ ಮಧ್ವಾಚಾರ್ಯರ ಸಮೀಪದ ಕಾಲದಲ್ಲಿ ಇದ್ದವರು ಶ್ರೀ ನಾರಾಯಣ ಪಂಡಿತರು. ಆದ್ದರಿಂದ ಅವರು ಪ್ರಸ್ತುತಪಡಿಸಿರುವ ಆಚಮನ ಹೆಚ್ಚು ಅಧಿಕೃತವೆಂದು ಅದನ್ನೇ ಇಲ್ಲಿ ನೀಡಲಾಗಿದೆ.**

**ಹೃದಯಂ ಚ ಸಮಸ್ತಾಭಿಃ ಸೂರ್ಯೋ ವಾಯುರ್ದಿಶಸ್ತಥಾ ।**
**ವಸಿಷ್ಠಃ ಶ್ರೀಃ ಪರಾತ್ಮಾ ಚ ಸೋದ್ದೇಶಾ ಹೃದ್ವಸಾನಕಾಃ ।**
**ತತ್ರ ಮಂತ್ರಾಃ ಪ್ರಶಸ್ಯಂತೇ ಮಂತ್ರಾಚಾಮೋಽಯಮೀರಿತಃ ॥**

ಅಂತರಂಗಗಳ ಸ್ನಾನರೂಪದಲ್ಲಿರುವ ಆಚಮನ ಈ ರೀತಿಯಾಗಿದೆ— 'ಋಗ್ವೇದಾಯ ಸ್ವಾಹಾ' 'ಯಜುರ್ವೇದಾಯ ಸ್ವಾಹಾ' 'ಸಾಮವೇದಾಯಸ್ವಾಹಾ' ಎಂದು ಮೂರು ಬಾರಿ ನೀರನ್ನು ಸ್ವೀಕರಿಸಬೇಕು. ನೀರನ್ನು ಸ್ಪರ್ಶಿಸಿ 'ಅಥರ್ವ ವೇದಾಯ ನಮಃ' ಎಂಬ ಮಂತ್ರವನ್ನು ಪಠಿಸುತ್ತಾ ಬಾಯಿಯ ಮೇಲ್ಭಾಗವನ್ನು 'ಇತಿಹಾಸ ಪುರಾಣಾಭ್ಯಾಂ ನಮಃ'—ಎಂಬ ಮತ್ತೊಂದು ಮಂತ್ರವನ್ನು ಪಠಿಸುತ್ತಾ ಬಾಯಿಯ ಕೆಳಭಾಗವನ್ನು ಅಡ್ಡವಾಗಿ ತೊಳೆದುಕೊಳ್ಳಬೇಕು. 'ಅಗ್ನಯೇ ನಮಃ' ಎಂಬ ಮಂತ್ರವನ್ನು ಪಠಿಸುತ್ತಾ ಬಾಯಿಯನ್ನು ಮೇಲಿನಿಂದ ಕೆಳಕ್ಕೆ ತೊಳೆದುಕೊಳ್ಳಬೇಕು. 'ವಿಷ್ಣವೇ ನಮಃ' ಎಂಬ ಮಂತ್ರದ ಪಠನಪೂರ್ವಕವಾಗಿ ಪಾದಗಳ ಮೇಲ್ಭಾಗಕ್ಕೆ ನೀರನ್ನು ಸಿಂಪಡಿಸಬೇಕು. 'ಸೂರ್ಯಾಯ ನಮಃ'—ಎಂಬ ಮಂತ್ರ ಪಠನ ಪೂರ್ವಕವಾಗಿ ಅಂಗುಷ್ಠ ಸಹಿತವಾದ ಉಂಗುರ ಬೆರಳುಗಳಿಂದ ಎರಡು ಕಣ್ಣುಗಳನ್ನು ಸ್ಪರ್ಶಿಸಬೇಕು. 'ವಾಯವೇ ನಮಃ' ಎನ್ನುತ್ತಾ ಅಂಗುಷ್ಠ ಸಹಿತವಾದ ತೋರ್ಬೆರಳಿನಿಂದ ಮೂಗನ್ನು ಮುಟ್ಟಬೇಕು. 'ದಿಗ್ಭ್ಯೋ ನಮಃ' —ಎನ್ನುತ್ತಾ ಅಂಗುಷ್ಠ ಸಹಿತ ಕಿರುಬೆರಳಿನಿಂದ ಕಿವಿಗಳನ್ನು ಮುಟ್ಟಬೇಕು. 'ವಸಿಷ್ಠಾಯ ನಮಃ' ಎನ್ನುತ್ತಾ ಎಲ್ಲ ಬೆರಳುಗಳಿಂದ ಎಡಗೈಯನ್ನು ಮುಟ್ಟಬೇಕು. 'ಶ್ರೀಯೈ ನಮಃ' ಎನ್ನುತ್ತ ತಲೆಯ ನಡುಭಾಗವನ್ನು (ಬ್ರಹ್ಮರಂಧ್ರ, ನೆತ್ತಿ) ಮಧ್ಯ ಬೆರಳಿನಿಂದ ಮುಟ್ಟಬೇಕು. 'ಪರಮಾತ್ಮನೇ ನಮಃ' — ಎನ್ನುತ್ತಾ ಎಲ್ಲ ಬೆರಳುಗಳಿಂದ ಹೃದಯವನ್ನು ಮುಟ್ಟಬೇಕು. ಹೀಗೆ ಮಂತ್ರಪೂರ್ವಕವಾಗಿ ನಡೆಸಲಾಗುವ ಈ ಆಚಮನ ಮಂತ್ರಾಚಮನ ಎಂದು ಕರೆಯಲ್ಪಡುವುದು.

## ಮಾನಸಿಕ ನಿರ್ಧಾರಕ್ಕೆ ಪುಷ್ಟಿ ಕೊಡುವ ಸಂಕಲ್ಪ :

ಭಗವಂತನ ಪ್ರೇರಣೆಗನುಗುಣವಾಗಿ, ಭಗವಂತನ ಪ್ರೀತಿಯ ಉದ್ದೇಶಕ್ಕಾಗಿ ನಡೆಸಲಿರುವ ಕರ್ಮದ ಆಚರಣೆಯ ವಿಷಯದಲ್ಲಿ ತಾಳಬೇಕಾದ ಮಾನಸಿಕ ನಿರ್ಧಾರಕ್ಕೆ ರೂಪುಕೊಡುವ ಪ್ರಕ್ರಿಯೆಯೇ ಸಂಕಲ್ಪವೆನಿಸಿದ್ದು, ಅಂತಹ ನಿರ್ಧಾರಕ್ಕೆ ಪುಷ್ಟಿಕೊಡುವಂತೆ ಹಸ್ತಾಭಿಮಾನಿ ಇಂದ್ರ ಸಮಷ್ಟಿಯಾಗಿ ಸಕಲೇಂದ್ರಿಯಗಳಿಗೂ ಅಭಿಮಾನಿಯಾಗಿರುವುದರಿಂದ ಅವನ ಅನುಗ್ರಹ ಸಾಧನೆಗೆ ಅತ್ಯವಶ್ಯವೆಂದು ಅವನಿಂದ ಅಭಿಮನ್ಯಮಾನವಾದ ಹಸ್ತದ ಸ್ಪರ್ಶದಿಂದ ಅವನ ಅನುಸಂಧಾನವನ್ನು ತಂದುಕೊಳ್ಳಲಾಗುವುದು.

ಮಾನವರ ಒಂದು ವರ್ಷವು ದೇವತೆಗಳಿಗೆ ಒಂದು ದಿನ. ಈ ದೇವಮಾನದಲ್ಲಿ ಒಂದು ಸಾವಿರ ವರ್ಷ ಕಲಿಯುಗ. ಎರಡು–ಮೂರು–ನಾಲ್ಕು ಸಾವಿರ ವರ್ಷಗಳು ಕ್ರಮವಾಗಿ ದ್ವಾಪರ–ತ್ರೇತಾ–ಕೃತ ಯುಗಗಳು. ಇಂತಹ ಚತುರ್ಯುಗಗಳ ಸಾವಿರ ಬ್ರಹ್ಮನಿಗೆ ಒಂದು ಹಗಲು. ಈ ಗಣನೆಯಲ್ಲಿ ನೂರು ವರ್ಷ ಬ್ರಹ್ಮನ ಆಯುಸ್ಸು. ಇದಕ್ಕೆ ಪರ ಎಂದು ಹೆಸರು. ಇದರಲ್ಲಿ ಮೊದಲನೇ ಅರ್ಧ ಕಳೆದಿದೆ.

ಎರಡನೇ ಪರಾರ್ಧದಲ್ಲಿ ಮೊದಲಿನ ವರ್ಷದ ಮೊದಲ ದಿನದ ಹಗಲು ಈಗ ನಡೆಯುತ್ತಿದೆ. ಇದಕ್ಕೆ ವರಾಹಕಲ್ಪ ಎಂದು ಹೆಸರು. ಇಂತಹ ಪ್ರತಿಕಲ್ಪಗಳಲ್ಲಿಯೂ ಹದಿನಾಲ್ಕು ಮನ್ವಂತರಗಳಿವೆ. ಪ್ರತಿ ಮನ್ವಂತರದಲ್ಲಿ ಎಪ್ಪತ್ತೈದು ಚತುರ್ಯುಗಗಳು ಮತ್ತು 18,50,000 ವರ್ಷಗಳು. ಈಗ ಏಳನೆಯದಾದ ವೈವಸ್ವತ ಮನ್ವಂತರದ ಇಪ್ಪತ್ತೆಂಟನೆಯ ಚತುರ್ಯುಗ ಚಕ್ರದಲ್ಲಿ ಕಲಿಯುಗ ನಡೆಯುತ್ತಿದೆ. ಅದರಲ್ಲೂ ಅದರ ನಾಲ್ಕು ಪಾದಗಳಲ್ಲಿ ಪ್ರಥಮ ಪಾದ ಈಗ ನಡೆಯುತ್ತಿದೆ. ಕಲಿಯುಗದ ಈ ಪ್ರಥಮ ಪಾದದಲ್ಲಿ ಯುಧಿಷ್ಠಿರ, ವಿಕ್ರಮಗಳೆಂಬ ಎರಡು ಶಕೆಗಳು ಕಳೆದಿವೆ. ಶಾಲಿವಾಹನ ಶಕೆ ನಡೆಯುತ್ತಿದೆ. ವಿಷ್ಣುವಿನ ದಶಾವತಾರಗಳಲ್ಲಿ ಒಂಭತ್ತನೆಯದಾದ ಬುದ್ಧಾವತಾರವಾಗಿದೆ.

ಭೂಲೋಕದ ಸಪ್ತ ದ್ವೀಪಗಳಲ್ಲಿ ಒಂದಾದ ಜಂಬೂದ್ವೀಪದಲ್ಲಿ ಒಂಭತು ಖಂಡಗಳು. ಅವುಗಳಲ್ಲಿ ಭಾರತವೂ ಒಂದು. ಇದರ ದಂಡಕಾರಣ್ಯ ಪ್ರದೇಶದಲ್ಲಿ ಗೋದಾವರಿಯ ದಕ್ಷಿಣ ತೀರದಲ್ಲಿ ನಾವಿದ್ದೇವೆ. [1]

ಹೀಗೆ ಕಾಲತಃ, ದೇಶತಃ ನಾವೆಷ್ಟು ಕುಬ್ಜರೆಂಬ ಅರಿವನ್ನು ಮೂಡಿಸುವ ಮೂಲಕ ಅಹಂಕಾರದ ದಮನ ಮಾಡುವುದಕ್ಕಾಗಿ ಅಖಂಡ ಕಾಲದೇಶಗಳಿಂದ ಪ್ರಾರಂಭಿಸಿ ಪ್ರಕೃತ ಕಾಲದೇಶಗಳ ಏಕದೇಶದವರೆಗೂ ಉಲ್ಲೇಖಿಸಲಾಗುವುದು. ಆಯಾ ದೇಶ, ಕಾಲಗಳ ಶಬ್ದಗಳಿಂದಲೇ ವಾಚ್ಯರಾಗಿರುವ ಆಯಾ ಅಭಿಮಾನಿ ದೇವತೆಗಳ ಅನುಗ್ರಹವೂ ದೊರೆಯುವಂತಾಗಲೆಂದೂ ಆಯಾ ಶಬ್ದಗಳಿಂದ ಅವರ ಸ್ಮರಣೆಯನ್ನೂ ನಡೆಸಲಾಗುವುದು. ಸಮಗ್ರ ದೇಶ ಕಾಲಗಳ ಚಕ್ರ ಉರುಳಿಸುತ್ತಿರುವವನು ಭಗವಂತನೆಂಬುದನ್ನು ಮರೆಯಬಾರದೆಂದು ಪ್ರಾರಂಭದಲ್ಲಿಯೇ 'ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ....' ಭಗವದಾಜ್ಞೆಯಿಂದ ಹೊರಳುತ್ತಿರುವ —ಎಂಬ ವಿಶೇಷಣವನ್ನು ನೀಡಲಾಗುವುದು.

---

1. ಶ್ರೀ ಹಯವದನ ಪುರಾಣಿಕರಿಂದ ಸಂಪಾದಿಸಲ್ಪಟ್ಟ 'ಸುಲಭನಿತ್ಯಾನುಷ್ಠಾನ ಸಂಗ್ರಹ' ದಿಂದ ಕೃತಜ್ಞತಾಪೂರ್ವಕವಾಗಿ ಈ ವಿವರಣೆಯನ್ನು ಸ್ವೀಕರಿಸಲಾಗಿದೆ.

ಇಂದ್ರಿಯಗಳಿಗೆ ಮುಖ್ಯ ಒಡೆಯರಾಗಿರುವ, ಪರಮಾತ್ಮನ ಮುಖ್ಯ ಪ್ರತೀಕವಾಗಿರುವ, ನಮ್ಮಿಂದ ಸಾಧನೆಗಳನ್ನು ನಡೆಸಿ ಭಗವಂತನಿಗೆ ಅದನ್ನು ಸಮರ್ಪಿಸುವ, ಭಗವಂತನ ಯಥಾರ್ಥ ಸ್ವರೂಪವನ್ನು ಚೆನ್ನಾಗಿ ಪರಿಚಯಿಸಿಕೊಟ್ಟ ಶ್ರೀ ಮಧ್ವಾಚಾರ್ಯರ ಸ್ಮರಣೆಯೂ ಅತ್ಯವಶ್ಯವೆಂದು ಭಗವಂತನ ಅಂತರ್ಯಾಮಿತ್ವಕ್ಕೆ ಪಾತ್ರರಾಗಿ ಶ್ರೀ ಮಧ್ವಾಚಾರ್ಯರನ್ನು ಉಲ್ಲೇಖಿಸಲಾಗುವುದು.

ಸ್ತ್ರೀಯರು ಯಾವುದೇ ಸಾಧನೆಯನ್ನು ತಮ್ಮ ಪತಿಯ ಮಾಧ್ಯಮದಲ್ಲಿಯೇ ನಡೆಸಿ, ಸಮರ್ಪಿಸಬೇಕಾದುದರಿಂದ ಸ್ತ್ರೀಯರು ಸಂಕಲ್ಪದಲ್ಲಿ 'ಪತ್ಯಂತರ್ಗತ' ಎಂಬ ವಿಶೇಷಣವನ್ನೂ ಉಲ್ಲೇಖಿಸಬೇಕು.

### ಜಪದ ಸಿದ್ಧಿಗಾಗಿ

## ಹರಿಗುರುಗಳ ಸ್ಮರಣೆ

**ಸ್ಮೃತ್ವಾಗುರುಂ ಪೂರ್ವ ಗುರುಮಾದಿಮೂಲಗುರೂ ತಥಾ ।**
**ದೇವತಾಂ ವಾಸುದೇವಂ ಚ ವಿದ್ಯಾಭ್ಯಾಸೀ ತು ಸಿದ್ಧಿಭಾಕ್ ॥**

—ಎಂದು ತಂತ್ರಸಾರ ಸಂಗ್ರಹದಲ್ಲಿ (4-106) ಶ್ರೀ ಮದಾಚಾರ್ಯರು ನೇರವಾಗಿ ವಿದ್ಯೆಯನ್ನು ಉಪದೇಶಿಸಿದ ಗುರುಗಳನ್ನು, ಅವರಿಗೂ ಗುರುಗಳಾದ ಪೂರ್ವಗುರುಗಳನ್ನು, ಶುಭ ಸಂಪ್ರದಾಯದ ಪ್ರವರ್ತಕರಾಗಿದ್ದು ಆದಿಗುರುಗಳೆನಿಸಿರುವವರನ್ನು, ಮೂಲಗುರುಗಳೆನಿಸಿರುವವರನ್ನು, ವಿದ್ಯೆಯಿಂದ ಪ್ರತಿಪಾದ್ಯನಾದ ದೇವತೆಯನ್ನು, ವಿದ್ಯೆಯ ಮುಖ್ಯಫಲವಾದ ಮೋಕ್ಷ ಪುರುಷಾರ್ಥವನ್ನು ಅನುಗ್ರಹಿಸುವ ವಾಸುದೇವನನ್ನು—ಹೀಗೆ ಆರು ವ್ಯಕ್ತಿಗಳ ಸ್ಮರಣೆಯನ್ನು ನಡೆಸಿ ವಿದ್ಯಾಭ್ಯಾಸದಲ್ಲಿ ತೊಡಗುವವನು ವಿದ್ಯಾಭ್ಯಾಸದ ಸಿದ್ಧಿಯನ್ನು ಹೊಂದಬಲ್ಲನೆಂದು ಸಂದೇಶಿಸಿರುವರು.

ಮಂತ್ರ ಜಪವೂ ಭಗವದ್ವ್ಯಕ್ತಿತ್ವದ ಮನನ ಅಥವಾ ಖಂಡಸ್ಮೃತ್ಯಾತ್ಮಕ ಧಾರಣಾರೂಪವಾಗಿದ್ದು ಮಂತ್ರವಿದ್ಯೆಯ ಅಭ್ಯಾಸ ಎನಿಸಿದೆ.

ಅದಕ್ಕಾಗಿ ಜಪದಲ್ಲಿ ಹರಿಗುರುಗಳ ಸ್ಮರಣೆಯನ್ನು ನಡೆಸಲಾಗುವುದು.

ಶ್ರೀಮದಾನಂದತೀರ್ಥರನ್ನು ಆದಿಗುರುಗಳನ್ನಾಗಿಯೂ, ಶ್ರೀ ವೇದವ್ಯಾಸ, ಭಾರತೀ, ಸರಸ್ವತಿ, ಚತುರ್ಮುಖಬ್ರಹ್ಮ, ವಾಯು, ಲಕ್ಷ್ಮೀ ಹಾಗೂ ನಾರಾಯಣ ಇವರನ್ನು ಮೂಲಗುರುಗಳನ್ನಾಗಿಯೂ, [1] ಕೃಷ್ಣನನ್ನು

---

**1. ವ್ಯಾಸಂ ಚ ಭಾರತೀಂ ವಾಣೀಂ ವಿಧಿಂ ವಾಯುಂ ರಮಾಂ ತಥಾ ।**
**ತಥಾ ನಾರಾಯಣಂ ಮೂಲಗುರೂನಾಹುರ್ವಿಪಶ್ಚಿತಃ ॥**

ಮಂತ್ರ ಪ್ರತಿಪಾದ್ಯ ದೇವತೆಯನ್ನಾಗಿಯೂ ವಾಸುದೇವನನ್ನು ಮಂತ್ರಜಪದ ಮುಖ್ಯ ಫಲಪ್ರದನನ್ನಾಗಿಯೂ ಸ್ಮರಿಸಿಕೊಳ್ಳಲಾಗುವುದು.

## ಪಾಪ ಪುರುಷನ ನಿರಾಸ :

ನಾವೆಷ್ಟು ಪಾವಿತ್ರ್ಯವನ್ನು ಸಂಪಾದಿಸಿಕೊಂಡೆವೆಂದರೂ ಮಹಾಪಾಪಗಳು ನಮ್ಮನ್ನು ಕಾಡುತ್ತಿರುವಾಗ ಮಂತ್ರದ ಜಪ ನಮ್ಮಲ್ಲಿ ಫಲಿಸುವುದಿಲ್ಲ. ಕಳೆ ಕಿತ್ತು ಹಸನು ಮಾಡದ ಭೂಮಿಯಲ್ಲಿ ಬಿತ್ತಲ್ಪಟ್ಟ ಬೀಜಗಳಂತೆ. ಅದಕ್ಕಾಗಿ ಪಾಪಗಳೆಲ್ಲದರ ಪರಿಹಾರವನ್ನು ಸಂಪಾದಿಸಿಕೊಳ್ಳಬೇಕು. 'ಪಾಪಪುರುಷನ ವಿಸರ್ಜನೆ' ಈ ಉದ್ದೇಶಕ್ಕಾಗಿಯೇ ಹೊರಟದ್ದು.

**ಆದಾವೇವ ಜಪೇ ಕುರ್ಯಾಚ್ಛೋಷಣಂ ದಹನಂ ಪ್ಲುತಿಮ್ ।**
**ವಾಯ್ವಗ್ನಿವಾರುಣೈರ್ಬೀಜೈರ್ಧ್ಯಾತ್ವಾ ತನ್ಮಂಡಲೇ ಹರಿಮ್ ।**

ಜಪಕಾಲದ ಮೊದಲು ವಾಯುಬೀಜಾಕ್ಷರ ಎನಿಸಿರುವ 'ಯಂ'ನಿಂದ ಹೊಟ್ಟೆಯಲ್ಲಿ, ಅಗ್ನಿಬೀಜಾಕ್ಷರ ಎನಿಸಿರುವ 'ರಂ'ನಿಂದ ಹೃದಯದಲ್ಲಿ.ವಾರುಣ ಬೀಜಾಕ್ಷರ ಎನಿಸಿರುವ 'ವಂ'ನಿಂದ ಶಿರಸ್ಸಿನಲ್ಲಿ, ಪ್ರದ್ಯುಮ್ನ, ಅನಿರುದ್ಧ, ವಾಸುದೇವ ರೂಪಗಳಲ್ಲಿ ಇರುವ ಶ್ರೀಹರಿಯನ್ನು ಧ್ಯಾನಿಸಿ ಪಾಪಪುರುಷನ ಒಣಗಿಸುವಿಕೆ ಸುಡುವಿಕೆಗಳನ್ನು ನಡೆಸಬೇಕು ಮತ್ತು ಶರೀರವನ್ನು ಅಮೃತ ರಸದಿಂದ ತೋಯಿಸಬೇಕು— ಎಂದು ಶ್ರೀ ಮಧ್ವಾಚಾರ್ಯರು ತಂತ್ರಸಾರ ಸಂಗ್ರಹದಲ್ಲಿ (2–6) ತಿಳಿಸಿರುವಂತೆ 'ಪಾಪ ಪುರುಷ'ನ ದಹನಾದಿಗಳನ್ನು ನಡೆಸಬೇಕೆಂದರೆ ಮೊತ್ತ ಮೊದಲು ಹೊಟ್ಟೆಯ ಎಡಭಾಗದಲ್ಲಿ ಅವನ ರೂಪವನ್ನು ಚಿಂತಿಸಬೇಕು—'ಬ್ರಹ್ಮಹತ್ಯೆಯೇ ತಲೆಯಾಗಿ ಉಳ್ಳವನು; ಚಿನ್ನವನ್ನು ಕದಿಯುವಿಕೆಯೇ ಎರಡು ಭುಜಗಳಾಗಿ ಉಳ್ಳವನು....' ಈ ರೀತಿಯಾಗಿ. ಇದು ಬರೀ ಕಲ್ಪನೆ ಎಂದಾದರೆ ಇದರ ಆಧಾರದಲ್ಲಿ ನಡೆಸಲಾಗುವ ಉಪಾಸನೆ. 'ಅಸದುಪಾಸನೆ' – ಎಂದೆನಿಸಿ ದೋಷಕಾರಕವೆಂದೆನಿಸೀತು! ಆದ್ದರಿಂದ ಪ್ರತಿನಿತ್ಯ ಎಸಗಬಹುದಾದ, ಎಸಗುತ್ತಿರುವ ಬ್ರಹ್ಮಹತ್ಯಾ, ಸ್ವರ್ಣಚೌರ್ಯ, ಸುರಾಪಾನ, ಗುರುಹಿರಿಯರ ಪತ್ನಿಯರನ್ನು ಬಯಸುವುದು ಹಾಗೂ ಈ ಬಗೆಯ ಮಹಾಪಾತಕಗಳನ್ನೆಸಗುತ್ತಿರುವ ಪಾತಕಿಗಳ ಸಹವಾಸ–ಎಂಬ ಐದು ಮಹಾಪಾತಕಗಳು, ಶೂದ್ರಹತ್ಯಾದಿ ಪಾತಕಗಳು, ಪರಸ್ತ್ರೀಭೋಗಾದಿ ಉಪಪಾತಕಗಳು [1] — ಇವುಗಳನ್ನೇ ತಲೆ ಮುಂತಾದ ಅಂಗಗಳನ್ನಾಗಿಯೂ, ರೋಮಗಳನ್ನಾಗಿಯೂ ಹೊಂದಿರುವವನು ಆ ಪಾಪಪುರುಷನು.

---

1. **ಪರದಾರಾದಿಕಂ ಚಾಪಿ ಹ್ಯುಪಪಾತಕಸಂಜ್ಞಿತಮ್ । ಪಾತಕಂ ಶೂದ್ರಹತ್ಯಾದಿ....'—ಧರ್ಮವಿವೇಕೇ (ಭಾಗ. ತಾ. ನಿ. 11–14–30)**

ನಾವು ಮುಖ್ಯವಾಗಿ ಬ್ರಹ್ಮಹತ್ಯೆಯೇ ಮುಂತಾದ ಮಹಾಪಾತಕಗಳನ್ನು ಎಸಗದಿರಬಹುದು. ಆದರೆ ಬ್ರಾಹ್ಮಣ ಹತ್ಯೆ ಮಾತ್ರ ಬ್ರಹ್ಮಹತ್ಯೆಯಲ್ಲ. ಬ್ರಹ್ಮಜ್ಞಾನಿಗಳ ಹಿಂಸೆ, ನಿಂದೆ ಇಲ್ಲಿ ಬ್ರಹ್ಮಹತ್ಯೆಯಲ್ಲಿ ಸೇರಿದೆ. ಹೀಗೆ ಬೆಲೆಯುಳ್ಳ ಪದಾರ್ಥಗಳ ಕಳ್ಳತನವೆ ಸ್ವರ್ಣಸ್ತೇಯ. ನಿಷಿದ್ಧ ಪದಾರ್ಥಗಳ ಸೇವನೆ ಸುರಾಪಾನ. ತನಗಿಂತ ಉತ್ತಮರ ಬಗ್ಗೆ ಕಾಮ ದೃಷ್ಟಿಯೆ ಗುರುತಲ್ಪಗಮನ ಅನಿಸಿದೆ. ಈ ಬಗೆಯ ದುರಾಚಾರ ನಡೆಸುವವರ ಒಡನಾಟವೂ ದೊಡ್ಡ ಪಾತಕವೆ. ಇವೇ ಮುಂತಾದ ಮಹಾ ಪಾತಕಗಳು ನಮ್ಮಿಂದ ಧಾರಾಳವಾಗಿ ಎಸಗಲ್ಪಡುತ್ತಿರುತ್ತವೆ. ಇದಕ್ಕಿಂತಲೂ ಮುಖ್ಯವಾಗಿ ಸುರಾ ಎನಿಸುವ ಭಗವಂತನ ಸ್ವಾತಂತ್ರ್ಯಾದಿ ಗುಣಗಳನ್ನು ನಮ್ಮದ್ದನ್ನಾಗಿ ಭಾವಿಸುವ 'ಸುರಾಪಾನ', ಬ್ರಾಹ್ಮಣ ಎನಿಸುವ ಭಗವಂತ ಇಲ್ಲ ಎಂದು ಭಾವಿಸುವ 'ಬ್ರಹ್ಮಹತ್ಯೆ'[1] —ಮುಂತಾದ ಭಗವತ್ಕೇಂದ್ರಿತಗಳಾದ ಮಹಾ ಪಾತಕಗಳು ಎಲ್ಲರ ಜೀವನದಲ್ಲೂ ನಡೆದೇ ತೀರುವವು.

ಇಂತಹ ಪಾಪಗಳ ಮೂರ್ತಿಯಾದ ಪಾಪ ಪುರುಷನನ್ನು ಒಣಗಿಸಿ ಸುಟ್ಟ ಬಳಿಕ ವಾರುಣ ಬೀಜ ಮಂತ್ರದಿಂದ ಅಮೃತರಸದ ಧಾರೆಯಿಂದ ಪೂತನಾಗಿ ನಡೆಸುವ ಮಂತ್ರದ ಜಪ ಹೆಚ್ಚು ಫಲಪ್ರದ.

### ಶುದ್ಧಿ ಮತ್ತು ಏಕಾಗ್ರತೆಗಾಗಿ

## ಪ್ರಾಣಾಯಾಮ

**ಪ್ರಾಣಾಯಾಮೋ ರೇಚಯಿತ್ವಾ ಪೂರಯಿತ್ವಾ ಚ ಕುಂಭಕೇ ।**

—ಎಂದು ತಂತ್ರಸಾರ ಸಂಗ್ರಹದಲ್ಲಿ ಹೇಳಿರುವಂತೆ (2-4) ಮೂಗಿನ ಬಲ ರಂಧ್ರದಿಂದ ಗಾಳಿಯನ್ನು ಹೊರಬಿಟ್ಟು ಎಡ ರಂಧ್ರದಿಂದ ಶುದ್ಧ ವಾಯುವನ್ನು ಒಳಗೆ ತೆಗೆದುಕೊಂಡು ಸುಷುಮ್ನಾ ನಾಡಿಯಲ್ಲಿ ವಾಯುನಿರೋಧ ಮಾಡುವುದಕ್ಕೆ ಪ್ರಾಣಾಯಾಮವೆಂದು ಹೆಸರು. ಪರಿಶುದ್ಧಿಗೆ ಹಾಗೂ ಮನಸ್ಸಿನ ಏಕಾಗ್ರತೆಗೆ ಕಾರಣವಾಗಿ ಪ್ರಾಣಾಯಾಮವನ್ನು ಪ್ರತಿಯೊಂದು ಮಂತ್ರ ಜಪದ ಪ್ರಾರಂಭದಲ್ಲೂ ವಿಧಿಸಲಾಗಿದೆ. ವಾಯುವನ್ನು ಸುಷುಮ್ನಾನಾಡಿಯಲ್ಲಿ ತಡೆಹಿಡಿಯುವ ಕುಂಭಕ ಸ್ಥಿತಿಯಲ್ಲಿ ಮಂತ್ರವನ್ನು ಹನ್ನೆರಡು ಬಾರಿ ಅಥವಾ ಇಪ್ಪತ್ತಾನಾಲ್ಕು

---

1. **ಸುರಾ ಹರೇರ್ಗುಣಾಃ ಪ್ರೋಕ್ತಾಸ್ತೇ ಮೇ ಸ್ಯುರಿತಿ ಚಿಂತನಮ್ ।**
**ಸುರಾಪಾನಮಿತಿ ಪ್ರೋಕ್ತಂ....ಬ್ರಾಹ್ಮಣೋ ವಿಷ್ಣುರುದ್ದಿಷ್ಟಃ**
**ಸ ನಾಸ್ತೀತ್ಯಭಿಚಿಂತನಮ್ । ಬ್ರಹ್ಮಹತ್ಯಾ ಸಮುದ್ದಿಷ್ಟಾ....॥**
**—ಭಾಗ. ತಾ. ನಿ. 11-21-42**

ಬಾರಿ ಜಪಿಸಬೇಕು. ಯಾವ ಮಂತ್ರದ ಜಪದ ಅಂಗವಾಗಿ ಪ್ರಾಣಾಯಾಮವನ್ನು ನಡೆಸಲಾಗುವುದೋ ಅದೇ ಮಂತ್ರವನ್ನು ಆ ಪ್ರಾಣಾಯಾಮದಲ್ಲಿ ಜಪಿಸಬೇಕು.

**'....ದ್ವ್ಯೇಕೇನ ದ್ವಾದಶಕೇನ ವಾ ।**

**ತತ್ತನ್ಮಂತ್ರೇಣ ವಾ ಕಾರ್ಯೋ....' —ತಂ. ಸಾ. ಸಂ. 2-5**

ಕೃಷ್ಣ ಮಂತ್ರದ ಜಪದಲ್ಲಿ ತೊಡಗಿರುವವರು ಕೃಷ್ಣಮಂತ್ರವನ್ನೇ ಪ್ರಾಣಾಯಾಮದಲ್ಲಿ ಜಪಿಸಬೇಕು.

## ಋಷ್ಯಾದಿಗಳ ಸ್ಮರಣೆ:

**'ಯೋ ಹವಾ ಅವಿದಿತಾರ್ಷಚ್ಛಂದೋದೈವತಬ್ರಾಹ್ಮಣೇನ ಮಂತ್ರೇಣ ಯಜತಿ ಯಾಜಯತಿ ಅಧ್ಯಾಪಯತಿ ವಾ ಸ್ಥಾಣುಂ ವರ್ಚ್ಛತಿ ಗರ್ತೇ ವಾ ಪದ್ಯತೇ ಪ್ರವಾ ಮೀಯತೇ'**

ಎಂದು ಉಪನಿಷತ್ತು ಮಂತ್ರಾರ್ಥ ಚಿಂತನೆಯೊಂದಿಗೆ ಮಂತ್ರದ ದ್ರಷ್ಟಾರನಾದ ಋಷಿಯನ್ನೂ, ಮಂತ್ರ ಯಾವ ಛಂದಸ್ಸಿನಲ್ಲಿ ಇದೆಯೋ ಅಂತಹ ಛಂದಸ್ಸಿನ ಅಭಿಮಾನಿ ದೇವತೆಯನ್ನೂ, ಮಂತ್ರ ಪ್ರತಿಪಾದ್ಯ ದೇವತೆಯನ್ನೂ ಕೃತಜ್ಞತಾಪೂರ್ವಕವಾಗಿ ಸ್ಮರಿಸಿಕೊಂಡಾಗಷ್ಟೇ ಆ ಮಂತ್ರವನ್ನು ಜಪಿಸಲು ಅಧಿಕಾರ ಸಿದ್ಧಿಸುವುದು—ಎಂದು ಎಚ್ಚರಿಸಿದೆ. ಅಲ್ಲದೆ ಮಂತ್ರದ ಜಪ ಅವರ ಅನುಗ್ರಹದಿಂದಾಗಿ ಹೆಚ್ಚು ಫಲಪ್ರದವಾಗುವುದು. ಋಷಿಯು ತಲೆಯಲ್ಲಿ ಸನ್ನಿಹಿತನಾಗಿ ಮಂತ್ರವನ್ನು ಜಪಿಸಲು ಬೇಕಾದ ಸ್ಫೂರ್ತಿಯನ್ನು ನೀಡಲಿ. ಛಂದೋಭಿಮಾನಿ ದೇವತೆ ಮಂತ್ರವನ್ನು ಶುದ್ಧವಾಗಿ ಪಠಿಸಲು ಬೇಕಾದ ಸಾಮರ್ಥ್ಯವನ್ನು ನೀಡಲಿ, ಪ್ರತಿಪಾದ್ಯದೇವತೆ ಮಂತ್ರಜಪದಿಂದ ತನ್ನ ಬಗ್ಗೆ ಭಕ್ತಿ ಉದಯಿಸುವಂತೆ ಅನುಗ್ರಹಿಸಲಿ ಎಂಬ ದೃಷ್ಟಿಯಿಂದ ತಲೆಯನ್ನು, ಬಾಯಿಯನ್ನು, ಎದೆಯನ್ನು ಕ್ರಮವಾಗಿ ಮುಟ್ಟಿಕೊಂಡು ಋಷಿ, ಛಂದೋಭಿಮಾನಿ ಹಾಗೂ ದೇವತೆಗಳನ್ನು ಸ್ಮರಿಸಿಕೊಳ್ಳಬೇಕು.

**'ವೈಷ್ಣವಾನಾಂ ಮುನಿರ್ಬ್ರಹ್ಮಾ ಮಂತ್ರಾಣಾಂ....' -(ತಂ. ಸಾ. ಸಂ. 4-6)**

ಎಂದಿರುವಂತೆ ವೈಷ್ಣವ ಮಂತ್ರವಾದ ಕೃಷ್ಣಷಡಕ್ಷರಮಂತ್ರಕ್ಕೆ ಚತುರ್ಮುಖ ಬ್ರಹ್ಮನೇ ದ್ರಷ್ಟಾರನಾದ ಋಷಿ. ಮಂತ್ರವು ದೈವೀ ಗಾಯತ್ರೀ ಛಂದಸ್ಸಿನಲ್ಲಿದ್ದು, ಇದಕ್ಕೆ ಶ್ರೀ, ಸರಸ್ವತಿ, ಭಾರತಿ, ಗರುಡ ಹಾಗೂ ಸ್ವಾಹಾ ಅಭಿಮಾನಿ ದೇವತೆಗಳು. ಕೇವಲ ಜಡ ಛಂದಸ್ಸನ್ನು ಸ್ಮರಿಸದೆ, ಅವರ ಅಭಿಮಾನಿಗಳಾದ ಲಕ್ಷ್ಮೀ ಮುಂತಾದವರನ್ನು ಸ್ಮರಿಸಿಕೊಳ್ಳಬೇಕು. ಕೃಷ್ಣ ಮಂತ್ರ

ದಿಂದ ಪ್ರತಿಪಾದ್ಯನಾದ ಶ್ರೀಕೃಷ್ಣನನ್ನೇ ಮಂತ್ರದ ದೇವತೆಯನ್ನಾಗಿ ಸ್ಮರಿಸಿ ಕೊಳ್ಳಬೇಕು.

## ಭಗವದ್ರೂಪಗಳ ಸನ್ನಿಧಾನಕ್ಕಾಗಿ

# ಷಡಂಗನ್ಯಾಸ

**ಜ್ಞಾನೈಶ್ವರ್ಯಪ್ರಭಾನಂದತೇಜಃಶಕ್ತಿಭಿರೇವ ವಾ ।**
**ಪೂರ್ಣಾತ್ಮಮಧ್ಯಗೈಃ ಸರ್ವವೈಷ್ಣವಾಂಗಾನ್ಯಥೋ ವಿದುಃ'**

ಎಂದು ತಂತ್ರಸಾರ ಸಂಗ್ರಹದಲ್ಲಿ (4–8) ತಿಳಿಸಿರುವಂತೆ ಪೂರ್ಣ ಮತ್ತು 'ಆತ್ಮ' ಶಬ್ದಗಳ ಮಧ್ಯದಲ್ಲಿರುವ 'ಜ್ಞಾನ' 'ಐಶ್ವರ್ಯ' 'ಪ್ರಭಾ' 'ಆನಂದ' 'ತೇಜಃ' 'ಶಕ್ತಿಃ' ಈ ಆರು ಪದಗಳಿಂದ ಎಲ್ಲ ವೈಷ್ಣವ ಮಂತ್ರಗಳಿಗೂ ಅಂಗನ್ಯಾಸ ವಿಹಿತವಾಗಿರುವಂತೆ ಕೃಷ್ಣಮಂತ್ರಕ್ಕೂ ಈ ಅಂಗನ್ಯಾಸವನ್ನು ನಡೆಸಬೇಕು.

ನಮ್ಮ ಅಂಗಗಳಲ್ಲಿ ಮಂತ್ರಪೂತವಾದ ಕರವನ್ನು ಇಡುವುದು ಹಾಗೂ ಆ ಮೂಲಕ ಆಯಾ ಭಗವದ್ರೂಪಗಳನ್ನು ಇಡುವುದು ಅಂದರೆ ಇರುವವೆಂಬ ಅನುಸಂಧಾನ ತಂದುಕೊಳ್ಳುವುದು — 'ಅಂಗನ್ಯಾಸ' ಎಂಬುದರ ಅರ್ಥ. ನನ್ನ ಹೃದಯದಲ್ಲಿ ಹೃದಯ ಶಬ್ದವಾಚ್ಯನಾಗಿರುವ, ಪೂರ್ಣಜ್ಞಾನಸ್ವರೂಪಿಯಾದ ಭಗವಂತನಿಗೆ ಈ ದೇಹವು, ದೇಹದ ಹೃದಯುವು ಅರ್ಪಿತ ಎಂಬುದು 'ಪೂರ್ಣಜ್ಞಾನಾತ್ಮನೇ ಹೃದಯಾಯ ನಮಃ' – ಎಂದು ಪಠಿಸುವಾಗ ತಂದುಕೊಳ್ಳಬೇಕಾದ ಅನುಸಂಧಾನ. ಶಿರಸ್ಸಿನಲ್ಲಿ ಶಿರಃ ಶಬ್ದವಾಚ್ಯನಾಗಿ ಇರುವ ಪೂರ್ಣ ಪ್ರಭುತ್ವಸ್ವರೂಪಿಯಾಗಿರುವ ಭಗವಂತನಿಗೆ ಈ ದೇಹ, ದೇಹದ ಶಿರಸ್ಸು ಸಮರ್ಪಿತ ಎಂಬುದು 'ಪೂರ್ಣೈಶ್ವರ್ಯಾತ್ಮನೇ ಶಿರಸೇ ಸ್ವಾಹಾ' ಎಂದು ಪಠಿಸುವಾಗ ತಂದುಕೊಳ್ಳಬೇಕಾದ ಅನುಸಂಧಾನ. ನನ್ನ ಜುಟ್ಟಿನಲ್ಲಿ 'ಶಿಖಾ' ನಾಮಕನಾಗಿರುವ ಪೂರ್ಣಪ್ರಭಾ ಸ್ವರೂಪಿಯಾಗಿರುವ ಭಗವಂತನಿಗೆ ಈ ದೇಹ ದೇಹದ ಶಿಖಾ ಸಮರ್ಪಿತ ಎಂಬುದು 'ಪೂರ್ಣಪ್ರಭಾತ್ಮನೇ ಶಿಖಾಯೈ ವಷಟ್' ಎನ್ನುವಾಗ ತಂದುಕೊಳ್ಳಬೇಕಾದ ಅನುಸಂಧಾನ. ನನ್ನ ಕವಚ ಮುದ್ರೆಯಲ್ಲಿ ಕವಚನಾಮಕನಾಗಿ ಸನ್ನಿಹಿತನಾಗಿರುವ ಪೂರ್ಣಾನಂದ ಸ್ವರೂಪಿಯಾದ ಭಗವಂತನಿಗೆ ಈ ಶರೀರ ಸಮರ್ಪಿತ ಎಂಬುದಾಗಿ 'ಪೂರ್ಣಾನಂದಾತ್ಮನೇ ಕವಚಾಯ ಹುಮ್' – ಎನ್ನುವಾಗ ತಂದುಕೊಳ್ಳಬೇಕಾದ ಅನುಸಂಧಾನ.

ನನ್ನ ನೇತ್ರಗಳಲ್ಲಿ ನೇತ್ರನಾಮಕನಾಗಿ ಇರುವ ಪೂರ್ಣತೇಜಃಸ್ವರೂಪಿಯಾದ ಭಗವಂತನಿಗೆ ಈ ಶರೀರ, ಶರೀರದ ನೇತ್ರಗಳು ಸಮರ್ಪಿತ – ಎಂದು 'ಪೂರ್ಣ ತೇಜ ಆತ್ಮನೇ ನೇತ್ರಾಭ್ಯಾಂ ವೌಷಟ್' ಎನ್ನುವಾಗ ತಂದುಕೊಳ್ಳಬೇಕಾದ ಅನು ಸಂಧಾನ.

ನನ್ನ ಅಸ್ತ್ರಮುದ್ರೆಯಲ್ಲಿ ಅಸ್ತ್ರನಾಮಕನಾಗಿ ಸನ್ನಿಹಿತನಾಗಿರುವ ಪೂರ್ಣ ಶಕ್ತಿ ಸ್ವರೂಪಿಯಾಗಿರುವ ಭಗವಂತನಿಗೆ ಈ ದೇಹ ಸಮರ್ಪಿತ ಎಂಬುದಾಗಿ 'ಪೂರ್ಣ ಶಕ್ತ್ಯಾತ್ಮನೇ ಅಸ್ತ್ರಾಯ ಫಟ್' ಎನ್ನುವಾಗ ತಂದುಕೊಳ್ಳಬೇಕಾದ ಅನುಸಂಧಾನ.

ಷಡಂಗನ್ಯಾಸದಲ್ಲಿ ಪಠಿಸಲಾಗುವ 'ನಮಃ' 'ಸ್ವಾಹಾ' 'ವಷಟ್' 'ಹುಂ' 'ಫಟ್' ಹಾಗೂ 'ವೌಷಟ್' – ಈ ಆರು ಪದಗಳ ಅರ್ಥಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸವಿರುವುದಾದರೂ ಒಟ್ಟಿನಲ್ಲಿ ತ್ಯಾಗ ಅಥವಾ ದಾನ ಎಂಬುದೇ ಇವುಗಳ ತಾತ್ಪರ್ಯ.

ಆದ್ದರಿಂದ ಹೃದಯವೇ ಮುಂತಾದ ಅವಯವಗಳಲ್ಲಿ ಹೃದಯ ಇತ್ಯಾದಿ ನಾಮಗಳಿಂದ ಪೂರ್ಣಜ್ಞಾನಾದಿ ಸ್ವರೂಪಿಯಾಗಿ ಇರುವ ಭಗವದ್ರೂಪಗಳಿಗೆ ಆಯಾ ಅವಯವಗಳನ್ನು ಸಮರ್ಪಿಸಿ, ಆ ರೂಪಗಳ ಪೂರ್ಣರಕ್ಷಣೆಗೊಳಗಾಗಿ, ಪ್ರೇರಣೆಗೊಳಗಾಗಿ ಮಂತ್ರಜಪಾನುಷ್ಠಾನ ನಡೆಸಲಾಗುವುದೆಂಬ ಅನುಸಂಧಾನದ ಪುಷ್ಟಿ ಪಡೆಯುವುದೇ 'ಷಡಂಗನ್ಯಾಸ'ದ ಉದ್ದೇಶ.

# ಧ್ಯಾನ

## ಮಂತ್ರಪ್ರತಿಪಾದ್ಯನ ರೂಪ ಗುಣಗಳ ಚಿಂತನೆ

ಕೃಷ್ಣ ಮಂತ್ರವನ್ನು ಜಪಿಸುವಾಗ ಆ ಮಂತ್ರ ಪ್ರತಿಪಾದ್ಯನಾದ ಶ್ರೀಕೃಷ್ಣ ನನ್ನು ಯಾವ ಗುಣಗಳಿಂದ ಕೂಡಿದವನನ್ನಾಗಿ ಯಾವ ರೂಪದವನನ್ನಾಗಿ ಚಿಂತಿಸು ತ್ತಿರಬೇಕೆಂಬುದನ್ನು ತಂತ್ರಸಾರ ಸಂಗ್ರಹದಲ್ಲಿ (4-40) 'ಧ್ಯಾಯೇದ್ಧರಿನ್ಮ-ಣಿನಿಭಂ....' –ಎಂಬ ಶ್ಲೋಕದಲ್ಲಿ ತಿಳಿಸಲಾಗಿದೆ.

ಇದರಲ್ಲಿ 'ಇಂದಿರೇಶ' ನಾಮದಿಂದ ವಿಶೇಷ್ಯನಾದ ಭಗವಂತನನ್ನು ಉಲ್ಲೇ ಖಿಸಿ, ಅವನನ್ನು ಎಂಟು ವಿಶೇಷಣಗಳಿಂದ ವಿಶ್ಲೇಷಿಸಲಾಗಿದೆ. ಇವುಗಳಲ್ಲಿ 'ಹರಿನ್ಮಣಿನಿಭಂ', 'ಸೌಂದರ್ಯಸಾರಂ', 'ಅರಿಶಂಖವರಾಭಯಾನಿ ದೋರ್ಭಿ-ರ್ದಧಾನಂ' ಹಾಗೂ 'ಭೈಷ್ಮೀಸತ್ಯಾಸಮೇತಂ'–ಎಂಬ ನಾಲ್ಕು ವಿಶೇಷಣಗಳು ಅವನ ಧ್ಯೇಯ ರೂಪವನ್ನು ತಿಳಿಸುತ್ತಿದ್ದರೆ, 'ಜಗದೇಕವಂದ್ಯಂ' 'ಅಜಿತಂ' 'ಸರಸಂ' ಹಾಗೂ 'ಅಖಿಲಪ್ರದಮ್' – ಈ ನಾಲ್ಕು ವಿಶೇಷಣಗಳು ಅವನ ಧ್ಯೇಯಗುಣಗಳನ್ನು ತಿಳಿಸುತ್ತಿವೆ.

ಈ ವಿಶೇಷಣಗಳ ಅರ್ಥಗಳನ್ನು ಕೃಷ್ಣಮಂತ್ರಾರ್ಥಗಳನ್ನಾಗಿಸಿಕೊಂಡು ಅಂದರೆ ಕೃಷ್ಣಮಂತ್ರದಿಂದ ಧ್ಯಾನಶ್ಲೋಕದ ಪ್ರತಿಯೊಂದು ವಿಶೇಷಣಗಳ ಅರ್ಥ, ಅಭಿಪ್ರಾಯ ಹೊರಡುವಂತೆ ಕೃಷ್ಣಮಂತ್ರವನ್ನು ಅರ್ಥೈಸಿಕೊಂಡು ಜಪಿಸಿದೆ ವೆಂದರೆ ಆಗ ಮಂತ್ರಜಪ ಧ್ಯಾನಾನುಗುಣವಾಗಿ ನಡೆದಂತಾದೀತು.

## ಕೃಷ್ಣಮಂತ್ರದ ಘಟಕಗಳ ವೈಶಿಷ್ಟ್ಯ :

ಕೃಷ್ಣ ಷಡಕ್ಷರ ಮಂತ್ರವು ಪ್ರಾರಂಭದಲ್ಲಿಮತ್ತು ಕೊನೆಯಲ್ಲಿ ಓಂಕಾರಗಳನ್ನೂ, 'ಕ್ಲೀಂ' ಎನ್ನುವ ಬೀಜಾಕ್ಷರವನ್ನೂ, 'ಕೃಷ್ಣಾಯ ನಮಃ' – ಎಂಬ ಭಾಗವನ್ನೂ ಒಳಗೊಂಡಿದೆ.

**ಸಕಾಮಃ ಸ್ವಯಮುದ್ದೇಶೀ ನತ್ಯಂತೋಽಯಂ ಷಡಕ್ಷರಃ –ತಂ.ಸಾ.ಸಂ. 4-41**

ಕಾಮ ಬೀಜದಿಂದ ಮತ್ತು ನಮಃ ಪದದಿಂದ ಕೂಡಿದ ಚತುರ್ಥ್ಯಂತವಾದ ಕೃಷ್ಣ ಶಬ್ದವು ಕೃಷ್ಣಷಡಕ್ಷರ ಎನಿಸಿಕೊಳ್ಳುವುದೆಂದು ತಿಳಿಸಲಾಗಿದೆ.

ಓಂಕಾರವನ್ನು ಸ್ತ್ರೀಯರು ಪಠಿಸಬಾರದೆಂಬ ಸಂಪ್ರದಾಯಕ್ಕೆ[1] ಅನುಗುಣವಾಗಿ ಸ್ತ್ರೀಯರು ಓಂಕಾರದ ಬದಲು 'ಶ್ರೀ'ಕಾರವನ್ನು ಪಠಿಸಬೇಕು. ಸಕಲಗುಣಗಳಿಗೂ ಆಶ್ರಯನಾಗಿರುವವನು [ಆಶ್ರೀಯತೇ ಸಕಲೈಃ ಗುಣೈರಿತಿ ಶ್ರೀಃ ಸಕಲ ಗುಣ ಪರಿಪೂರ್ಣಃ] ಸಮಗ್ರ ಜಗತ್ತಿಗೆ ಆಶ್ರಯನಾಗಿರುವವನು [ಆಶ್ರೀಯತೇ ಜಗತ್ ಇತಿ ಶ್ರೀಃ] – ಎಂಬುದಾಗಿ ಓಂಕಾರದ ಅರ್ಥವನ್ನು ಶ್ರೀಕಾರವೂ ತಿಳಿಸಬಲ್ಲದು.

ಕೃಷ್ಣಷಡಕ್ಷರ ಮಂತ್ರದ ಮೊದಲ ಅಕ್ಷರವೆನಿಸಿರುವ 'ಕ್ಲೀಂ' ಎನ್ನುವುದು ಕಾಮಬೀಜವಾಗಿದ್ದು ಸ್ವತಂತ್ರಮಂತ್ರವೆನಿಸಿದೆ. ಚಿಂತಾಮಣಿಯಂತೆ ಸರ್ವೇಷ್ಟದಾಯಕ ಎಂದು ಶ್ರೀಮಧ್ವಾಚಾರ್ಯರು (ತಂ. ಸಾ, ಸಂ. 4-41) ತಿಳಿಸಿರುವರು–

**ತದಾದಿರಪಿ ಸರ್ವೇಷ್ಟಚಿಂತಾಮಣಿರುದೀರಿತಃ ।**

ಆದ್ದರಿಂದ ಕೃಷ್ಣಷಡಕ್ಷರ ಮಂತ್ರವನ್ನು ಜಪಿಸುವಾಗ ಎರಡೆರಡು ಮಂತ್ರಗಳನ್ನು ಜಪಿಸಿದಂತಾಗುವುದೆಂಬುದು ಗಮನಾರ್ಹ.

---

1. **ಓಂಕಾರವನ್ನು ಪ್ರತ್ಯೇಕವಮಂತ್ರವಾಗಿ ಜಪಿಸಬಾರದೆಂದಿರುವುದೇ ಹೊರತಾಗಿ 'ಸ್ರವತ್ಯ ನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ....' — ಬ್ರಹ್ಮವಿದ್ಯೆಯು ಪ್ರಾರಂಭದಲ್ಲಿ ಓಂಕಾರವನ್ನು ಪಠಿಸದಿದ್ದರೆ ಬ್ರಹ್ಮವಿದ್ಯೆ ಹತ್ತುವುದೇ ಇಲ್ಲ; ಕೊನೆಯಲ್ಲಿ ಓಂಕಾರವನ್ನು ಪಠಿಸದಿದ್ದರೆ ಕಲಿತ ಬ್ರಹ್ಮವಿದ್ಯೆ ನಶಿಸಿಹೋಗುವುದೆಂದು ಎಚ್ಚರಿಸಿ ಬ್ರಹ್ಮವಿದ್ಯೆಯ ಪ್ರಾರಂಭದಲ್ಲೂ ಕೊನೆಯಲ್ಲೂ ಪಠಿಸಬೇಕೆಂದು ವಿಹಿತವಾಗಿರುವ ಓಂಕಾರವನ್ನು ಪಠಿಸುವುದು ಶಾಸ್ತ್ರಕ್ಕೆ ಸಮ್ಮತವೇ ಆಗಿದೆ ಎಂದು ವಿಮರ್ಶಕರ ಆಶಯ.**

# ಕೃಷ್ಣಶಬ್ದಾರ್ಥದ ವ್ಯಾಪ್ತಿ :

**ಅನರ್ಥಜ್ಞೋದಿತೋ ಮಂತ್ರೋ ನಿರರ್ಥಸ್ತ್ರಾತಿ ಮಾನತಃ ।**
**ಯನ್ಮಂತ್ರಸ್ತೇನ ಕಥಿತೋ ಮಂತ್ರಾರ್ಥೋ ಜ್ಞೇಯ ಏವ ತತ್ ॥**

–ಎಂಬುದಾಗಿ ಪೈಂಗಿಶ್ರುತಿಯು (ಗೀ.ತಾ. 17-24) ಅರ್ಥಜ್ಞಾನವಿಲ್ಲದವನಿಂದ ಪಠಿತವಾಗುವ ಮಂತ್ರವು ಫಲಪ್ರದವಾಗದು. ಯಾಕೆಂದರೆ ಮಂತ್ರವು ತನ್ನ ಅರ್ಥಜ್ಞಾನದಿಂದ ಅದನ್ನು ಸಂಪಾದಿಸಿಕೊಂಡವನನ್ನು ರಕ್ಷಿಸುವುದೆಂದೇ ಮಂತ್ರ ಎಂದೆನಿಸಿರುವುದು [1] – ಎಂದು ತಿಳಿಸಿ, ಆದ್ದರಿಂದ ಮಂತ್ರಾರ್ಥವನ್ನು ತಿಳಿಯಲೇಬೇಕು – ಎಂದು ಸಂದೇಶಿಸಿದೆ. ಅದಕ್ಕನುಗುಣವಾಗಿ ಕೃಷ್ಣಷಡಕ್ಷರ ಮಂತ್ರದ ಕೃಷ್ಣಶಬ್ದದ ಅರ್ಥಗಳಲ್ಲಿ ಕೆಲವನ್ನಾದರೂ ತಿಳಿದುಕೊಳ್ಳಬೇಕು.

ಮೂರು ಬಗೆಯಿಂದ ಕೃಷ್ಣಶಬ್ದದ ಅರ್ಥವಿಶ್ಲೇಷಣೆಯನ್ನು ನಡೆಸಬಹುದಾಗಿದೆ.

ಕೃಷ್ಣ ಶಬ್ದದಲ್ಲಿ ಘಟಕಗಳಾದ ಕೃ, ಷ್, ಹಾಗೂ ಣ ವರ್ಣಗಳು ಭಗವಂತನನ್ನು ಹೇಗೆ ಪ್ರತಿಪಾದಿಸುತ್ತಿವೆ – ಎಂಬುದಾಗಿ ವರ್ಣ ಸಮನ್ವಯದ ಮೂಲಕ ಕೃಷ್ಣಶಬ್ದಾರ್ಥವನ್ನು ಚಿಂತಿಸಬಹುದು.

ಕೃಷ್ ಹಾಗೂ ಣ ಎಂಬುದಾಗಿ ಎರಡು ಶಬ್ದಗಳಿಂದ ಘಟಿತವಾದದ್ದು ಕೃಷ್ಣಶಬ್ದವೆಂದು ಇಟ್ಟುಕೊಂಡು ಆ ಎರಡು ಶಬ್ದಗಳಿಗೆ ಸಂಬಂಧಿಸುವ ಅರ್ಥಗಳ ಸಮನ್ವಯದ ಮೂಲಕ ಕೃಷ್ಣಶಬ್ದಾರ್ಥವನ್ನು ಚಿಂತಿಸಬಹುದು.

ವಿಲೇಖನ-ಬರೆಯುವುದು, ಗೀರುವುದು ಎಂಬ ಅರ್ಥದಲ್ಲಿ ಇರುವ 'ಕೃಷ'– ಎಂಬ ಕ್ರಿಯಾಪದದಿಂದ ನಿಷ್ಪನ್ನವಾದುದು ಕೃಷ್ಣಶಬ್ದ ಎಂದಿಟ್ಟುಕೊಂಡು ಕೃಷ್ಣಶಬ್ದಾರ್ಥವನ್ನು ಚಿಂತಿಸಬಹುದು.

## ೧. ಸಕಲ ಜಗತ್ತನ್ನೂ ನಿಯಂತ್ರಿಸಿ ತನ್ನಲ್ಲಿ ಸೆಳೆದುಕೊಂಡಿರುವವನು.

**[ಕರ್ಷತಿ–ಸಕಲಂ ಜಗತ್ ನಿಯಮ್ಯ ಕರ್ಷತೀತಿ ಕೃಷ್ಣಃ]**

'ಹೇ ದೇವೇಶ! ಸಕಲ ಜಗತ್ತನ್ನೂ ನಿಯಂತ್ರಿಸಿ ಸೆಳೆದುಕೊಂಡಿರುವಿ. ಆದುದರಿಂದ ಬ್ರಹ್ಮಜ್ಞಾನಿಗಳು ನಿನ್ನನ್ನು 'ಕೃಷ್ಣ' – ಎಂದು ಕರೆಯುವರು–ಎಂಬ

---

1. **ಯಸ್ಮಾದರ್ಥಜ್ಞಾನತ ಏವ ಜ್ಞಾತಾರಂ ತ್ರಾತಿ ತೇನ ಹಿ ಮಂತ್ರಃ ಕಥಿತಃ ।**
**—ನ್ಯಾಯದೀಪಿಕಾ**

● **ಮಂ ಜ್ಞಾತಾರಂ ತ್ರಾತೀತಿ ಮಂತ್ರ ಇತ್ಯರ್ಥಃ —ಭಾವದೀಪ**

ಮಹಾಕೌರ್ಮದಲ್ಲಿ[1] (ಗೀ. ಭಾ. 5–1) ಜ್ಞಾನಿಗಳು ಭಗವಂತನನ್ನು ಯಾವ ಅಭಿಪ್ರಾಯದಲ್ಲಿ ಕೃಷ್ಣ ಎಂದು ಕರೆಯುವರೆಂದು ತಿಳಿಸಲಾಗಿದೆ.

ಕೃಷ್ಣಷಡಕ್ಷರ ಮಂತ್ರದ ಧ್ಯಾನಶ್ಲೋಕದ "ಅಜಿತ" ಎಂಬ ವಿಶ್ಲೇಷಣವೂ ಈ ಅಭಿಪ್ರಾಯವನ್ನೇ ಸೂಚಿಸುತ್ತಿದೆ.

ಜಪದಲ್ಲಿ ತೊಡಗಿರುವ ಸಾಧಕ ತಾನು ಈ ಸಾಧನೆಯನ್ನು ನಡೆಸುತ್ತಿರುವಲ್ಲೂ ಕ್ಷಣ ಕ್ಷಣಕ್ಕೆ ಇಂದ್ರಿಯಾದಿಗಳನ್ನು ಭಗವಂತನು ನಿಯಂತ್ರಿಸುತ್ತ ತನ್ನ ಪಾಲಿಗೆ ಹೇಗೆ 'ಕೃಷ್ಣ' ಎನಿಸಿರುವನೆಂದು ಅನುಸಂಧಾನಕ್ಕೆ ತಂದುಕೊಳ್ಳಬೇಕು.

### ೨. ಮೇಘಶ್ಯಾಮಲನಾಗಿರುವವನು.

**(ಕೃಷ್ಣವರ್ಣತ್ವಾತ್ ಕೃಷ್ಣಃ)**

ಭಗವಂತನು ಅಸಜ್ಜನರಲ್ಲಿ ತಮೋಗುಣವನ್ನು ಹೆಚ್ಚಿಸಿ, ಅವರು ನರಕ, ತಮಸ್ಸು-ಮುಂತಾದುವನ್ನು ಹೊಂದುವಂತೆ ಮಾಡುವ ಅವತಾರಗಳಲ್ಲಿ ಕೃಷ್ಣವರ್ಣವನ್ನು ಧರಿಸಿಕೊಳ್ಳುವನು.[2] ಕೃಷ್ಣಾವತಾರದಲ್ಲೂ ಈ ಉದ್ದೇಶದಿಂದಲೇ ಮೇಘಶ್ಯಾಮಲನಾಗಿರುವನು.

ಮಂತ್ರದ ಧ್ಯಾನಶ್ಲೋಕದ 'ಹರಿನ್ಮಣಿನಿಭಂ' – ಎಂಬ ವಿಶೇಷಣ ಈ ಅಭಿಪ್ರಾಯವನ್ನೇ ಸೂಚಿಸುವುದು. ಸಾಧಕನಲ್ಲೂ ತಮೋಗುಣದ ಅಭಿವೃದ್ಧಿಯಲ್ಲಿ, ಅದರಿಂದ ಎಸಗಲ್ಪಡುವ ಅಸದಾಚಾರಗಳಲ್ಲಿ, ತಮೋಗುಣ ಹತ್ತಿಕ್ಕಲ್ಪಟ್ಟು ಅದರಿಂದಾಗಿ ಅಸದಾಚಾರಗಳು ಹೆಚ್ಚಾಗಿ ಎಸಗಲ್ಪಡದಿರುವಲ್ಲಿ ತನ್ನ ಪಾಲಿಗೆ ದೇವರು ಎಷ್ಟು 'ಕೃಷ್ಣ' ಎನಿಸಿರುವನೆಂದು ತನ್ನ ಬದುಕಿಗೆ ಸಂಬಂಧಪಟ್ಟಂತೆ ಅನುಸಂಧಾನಕ್ಕೆ ತಂದುಕೊಳ್ಳಬೇಕು.

### ೩. ಗುಣಗಳಿಂದ ತನ್ನೆಡೆಗೆ ಎಲ್ಲರನ್ನೂ ಸೆಳೆದುಕೊಳ್ಳುವವನು.

**(ಆಕರ್ಷತಿ ಸರ್ವಾನ್ ಗುಣೈಃ ಸ್ವಂ ಪ್ರತೀತಿ ಕೃಷ್ಣಃ)**

ಮಂತ್ರದ ಧ್ಯಾನಶ್ಲೋಕದಲ್ಲಿ 'ಜಗದೇಕವಂದ್ಯಂ' – ಎಂಬ ವಿಶೇಷಣಕ್ಕೆ ಪೂರಕವಾಗಿ ಈ ಅರ್ಥವನ್ನು ಅನುಸಂಧಾನಮಾಡಿಕೊಳ್ಳಬೇಕು. ಸಕಲ ಗುಣಪರಿಪೂರ್ಣನಾಗಿರುವುದರಿಂದಲೇ 'ಜಗದೇಕವಂದ್ಯ'ನೆನಿಸಿರುವನೆಂಬುದಾಗಿ.

---

1. ಯತಃ ಕರ್ಷಸಿ ದೇವೇಶ ನಿಯಮ್ಯ ಸಕಲಂ ಜಗತ್ ।
ಅತೋ ವದಂತಿ ಮುನಯಃ ಕೃಷ್ಣಂ ತ್ವಾಂ ಬ್ರಹ್ಮವಾದಿನಃ ।

2. ವರ್ಧಯಂಸ್ತು ತಮೋ ಲೋಕೇ ತತ್ ಕೃಷ್ಣಂ ಯಾದವಾದಿಕಮ್ ।
—ಬ್ರಹ್ಮತರ್ಕ (ಭಾಗ. ತಾ. ನಿ. 10-4-20)

ಸಾಧಕನು ತಾನೂ ಭಗವಂತನ ಗುಣಗಳ, ಲೀಲೆಗಳ ಆಕರ್ಷಣೆಗೆ ಹೇಗೆ ಒಳಗಾಗಿರುವೆನೆಂಬುದನ್ನೂ ಅನುಸಂಧಾನಕ್ಕೆ ತಂದುಕೊಳ್ಳಬೇಕು.

**೪. ಸೌಂದರ್ಯಾತಿಶಯದಿಂದ ಎಲ್ಲರನ್ನೂ ತನ್ನೆಡೆಗೆ ಸೆಳೆದುಕೊಂಡಿರುವವನು.**

**[ಆಕರ್ಷತಿ ಸರ್ವಂ ಸ್ವಸೌಂದರ್ಯಾತಿಶಯೇನೇತಿ ಕೃಷ್ಣಃ]**

ಧ್ಯಾನ ಶ್ಲೋಕದ 'ಸೌಂದರ್ಯಸಾರ' – ಎಂಬ ವಿಶೇಷಣ ಈ ಅರ್ಥವನ್ನೇ ತಿಳಿಸುತ್ತಿದೆ. ಭಾಗವತಾದಿಗಳಲ್ಲಿ ವರ್ಣಿತವಾಗಿರುವ ಭಗವಂತನ ಸೌಂದರ್ಯಾತಿಶಯ ತನ್ನ ಪಾಲಿಗೂ ಎಷ್ಟು ಆಕರ್ಷಕವೆನಿಸಿ ಭಗವಂತನು ಆ ಪ್ರಯುಕ್ತ ತನ್ನ ಪಾಲಿಗೆ ಎಷ್ಟರಮಟ್ಟಿಗೆ 'ಕೃಷ್ಣ' ಎನಿಸುವನೆಂಬುದನ್ನು ಸಾಧಕ ವಿಶ್ಲೇಷಿಸಿಕೊಳ್ಳಬೇಕು.

**೬. ಭಯವನ್ನು,ದುಃಖವನ್ನು ಅಥವಾ ಅವುಗಳಿಗೆ ಮೂಲವಾದ ಪಾಪವನ್ನು ಕಡಿಮೆ ಮಾಡುವವನು ಅಥವಾ ನಾಶಮಾಡುವವನು.**

**[ಅಪಕರ್ಷತಿ ದುಃಖಂ ಭಯಂ ತನ್ಮೂಲಂ ಪಾಪಂ ವಾ ನ್ಯೂನೀಕರೋತಿ [1] ವಿನಾಶಯತಿ [2] ವಾ ಕೃಷ್ಣಃ]**

"ಕೃಷ್ಣ ಎಂದರೆ ಕಷ್ಟವು ಪರಿಹಾರ" – ಎಂದಿರುವಂತೆ ಭಕ್ತರ ಭಯದ, ಕ್ಲೇಶಗಳ, ದುಃಖದ, ಅವುಗಳಿಗೂ ಮೂಲವಾದ ಪಾಪದ ಪರಿಹಾರದಲ್ಲಿ ತೊಡಗಿರುವ ಭಗವಂತನು ತಾನು ಆ ಮೂಲಕ ಭಕ್ತರ ರಕ್ಷಣೆಯಲ್ಲಿ ತೊಡಗಿರುವನೆಂಬುದನ್ನು ಸೂಚಿಸುವುದಕ್ಕಾಗಿಯೇ [3] ಕೈಗಳಲ್ಲಿ ಚಕ್ರಶಂಖಗಳನ್ನೂ, ವರಾಭಯ ಮುದ್ರೆಗಳನ್ನೂ ಧರಿಸಿರುವನೆಂದು 'ಅರಿಶಂಖವರಾಭಯಾನಿ ದೋರ್ಭಿರ್ದಧಾನಂ' –ಎಂಬ ಧ್ಯಾನಶ್ಲೋಕದ ವಿಶೇಷಣ ಸೂಚಿಸುವುದು.

---

1. 'ವಿದಿತ್ವಾ ಹ್ಯಪಕರ್ಷೋಽಯಂ ಶಕ್ಯಂ ಚೇದಪಕರ್ಷಿತುಮ್' ಎಂಬ ಮಹಾಭಾರತದಲ್ಲಿ (ಆದಿ. 160 (1) ಅಪ ಎಂಬ ಉಪಸರ್ಗಪೂರ್ವಕವಾದ 'ಕೃಷ' ಧಾತುವನ್ನು 'ನ್ಯೂನೀಕರಣ' ಎಂಬ ಅರ್ಥದಲ್ಲಿ ಬಳಸಲಾಗಿದೆ.

2. 'ಅಪಾಕರ್ಷತ್ ಸ್ವಕಂ ದೇಹಂ ನಿಯಮ್ಯೈರ್ಮಾನಸಪ್ರಿಯೈಃ' ಎಂಬಲ್ಲಿ (ಮ. ಭಾರ. ದ್ರೋಣ 54/26) ಅಪ ಉಪಸರ್ಗಪೂರ್ವಕ ಕೃಷ್ಣಧಾತುವನ್ನು ವಿನಾಶ ಎಂಬ ಅರ್ಥದಲ್ಲಿ ಬಳಸಲಾಗಿದೆ.

3. ಚಕ್ರಶಂಖಗದಾಪದ್ಮಧರಾಶ್ಚಿಂತ್ಯಾಃ ಹರೇರ್ಭುಜಾಃ ।
ಪೀನವೃತ್ತಾ ಜಗದ್ರಕ್ಷಾಕೇವಲೋದ್ಯೋಗಿನೋಽನಿಶಮ್ ॥
–ಎಂದು ದ್ವಾದಶಸ್ತೋತ್ರದಲ್ಲಿ ನಿರೂಪಿತವಾಗಿರುವಂತೆ.

ಸಾಧಕನು ತನ್ನ ಪ್ರಾರಬ್ಧಕರ್ಮಕ್ಕನುಗುಣವಾಗಿ ಬಂದಿರುವ ದುಃಖಾದಿಗಳನ್ನು, ಪಾಪವನ್ನು ಭಗವಂತನು ಬೇರೆ ಬೇರೆ ಲೌಕಿಕ ಉಪಾಯಗಳನ್ನು ಘಟನೆಗಳನ್ನು ನೆರವೇರಿಸಿ ಆ ಮೂಲಕ ದುಃಖಾದಿಗಳನ್ನು ಪರಿಹರಿಸಿ ತನ್ನ ಪಾಲಿಗೆ ಹೇಗೆ ಕೃಷ್ಣ ಎನಿಸಿರುವನೆಂಬುದನ್ನೂ ಅನುಸಂಧಾನ ಮಾಡಬೇಕು.

**೫. ಆಕರ್ಷಕ ವ್ಯಕ್ತಿತ್ವದ ತನ್ನ ಸನ್ನಿಧಾನಾತಿಶಯವನ್ನು ಅಭಿವ್ಯಕ್ತಗೊಳಿಸಿ, ಬೇರೆ ಬೇರೆ ವ್ಯಕ್ತಿಗಳು, ಪದಾರ್ಥಗಳು, ಬುದ್ಧಿವಂತಿಕೆ, ವಾಗ್ಮಿತ್ವ, ಬಲ, ಸೌಂದರ್ಯ—ಮುಂತಾದ ತಮ್ಮ ಅಸಾಧಾರಣ ಗುಣಗಳಿಂದ ಆಕರ್ಷಕಗಳೆನಿಸುವಂತೆ ಅನುಗ್ರಹಿಸುವವನು.**

**[ಆಕರ್ಷಯತಿ ವಿಶಿಷ್ಟವ್ಯಕ್ತಿಷು ವಿಶಿಷ್ಟವಸ್ತುಷು ಚ ಸ್ವಸನ್ನಿಧಾನಾತಿಶಯಂ ಪ್ರಕಟಯ್ಯ ತೇ ಆಕೃಷ್ಟಾಃ ಯಥಾ ಭವಂತಿ ತಥಾ ಕರೋತೀತಿ ಕೃಷ್ಣಃ ಅಂತರ್ಣೀತಣಿಚ್.]**

ಭಗವಂತನು ಗೀತೆಯ ವಿಭೂತಿಯೋಗಾಧ್ಯಾಯದಲ್ಲಿ ತಿಳಿಸಿರುವಂತೆ[1] ಯಾವುದೇ ಪದಾರ್ಥದಲ್ಲಿ ಯಾವುದೇ ವ್ಯಕ್ತಿಯಲ್ಲಿ ಯಾವ ಬಗೆಯ ಹೆಚ್ಚುಗಾರಿಕೆಯೇ ಇರಲಿ ಅದು ಅವನ ಸನ್ನಿಧಾನಾತಿಶಯದಿಂದಲೇ ಉಂಟಾಗುವುದರಿಂದ ಯಾವುದೇ ವ್ಯಕ್ತಿಯ ಅಥವಾ ಪದಾರ್ಥದ ಯಾವ ಬಗೆಯ ಆಕರ್ಷಣೆಗೂ ಕೇಂದ್ರಬಿಂದು ಭಗವಂತನೇ. ಧ್ಯಾನಶ್ಲೋಕದ "ಜಗದೇಕವಂದ್ಯಂ"—ಎಂಬ ವಿಶೇಷಣ ಜಗತ್ತಿನಲ್ಲಿ ಮುಖ್ಯವಾಗಿ ಸ್ತುತ್ಯನಾದವನು ಭಗವಂತನೇ ಎಂದು ತಿಳಿಸುವುದರ ಮೂಲಕ ಯಾವುದೇ ಬಗೆಯ ಸ್ತುತ್ಯ ವ್ಯಕ್ತಿತ್ವ ಅವನ ಮೂಲಕವಾದುದೇ — ಎಂಬ ತಾತ್ಪರ್ಯವನ್ನೂ ಸೂಚಿಸಿಕೊಡಬಲ್ಲದು.

ಸಾಧಕನು ತಾನು ಸುತ್ತ ಕಾಣುವ, ಅನುಭವಿಸುವ ಬೇರೆ ಬೇರೆ ಬಗೆಯ ಆಕರ್ಷಕ ವ್ಯಕ್ತಿಗಳಲ್ಲಿ, ವಸ್ತುಗಳಲ್ಲಿ ಭಗವಂತನ ಸನ್ನಿಧಾನವನ್ನು ಗುರುತಿಸಿಕೊಳ್ಳಬೇಕು.

---

**1. ಯದ್ಯದ್ ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ — ಗೀ. 10-41**

**೭. ಭಕ್ತರ ಯೋಗಕ್ಷೇಮಗಳ ಬಗ್ಗೆ ಸತತವಾಗಿ ಯೋಚಿಸುತ್ತಿರುವವನು.**

**(ಪರಿಕರ್ಷತಿ ಸತತಂ ಚಿಂತಯತಿ [1] ಭಕ್ತಾನಾಂ ಯೋಗಕ್ಷೇಮಮಧಿ—ಕೃತ್ಯೇತಿ ಕೃಷ್ಣಃ)**

ತನ್ನ ಸಂಕಲ್ಪಮಾತ್ರದಿಂದಲೇ ಎಲ್ಲವನ್ನೂ ನೆರವೇರಿಸಬಲ್ಲ ಭಗವಂತನಿಗೆ ಭಕ್ತರ ಯೋಗಕ್ಷೇಮಕ್ಕಾಗಿ ಅಧಿಕ ಚಿಂತನೆಯ ಆವಶ್ಯಕತೆ ಇಲ್ಲವಾದರೂ ತಾನು 'ಭಕ್ತವತ್ಸಲ'–ಎಂಬುದನ್ನು ತನ್ನ ಭಕ್ತರಿಗೆ ಮನವರಿಕೆ ಮಾಡಿಕೊಡುವುದಕ್ಕಾಗಿ ತನ್ನ ಕೃಷ್ಣಾದ್ಯವತಾರಗಳಲ್ಲಿ ಪಾಂಡವ ಮುಂತಾದ ಭಕ್ತರ ಯೋಗಕ್ಷೇಮದ ಚಿಂತನೆಯಲ್ಲಿ ತಾನು ತೊಡಗಿರುವಂತೆ ಭಗವಂತನು ತನ್ನನ್ನು ತೋರಿಸಿಕೊಂಡಿರುವನು.

ಧ್ಯಾನ ಶ್ಲೋಕದ 'ಸರಸಂ' – ಎಂಬ ವಿಶೇಷಣ ಭಕ್ತರ ಯೋಗಕ್ಷೇಮದ ಬಗ್ಗೆಯೇ ಸತತವಾಗಿಯೂ ಚಿಂತನೆಯಲ್ಲಿ ತೊಡಗುವಷ್ಟು ಅವರ ಕುರಿತು ಕರುಣಾರಸವನ್ನು ಸುರಿಸುತ್ತಿರುವವನೆಂಬ ಅಭಿಪ್ರಾಯವನ್ನು ಸೂಚಿಸಬಲ್ಲದು.

ಸಾಧಕನು ತನ್ನ ಯೋಗಕ್ಷೇಮದ ಕುರಿತೂ ಭಗವಂತನು ಯೋಚಿಸುತ್ತ ಅದಕ್ಕನುಗುಣವಾಗಿ ತನ್ನ ಬದುಕಿನ ಆಗುಹೋಗುಗಳನ್ನು ನಿಯಂತ್ರಿಸುತ್ತಿರುವನೆಂಬುದಾಗಿ ಅನುಸಂಧಾನಮಾಡಿಕೊಳ್ಳಬೇಕು.

**೮. ಪ್ರಿಯಗಳಾದ ವ್ಯಕ್ತಿಗಳು, ಪದಾರ್ಥಗಳು ಪರಸ್ಪರವಾಗಿ ಪ್ರೀತಿಯ ಆಕರ್ಷಣೆಗೊಳಗಾಗುವಂತೆ ಮಾಡುವವನು.**

**(ಆಕರ್ಷಯತಿ ಪ್ರಿಯಾಃ ಪರಸ್ಪರಂ ಪ್ರೀತ್ಯಾಕೃಷ್ಟಾಃ ಯಥಾ ಭವಂತಿ ತಥಾ ಕರೋತೀತಿ ಕೃಷ್ಣಃ ಅಂತರ್ಣೀತಣಿಚ್)**

'ಪ್ರಿಯಕೃತ್' 'ಪ್ರೀತಿವರ್ಧನಃ' - ಎನಿಸಿರುವ [2] ಭಗವಂತನು ತನ್ನ ಸಂಪರ್ಕದಿಂದಾಗಿಯೇ ತನ್ನ ಪ್ರಾಣ, ಬುದ್ಧಿ, ಪತ್ನಿ, ಪುತ್ರ ಮುಂತಾದವರು ಪ್ರಿಯರೆನಿಸಿರುವರೆಂದು ಸಂದೇಶಿಸಿ, [3] ತಾನೇ ಅವರಲ್ಲಿ ಪ್ರೀತಿಯ ಆಕರ್ಷಣೆಯನ್ನು ಬೆಸೆದಿರುವವನೆಂದು ಸೂಚಿಸಿರುವನು.

---

1. ಸ್ಥಾನೇಽಸ್ಮಿನ್ ವಸ ರಾಜೇಂದ್ರ ಕರ್ಮಭಿರ್ನಿರ್ಮಿತೈಃ ಶುಭೈಃ ।
ಕಿಂ ತ್ವಂ ಮಾನುಷ್ಯಕಂ ಸ್ನೇಹಮದ್ಯಾಪಿ ಪರಿಕರ್ಷಸಿ ॥ —ಮ.ಭಾ.ಮಹಾಪ್ರಸ್ಥಾನ 3/33 – ಇಲ್ಲಿ ಪರಿ ಉಪಸರ್ಗಪೂರ್ವಕ ಕೃಷ ಧಾತುವನ್ನು ಸತತವಾದ ಚಿಂತನೆ ಎಂಬ ಚಿಂತನೆ ಎಂಬ ಅರ್ಥದಲ್ಲಿ ಬಳಸಲಾಗಿದೆ.
2. 'ಪ್ರಿಯಕೃತ್' 'ಪ್ರೀತಿವರ್ಧನಃ' –ವಿಷ್ಣುಸಹಸ್ರನಾಮ 874, 875.
3. ಪ್ರಾಣಬುದ್ಧಿಮನಃಸ್ವಾತ್ಮದಾರಾಪತ್ಯಧನಾದಯಃ ।
ಯತ್ಸಂಪರ್ಕಾತ್ ಪ್ರಿಯಾ ಆಸಂಸ್ತತಃ ಕೋಽನ್ವಪರಃ ಪ್ರಿಯಃ ॥
—ಭಾಗ. 10-23-27

ಧ್ಯಾನಶ್ಲೋಕದ 'ಸರಸಂ' ವಿಶೇಷಣ ಪ್ರೀತಿಯರಸವನ್ನೂ[1] ನಿಯಂತ್ರಿಸುವವನೆಂಬ ಅರ್ಥವನ್ನು ಸೂಚಿಸುತ್ತ ಎಲ್ಲರ ಪ್ರೀತಿಯ ಆಕರ್ಷಣೆಗೂ ಮೂಲ ಭಗವಂತನೆಂದು ತಿಳಿಸುತ್ತಿದೆ.

ಸಾಧಕನು ತನ್ನನ್ನು ಸಮಾಜದಲ್ಲಿ ಯಾರು ಯಾರ ಪ್ರೀತಿಸುವರೋ ತಾನು ಯಾರ್ಯಾರನ್ನು ಪ್ರೀತಿಸುತ್ತಿರುವೆನೋ ಅವರೆಲ್ಲರಲ್ಲಿ ಭಗವಂತನು ಪ್ರೀತಿಯ ರಸವನ್ನು ಹರಿಸಿ ಅನುಗ್ರಹಿಸುತ್ತಿರುವನೆಂಬುದನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**೮. ಪ್ರಳಯ ಕಾಲದಲ್ಲಿ ಸೂಕ್ಷ್ಮರೂಪ ತಾಳಿರುವ ಪ್ರಪಂಚವನ್ನು ಸೃಷ್ಟಿ ಕಾಲದಲ್ಲಿ ವಿಸ್ತಾರಗೊಳಿಸುವವನು. ಸಂತಾನಪರಂಪರೆಯನ್ನು, ವಿದ್ಯಾಪರಂಪರೆಯನ್ನು ವಿಸ್ತಾರಗೊಳಿಸುವವನು.**

**[ವಿಕರ್ಷತಿ ಜಗದ್ ಸಂತಾನಾದಿಪರಂಪರಾಂ ವಾ ವಿಸ್ತಾರಯತೀತಿ[2] ಕೃಷ್ಣಃ]**

ಪರಮಾತ್ಮನು ಪರೀಕ್ಷಿದ್ರಾಜನನ್ನು ರಕ್ಷಿಸಿ, ಪಾಂಡವ ಸಂತಾನವನ್ನು ಕ್ಷೇಮಕ ರಾಜನವರೆಗೆ ವಿಸ್ತಾರಗೊಳಿಸಿರುವಂತೆ ಎಲ್ಲರ ಸಂತಾನಪರಂಪರೆಯನ್ನೂ ವಿಸ್ತಾರಗೊಳಿಸುವನು. ಧ್ಯಾನ ಶ್ಲೋಕದ 'ಅಖಿಲಪ್ರದ' – ವಿಶೇಷಣದ ಅರ್ಥ ವ್ಯಾಪ್ತಿಯಲ್ಲಿ ಈ ಅರ್ಥವು ಸೇರಿಕೊಳ್ಳುವುದು.

ಸಾಧಕನು ತನ್ನ ಮನೆಯ ಸಂತಾನಪರಂಪರೆಯನ್ನು ವಿಸ್ತಾರಗೊಳಿಸುವುದರಲ್ಲಿಯೂ ಭಗವಂತನ ಅನುಗ್ರಹವನ್ನು ಗುರುತಿಸಿಕೊಳ್ಳಬೇಕು.

**೯. ಭಕ್ತನನ್ನು ಉದ್ಧಾರಮಾಡಿ ತನ್ನ ಬಳಿಗೆ ಕೊಂಡೊಯ್ಯುವವನು.**

**[ಉಪಕರ್ಷತಿ[3] ಉದ್ಧೃತ್ಯಾತ್ಮಸಮೀಪಂ ಪ್ರಾಪಯತೀತಿ ಕೃಷ್ಣಃ]**

---

1. ರಸಃ ಪ್ರೀತಿರಸಃ ನಿಯಾಮಕತಾಸಂಬಂಧೇನ ತೇನ
   ಸಹಿತಃ ಸರಸಃ ಪ್ರೀತಿರಸನಿಯಾಮಕ ಇತಿ ಯಾವತ್ ।
2. ಇಚ್ಛೇತ್‌ಪಕ್ಷಪುಚ್ಛಾಪ್ಯಯೇಷು ಚತುರಂಗುಲಂ ಚತುರಂಗುಲಂ ಸಂಕರ್ಷತಿ ವಿಕರ್ಷತ್ಯಂತೇ (ಕಾ. ಶ್ರೌ. 16/8/15) ಇಲ್ಲಿ ವಿ ಉಪಸರ್ಗ ಪೂರ್ವಕವಾದ ಕೃಷ ಧಾತುವನ್ನು ವಿಸ್ತಾರಾರ್ಥದಲ್ಲಿ ಬಳಸಲಾಗಿದೆ.
3. ಚಕ್ರೇ ವಿಸೃಷ್ಟಮಜಯೇಶ್ವರ ಷೋಡಶಾರೇ ।
   ನಿಷ್ಪೀಡ್ಯಮಾನಮುಪಕರ್ಷ ವಿಭೋ ಪ್ರಪನ್ನಮ್ ॥
   ಭಾಗವತದಲ್ಲಿ (7–9–22) ಉಪ ಉಪಸರ್ಗಪೂರ್ವಕ ಕೃಷಧಾತು ತನ್ನ ಸಮೀಪಕ್ಕೆ ಹೊಂದಿಸುವಿಕೆ ಎಂಬ ಅರ್ಥದಲ್ಲಿ ಬಳಸಲಾಗಿದೆ.

ಧ್ಯಾನಶ್ಲೋಕದ 'ಭೈಷ್ಮೀಸತ್ಯಾಸಮೇತಂ'—ಎಂಬ ವಿಶೇಷಣವು ಭಗವಂತನು ತನ್ನ ಭಕ್ತರಿಗೆ ಹೇಗೆ ತನ್ನ ಸಾಮಿಪ್ಯವನ್ನು ಒದಗಿಸುವನೆಂಬುದನ್ನು ಸೂಚಿಸುತ್ತಿದ್ದರೆ, ಭಗವಂತನು ತನ್ನ ಸಾಮೀಪ್ಯರೂಪವಾದ ಶ್ರೇಷ್ಠ ಪುರುಷಾರ್ಥವೆನಿಸಿರುವ ಮುಕ್ತಿಯನ್ನೇ ಅನುಗ್ರಹಿಸುವನೆಂದ ಮೇಲೆ ಉಳಿದ ಧರ್ಮಾರ್ಥ ಕಾಮ ಪುರುಷಾರ್ಥಗಳನ್ನು ನೀಡುವನೆಂಬುದು ಸುತರಾಂ ಸಿದ್ಧಿಸುವುದೆಂಬುದಾಗಿ 'ಅಖಿಲಪ್ರದಂ'—ಎಂಬ ಧ್ಯಾನಶ್ಲೋಕದ ವಿಶ್ಲೇಷಣದ ಅರ್ಥಕ್ಕೆ ಈ ಅರ್ಥವು ಪೋಷಕವೆನಿಸುವುದು. ಸಾಧಕನು ತನ್ನ ಬದುಕಲ್ಲಿ ಭಗವಂತನು ತನ್ನ ವಿಶೇಷ ಸನ್ನಿಧಾನಕ್ಕೆ ಪಾತ್ರರಾದ ಸಜ್ಜನರ, ಗುರುಗಳ ವಿಶೇಷವಾದ ಸಂಪರ್ಕ ದೊರಕುವಂತೆ ಮಾಡುವುದರ ಮೂಲಕ ತನ್ನ ಸಾಮೀಪ್ಯವನ್ನು ಹೇಗೆ ಒದಗಿಸಿಕೊಟ್ಟಿರುವನೆಂಬುದನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

**೧೦. ಪೂರ್ಣವಾದ ಸುಖವನ್ನು ಹೊಂದಿರುವವನು [1] ಅಥವಾ ಎಲ್ಲವನ್ನೂ ಸ್ವತಂತ್ರವಾಗಿ ನಡೆಸುವವನು; ಎಲ್ಲರಿಗೂ ಪ್ರೇರಕ; ಎಲ್ಲೆಡೆ ಯಾವಾಗಲೂ ಇರುವವನು. ಗುಣಪೂರ್ಣ ಹಾಗೂ ಪೂರ್ಣಬಲಸ್ವರೂಪಿ. [2]**

ಭಗವಂತನು ಪೂರ್ಣಸುಖಸ್ವರೂಪಿ ಎಂಬ ಅರ್ಥದಿಂದಾಗಿ ಅವನು ಭೈಷ್ಮೀಸತ್ಯಾಸಮೇತನಾಗಿರುವುದು ಭಕ್ತೋತ್ತಮಳಾದ ಲಕ್ಷ್ಮೀದೇವಿಯನ್ನು ಅನುಗ್ರಹಿಸುವ ದೃಷ್ಟಿಯಿಂದಲೇ ಹೊರತು ಅವರ ಜೊತೆಗಾರಿಕೆಯಿಂದ ಆನಂದ ಪಡುವ ಉದ್ದೇಶದಿಂದಲ್ಲ—ಎಂಬ ಸ್ಪಷ್ಟೀಕರಣ ದೊರತಂತಾಗುವುದು.

ಸ್ವತಂತ್ರಕರ್ತಾರನಾದ, ಸರ್ವಪ್ರೇರಕನಾದ ತಾನೇ ಎಲ್ಲರಿಂದ ಅವರವರ ಯೋಗ್ಯತೆಗನುಗುಣವಾಗಿ ಸಾಧನೆಗಳನ್ನು ಮಾಡಿಸಿ ಆಯಾ ಸಾಧನೆಗೆ ತಕ್ಕಂತೆ ಫಲಗಳನ್ನು ಅನುಗ್ರಹಿಸುವನೆಂದು 'ಅಖಿಲಪ್ರದ' ವಿಶೇಷಣದ ವಿವರಣೆ ಈ ಅರ್ಥದಿಂದ ದೊರಕಿದಂತಾಗುವುದು.

---

1. ಕೃಷಿರ್ಭೂವಾಚಕಃ ಶಬ್ದಃ ಣಶ್ಚ ನಿರ್ವೃತಿವಾಚಕಃ ।
ವಿಷ್ಣುಸ್ತದ್ಭಾವಯೋಗಾಚ್ಚ ಕೃಷ್ಣೋ ಭವತಿ ಶಾಶ್ವತಃ ॥
ಎಂಬುದಾಗಿ ಮಹಾಭಾರತದಲ್ಲಿ (ಉದ್ಯೋಗ 70-5) ಹೇಳಿರುವಂತೆ ಕೃಷ್ ಅಂದರೆ ಪೂರ್ಣವಾದ (ಭೂಃ 'ಭೂಬಹೌ' 'ಬಹುಃ ಪೂರ್ಣತಾಯಾರ್ವ')ಣಃ ಸುಖವನ್ನು ಹೊಂದಿರುವವನು ಎಂಬ ಅರ್ಥ.

2. ಸರ್ವಂ ಸ್ವತಂತ್ರತಯಾ ಕರೋತೀತಿ ಕೃ. 'ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ....
ಐ. ಉ. 2-8-7-3 ತಥಾಚ ಸರ್ವಕರ್ತೃತ್ವಾತ್ ಪ್ರಾಣತ್ವಾತ್ ಆತ್ಮತ್ವಾತ್ ಬಲರೂಪತ್ವಾಚ್ಚ ಕೃಷ್ಣಃ ।

ಸಾಧಕನು ಭಗವಂತನು ತನ್ನಿಂದಲೂ ಹೇಗೆ ಸಾಧನೆಗಳನ್ನು ನಡೆಸುತ್ತಿರುವ ನೆಂಬುದನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು.

ಹೀಗೆ ಧ್ಯಾನ ಶ್ಲೋಕದಲ್ಲಿ ಬಂದಿರುವ ವಿಶೇಷಣಗಳಿಗನುಗುಣವಾಗಿ ನಡೆಸ ಲಾಗುವ ಈ ಮಂತ್ರಾರ್ಥ ಚಿಂತನೆ ಭಗವಂತನ ಸರ್ವನಿಯಾಮಕತ್ವ, ಸೌಂದರ್ಯಾ ತಿಶಯ, ಮುಕ್ತಿಪ್ರದತ್ವ – ಮುಂತಾದ ಮಹಿಮೆಗಳ ಅನುಸಂಧಾನ ಪೋಷಕ ವಾಗಿ ಭಗವಂತನಲ್ಲಿ ಗೌರವಭಾವನೆಯನ್ನೂ, ಸಾಧಕನ ವಿಷಯದಲ್ಲಿ ಭಗವಂತನ ಪ್ರಭಾವ, ಅನುಗ್ರಹ ಹೇಗೆ ಸಲ್ಲುತ್ತಿದೆ ಎಂಬ ಅನುಸಂಧಾನಕ್ಕೆ ಪುಷ್ಟಿನೀಡಿ ಅವನಲ್ಲಿ ಆತ್ಮೀಯತೆಯನ್ನೂ ಮೂಡಿಸಬಲ್ಲದು. ಇದರಿಂದಾಗಿ ಮಂತ್ರದ ಜಪ ಹೆಚ್ಚು ಫಲಪ್ರದವಾಗಬಲ್ಲದು.

'ಕೃಷ್ಣಾಯ ನಮಃ' — ಎಂಬಲ್ಲಿಯ 'ನಮಃ' ಶಬ್ದವು ಪ್ರಣಾಮ ಎಂಬ ಅರ್ಥವನ್ನು ಸೂಚಿಸಿ 'ವಾಚಿಕವಂದನ' ರೂಪವಾದ ಭಕ್ತಿಗೆ ಪುಷ್ಟಿ ನೀಡುವುದು. ಅಥವಾ 'ನಮಃ' ಎಂಬುದಕ್ಕೆ ತ್ಯಾಗ ಎಂಬ ಅರ್ಥವೂ ಇರುವುದರಿಂದ,[1] 'ಕೃಷ್ಣಾಯ ನಮಃ' — ಎಂಬಲ್ಲಿಯ 'ನಮಃ' ಶಬ್ದವು 'ನಿವೇದನೆ' ಎಂಬ ಅರ್ಥ ವನ್ನು ಸೂಚಿಸಿ, 'ದಾಸ್ಯ' ರೂಪವಾದ ಭಕ್ತಿಗೆ ಪೋಷಕವೆನಿಸಬಲ್ಲದು.

**ಮಕಾರೇಣ ಸ್ವತಂತ್ರಃ ಸ್ಯಾನ್ನಕಾರಸ್ತನ್ನಿಷಿಧ್ಯತಿ ।**
**ತಸ್ಮಾಚ್ಚ ನಮ ಇತ್ಯತ್ರ ಸ್ವಾತಂತ್ರ್ಯಮಪನೋದತಿ ।**
**ತಸ್ಮಾತ್ತು ನಮಸಾ ಯುಕ್ತಾಃ ಸರ್ವೇ ಮಂತ್ರಾಶ್ಚ ಪಾರ್ಥಿವ ।**
**ಸರ್ವಸಿದ್ಧಿಪ್ರದಾ ನೃಣಾಂ ಭವಂತ್ಯತ್ರ ನ ಸಂಶಯಃ ॥**

**—ವೃದ್ಧಹಾರೀತಸ್ಮೃತಿ 6—96, 99**

'ನಮಃ'—ಎಂಬಲ್ಲಿ ಇರುವ ಮಕಾರವು ಸ್ವತಂತ್ರನನ್ನು ತಿಳಿಸಿದರೆ, ನಕಾರವು ಅಂತಹ ಸ್ವಾತಂತ್ರ್ಯವನ್ನು ನಿರಾಕರಿಸುತ್ತದೆ. ಆದುದರಿಂದ ಮಂತ್ರದಲ್ಲಿ ಪ್ರಯೋಗಿಸಲ್ಪಡುವ 'ನಮಃ' ಶಬ್ದವು, ಮಂತ್ರಜಪಿಸುವವನ ಅಸ್ವಾತಂತ್ರ ವನ್ನು ತಿಳಿಸುತ್ತ, ಅವನು ಮಂತ್ರಪ್ರತಿಪಾದ್ಯನಾದ ಭಗವಂತನಿಗೆ ಅಧೀನನಾಗಿರು ವವನೆಂಬ ಜಾಗೃತಿಯನ್ನು ಉಂಟುಮಾಡುವುದು. ಆದುದರಿಂದ ಎಲ್ಲ ಮಂತ್ರ ಗಳೂ 'ನಮಃ' ಶಬ್ದದಿಂದ ಸಹಿತವಾಗಿದ್ದುಕೊಂಡೇ ಸಿದ್ಧಿಪ್ರದವಾಗುವವು.

## ಕೃಷ್ಣಾರ್ಪಣದ ಔಚಿತ್ಯ :

ಇದುವರೆಗಿನ ಜಪಾನುಷ್ಠಾನ ಸ್ವತಂತ್ರಕರ್ತಾರನಾದ ಭಗವಂತನೇ ನನ್ನ

1. **ನಮಸ್ ತ್ಯಾಗೇ, ಸ್ವಸ್ವತ್ವಧ್ವಂಸಾನುಕೂಲವ್ಯಾಪಾರಭೇದೇ । —ವಾಚಸ್ಪತ್ಯಕೋಶ**

ಮೂಲಕ ನಡೆಸಿರುವಂತಹದ್ದು. ಅವನು ಸಂತೋಷಪಡುವಂತಾಗಬೇಕೆಂಬುದೇ ಇದರ ಪ್ರಧಾನ ಉದ್ದೇಶ—ಎಂದು ವಿಶ್ಲೇಷಿಸಿಕೊಳ್ಳುವ ಮೂಲಕ [2] ಭಗವಂತನಿಗೆ ಸಮರ್ಪಿಸಿದಾಗಷ್ಟೇ ಈ ಸಾಧನೆ ಮೋಕ್ಷಪರ್ಯವಸಾಯಿಯಾಗಿ ಅನಂತ ಫಲಪ್ರದವಾಗುವುದು. [3] ಅದಕ್ಕಾಗಿ ಸಾಧನೆಯಲ್ಲಿ ಅವನ ಪಾತ್ರವನ್ನು ಸ್ಪಷ್ಟಪಡಿಸುತ್ತಿರುವ ಮಂತ್ರವನ್ನು ಪಠಿಸಿಯೇ ಅವನಿಗೆ ಸಮರ್ಪಿಸಬೇಕು.

"ಕಾಯೇನ ವಾಚಾ......."—ಎಂಬ ಮಂತ್ರ ಈ ಉದ್ದೇಶಕ್ಕಾಗಿಯೇ ಹೊರಟಿರುವಂತಹದ್ದು. ವಿದೇಹರಾಜನಿಗೆ ಕವಿ ಎಂಬ ಅವಧೂತನಿಂದ ಉಪದೇಶಿಸಲ್ಪಟ್ಟದ್ದೆಂದು ಭಾಗವತದಲ್ಲಿ (11-5-36) ಉಲ್ಲೇಖಿಸಲ್ಪಡುವ ಈ ಶ್ಲೋಕದಲ್ಲಿ 'ಕರೋತಿ ಯದ್ ಯತ್....' '.. ನಾರಾಯಣಾಯೇತಿ ಸಮರ್ಪಯೇತ್ತತ್'—ಎಂಬುದಾಗಿ ಇದೆ. ಶ್ರೀ ಮಧ್ವಾಚಾರ್ಯರು ಸದಾಚಾರಸ್ಮೃತಿಯಲ್ಲಿ (17) ಈ ಆನುಪೂರ್ವಿಯಲ್ಲಿಯೇ ಈ ಪದ್ಯವನ್ನು ಉಲ್ಲೇಖಿಸಿರುವರು.

ಆದರೆ ಯಾವುದೇ ಚಟುವಟಿಕೆಯನ್ನು ಭಗವಂತನಿಗೆ ಸಮರ್ಪಿಸುವಾಗ 'ಕರೋಮಿ ಯದ್ ಯತ್...' '....ನಾರಾಯಣಾಯೇತಿ ಸಮರ್ಪಯಾಮಿ' ಏನೇನನ್ನು ಮಾಡಿರುವೆನೋ ಅವೆಲ್ಲವನ್ನೂ ನಾರಾಯಣನಿಗೆಂದು ನಿವೇದಿಸುವೆನು—ಎಂದು ಪರಿವರ್ತಿಸಿಕೊಂಡು ಪಠಿಸುವರೂಢಿ ನಮ್ಮಲ್ಲಿ ಬಂದಿದೆ.

ಈ ಶ್ಲೋಕದಲ್ಲಿ ತ್ರಿಕರಣಗಳಲ್ಲಿ ದೇಹವನ್ನು—ದೇಹ ಮತ್ತು ಇಂದ್ರಿಯಗಳೆಂಬುದಾಗಿ, ಮನಸ್ಸನ್ನು–ಮನಸ್ಸು ಮತ್ತು ಬುದ್ಧಿ ಎಂಬುದಾಗಿ ಪ್ರತ್ಯೇಕಿಸಿ ಉಲ್ಲೇಖಿಸಲಾಗಿದೆ. ಯಾವುದರ ಮೂಲಕವೇ ನಡೆದ ಯಾವ ಚಟುವಟಿಕೆಯೇ ಆಗಿದ್ದರಲಿ–ಅವೆಲ್ಲವೂ ನಾರಾಯಣನಿಗೆ ಸಮರ್ಪಿತವಾಗಬೇಕೆಂಬುದರಲ್ಲಿ ತಾತ್ಪರ್ಯವನ್ನು ತೋರಿಸುವುದಕ್ಕಾಗಿ ಸ್ಥೂಲವಾಗಿ ಎಲ್ಲವನ್ನೂ ಉಲ್ಲೇಖಿಸುವುದರ ಬದಲು ಪ್ರತ್ಯೇಕ ಪ್ರತ್ಯೇಕವಾಗಿ ಉಲ್ಲೇಖಿಸಲಾಗಿದೆ.

ಕಣ್ಣುರೆಪ್ಪೆಗಳ ಚಾಲನೆಯೇ ಮುಂತಾದವು ಇಂದ್ರಿಯಗಳ ಪಾತ್ರವಿಲ್ಲದೆ ಬರೇ ದೇಹದಿಂದ ನಡೆಯುವಂತಹವು. ನೋಡುವುದು, ಕೇಳುವುದು—ಮುಂತಾ

---

1. ತಂ ಯಥಾಯಥೋಪಾಸತೇ ತದೇವ ಭವತಿ —ಶ್ರುತಿ (ಭಾಗ. ತಾ. 7-3-10-11)

2. ಸರ್ವಕ್ರಿಯಾಸು ಕರ್ತೃತ್ವಪೂಜ್ಯತ್ವೇನ ಜನಾರ್ದನಮ್ ।
ಯೋ ವೇತ್ತಿ ನೈತಿ ಸಂಸಾರಂ ತತ್ಪ್ರಸಾದಾನ್ನ ಸಂಶಯಃ—ಕ್ರಿಯಾಯೋಗ
(ಭಾಗ. ತಾ. ನಿ. 10-3-37)

3. ....ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ ತಸ್ಮೈ ಸಂಭದ್ರಶ್ರವಸೇ ನಮೋ ನಮಃ
—ಭಾಗ. 2-4-17

ದವುಗಳೆಲ್ಲ ದೇಹದ ಇಂದ್ರಿಯಗಳ ಮೂಲಕ ನಡೆಯುವವು. ಮಂತ್ರಪಠನೆ ವಾಗಿಂದ್ರಿಯದಿಂದ ನಡೆಯುವಂತಹದ್ದು. ಪೂರ್ಣದಾರ್ಢ್ಯವಿಲ್ಲದ ವಿಚಾರ ಮನಸ್ಸಿನ ಮೂಲಕ ಚಿಂತಿಸಲ್ಪಟ್ಟರೆ, [1] ದೃಢವಾದ ವಿಚಾರ ಬುದ್ಧಿಯ ಮೂಲಕ ಚಿಂತಿತವಾಗುವುದು. ನಮಗರಿವಿಲ್ಲದೆಯೇ ನಮ್ಮ ನಮ್ಮ ಸ್ವಭಾವಕ್ಕನುಗುಣವಾಗಿ ಅವಯವಗಳ ಚಾಲನೆಯೇ ಮುಂತಾದ ಚಟುವಟಿಕೆಗಳೂ ನಮ್ಮಿಂದ ನಡೆಯುವುದಿದೆ. ಹೀಗೆ ದೇಹ, ಮಾತು, ಮನಸ್ಸು, ಇಂದ್ರಿಯ, ಬುದ್ಧಿ ಹಾಗೂ ಸ್ವಭಾವ —ಇವುಗಳಲ್ಲಿ ಯಾವುದರ ಮೂಲಕ ನಡೆಯುವ ಚಟುವಟಿಕೆಯೇ ಆಗಿದ್ದಿರಲಿ– ಅದು ಸ್ವತಂತ್ರವಾಗಿದ್ದು 'ಸ್ವಭಾವ' – ಎನಿಸಿರುವ [2] ಭಗವಂತನ ಪ್ರೇರಣೆಗನುಗುಣವಾಗಿಯೇ (ಅನುಸೃತಸ್ವಭಾವಃ) ನಡೆಯುವಂತಹದ್ದು.

ಅವನ ಪ್ರೇರಣೆಯಿಂದ ನಡೆದ ಅವುಗಳಿಂದ ಅವನು ಪ್ರಸನ್ನನಾಗಲಿ ಎಂಬ ಅಭಿಪ್ರಾಯದಲ್ಲಿ ನಾರಾಯಣನಿಗಾಗಿ (ನಾರಾಯಣಾಯ) ನಾರಾಯಣನ ಪ್ರಸನ್ನತೆಗಾಗಿ ಎಂದು ಸಮರ್ಪಿಸುವೆನು.

ಹೀಗೆ 'ಕಾಯೇನ ವಾಚಾ....' —ಎಂಬ ಪದ್ಯವು 'ಅನುಸೃತಸ್ವಭಾವಃ'— ಎಂಬ ಶಬ್ದದಿಂದ ಅವನ ಸ್ವತಂತ್ರಕರ್ತೃತ್ವವನ್ನೂ, 'ನಾರಾಯಣಾಯೇತಿ'— ಎಂಬ ಶಬ್ದಗಳಿಂದ ಆ ಚಟುವಟಿಕೆಗಳ ಮೂಲಕ ಅವನ ಪೂಜ್ಯತ್ವವನ್ನೂ ಅನುಸಂಧಾನ ಮಾಡಿಕೊಳ್ಳುವ ಮೂಲಕ ಅವನಿಗೆ ದೇಹಾದಿಗಳಿಂದ ನಡೆದ ಸಕಲ ಚಟುವಟಿಕೆಗಳನ್ನು ಸಮರ್ಪಿಸುವುದಕ್ಕೆ ಬೇಕಾದ ಸ್ಫೂರ್ತಿಯನ್ನು ನೀಡುವುದು.

## ಸಂಪೂರ್ಣಗೊಳಿಸಿ ಸಮರ್ಪಣೆ :

ನಮ್ಮ ಮಂತ್ರಜಪಾನುಷ್ಠಾನ ಎಷ್ಟೆಲ್ಲ ನ್ಯೂನತೆಗಳಿಗೊಳಗಾದದ್ದೆಂದು ನಮಗೆ ಚೆನ್ನಾಗಿ ಗೊತ್ತಿದೆ. ಅಂತಹ ದೋಷಕಲುಷಿತವಾದ, ಅಪೂರ್ಣವಾದ ಸಾಧನೆಯನ್ನು ಭಗವಂತನಿಗೆ ಅರ್ಪಿಸುವುದಾದರೂ ಹೇಗೆ ?

ಅದನ್ನು ಪರಿಪೂರ್ಣಗೊಳಿಸಿ ಸಮರ್ಪಿಸಬೇಕು. ಭಗವಂತನ ಸ್ಮರಣೆ, ಹಾಗೂ ನಾಮಸಂಕೀರ್ತನೆ, ಇವು ಮಂತ್ರ, ತಂತ್ರ, ದೇಶ, ಕಾಲ, ವಸ್ತು–ಇವುಗಳಲ್ಲಿ ಯಾವುದಕ್ಕೇ ಸಂಬಧಿಸುವ ನ್ಯೂನತೆಯನ್ನೂ ಪರಿಹರಿಸಿ ಸಾಧನೆಗೆ ಪೂರ್ಣತೆಯನ್ನು ನೀಡಬಲ್ಲವು. [3] ಯಾವ ಗುಣದ ಉಲ್ಲೇಖದೊಂದಿಗೆ ಭಗವಂತನ

---

1. ಬುದ್ಧಿರಧ್ಯವಸಾನಾಯ ಸಂಶಯಂ ಕುರುತೇ ಮನಃ –ಸ್ಕಾಂದೇ(ಭಾಗ.ತಾ.ನಿ.3-27-15)
2. ಸ್ವಾತಂತ್ರ್ಯಾದ್ ಭಗವಾನ್ ವಿಷ್ಣುಃ ಸ್ವಭಾವ ಇತಿ ಕೀರ್ತಿತಃ ।
—ಮಹಾವರಾಹ (ಗೀ. ತಾ. 5-14)
3. ಮಂತ್ರತಸ್ತಂತ್ರತಶ್ಛಿದ್ರಂ ದೇಶಕಾಲಾರ್ಹವಸ್ತುತಃ ।
ಸರ್ವಂ ಕರೋತಿ ನಿಶ್ಛಿದ್ರಂ ನಾಮಸಂಕೀರ್ತನಂ ತವ ॥ —ಭಾಗ. 8-23-16

ಉಪಾಸನೆ ನಡೆಯುವುದೋ ಆ ಉಪಾಸನೆಗೆ ಅನುಗುಣವಾಗಿ ಫಲದೊರಕುವುದೆಂದಿರುವುದರಿಂದ[1] ತಪಸ್ಸು, ಜಪ, ಕ್ರಿಯಾದಿಗಳಲ್ಲಿ ಯಾರ ಸ್ಮರಣೆಯಿಂದಾಗಿ, ನಾಮ ಸಂಕೀರ್ತನೆಯಿಂದಾಗಿ ನ್ಯೂನತೆಯು ಪರಿಹೃತವಾಗಿ ಪರಿಪೂರ್ಣತೆಯು ಸಿದ್ಧಿಸುವುದೋ ಎಂಬುದಾಗಿ ತನ್ನ ಸ್ಮರಣೆ, ನಾಮಸಂಕೀರ್ತನೆಗಳಿಂದ ತಪಸ್ಸು ಮುಂತಾದವುಗಳಿಗೆ ಪರಿಪೂರ್ಣತೆಯನ್ನು ಅನುಗ್ರಹಿಸುವ ಅವನ ಗುಣವನ್ನು ಉಲ್ಲೇಖಿಸಿಯೇ ಅವನ ಸ್ಮರಣೆಯನ್ನು ನಡೆಸಿದಾಗ, ಅಂತಹ ಅವನ ಸ್ಮರಣೆ ವಿಶೇಷವಾಗಿ ನ್ಯೂನತೆಯನ್ನು ಪರಿಹರಿಸಬಲ್ಲದೆಂದು 'ಅಚ್ಯುತ' ಎನಿಸಿರುವ ಭಗವಂತನ ಆ ಗುಣದ ಉಲ್ಲೇಖದೊಂದಿಗೇ ಅವನ ಸ್ಮರಣೆಯನ್ನು ಉಂಟುಮಾಡಬಲ್ಲ 'ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ....' —ಎಂಬ ಶ್ಲೋಕದ ಮೂಲಕವೇ ಅವನ ಸ್ಮರಣೆಯನ್ನು ನಡೆಸಿ, ಆ ಸ್ಮರಣೆಯ ಮೂಲಕ ಜಪಾನುಷ್ಠಾನ ತನ್ನ ನ್ಯೂನತೆಯನ್ನು ಕಳೆದುಕೊಂಡು ಪರಿಪೂರ್ಣ ಎನಿಸುವಂತೆ ಮಾಡಿಕೊಳ್ಳಬೇಕು.

**ಪರಿಶಿಷ್ಟ : ೨**

## ಪ್ರಾಣಾಯಾಮದ ವಿಷಯದಲ್ಲಿ ಗಮನಿಸಬೇಕಾದ ಅಂಶಗಳು

೧. ಪ್ರಾಣಾಯಾಮಕ್ಕೆ ಎರಡು ಮುಖಗಳು. ರೇಚಕ, ಪೂರಕ ಹಾಗೂ ಕುಂಭಕ ಪ್ರಕ್ರಿಯೆಗಳಿಗೊಳಪಡಿಸಿ ಉಸಿರಾಟದ ವಾಯುವನ್ನು ನಿಯಂತ್ರಿಸುವುದು ಒಂದು ಮುಖವಾದರೆ, ಹೀಗೆ ಉಸಿರಾಟದ ಗಾಳಿಯನ್ನು ನಿಯಂತ್ರಿಸುವ ಸಂದರ್ಭದಲ್ಲಿ ಮುಖ್ಯವಾಗಿ ಪ್ರಾಣ ಎನಿಸುವ ಭಗವಂತನನ್ನೂ, ಅವನ ಬಳಿಕ ಪ್ರಾಣ ಎನಿಸುವ ವಾಯುದೇವನನ್ನೂ ಧ್ಯಾನಿಸಿ ಒಲಿಸಿಕೊಳ್ಳುವುದಕ್ಕೆ ಸಂಬಂಧಿಸುವಂತೆ ಪ್ರಣವ, ವ್ಯಾಹೃತಿ, ಗಾಯತ್ರಿ ಅಥವಾ ಅಯಾ ಮೂಲ ಮಂತ್ರಗಳನ್ನು ಮಾನಸಿಕವಾಗಿ ಆವರ್ತನೆ ಮಾಡುವುದು —ಮತ್ತೊಂದು ಮುಖ.

೨. ಯಾವ ಮಂತ್ರದ ಜಪಕ್ಕೆ ತೊಡಗಲಾಗಿದೆಯೋ ಆ ಮಂತ್ರವನ್ನು ಪ್ರಾಣಾಯಾಮದ ಕುಂಭಕ ಸ್ಥಿತಿಯಲ್ಲಿ ಇಪ್ಪತ್ನಾಲ್ಕು ಬಾರಿ ಅಥವಾ ಹನ್ನೆರಡು ಬಾರಿ ಜಪಿಸಬೇಕು. (ಬರೇ ಮೂರು ಬಾರಿ ಅಲ್ಲ)

೩. ಮೂಗಿನ ಬಲರಂಧ್ರದಿಂದ ದೇಹದ ಎಲ್ಲ ಗಾಳಿಯನ್ನು ಹೊರ ಕಳುಹಿಸುವುದು 'ರೇಚಕ' ಎನಿಸಿದೆ. ದೇಹದ ಬಲಮಗ್ಗುಲಲ್ಲಿ 'ಪಿಂಗಲಾ' —ಎಂಬ ನಾಡಿ ಇದ್ದು, ಆ ಬದಿಯಲ್ಲಿಯೇ ದೇಹದ ಕಲುಷಿತ ರಕ್ತದ ಚಲನೆ ನಡೆಯುವುದರಿಂದ ಮೂಗಿನ ಬಲ ಮಗ್ಗುಲ ರಂಧ್ರದಿಂದ ಕೆಟ್ಟ ವಾಯುವನ್ನು ಹೊರಹೊಮ್ಮಿಸಬೇಕು.

೪. ಮೂಗಿನ ಎಡರಂಧ್ರದಿಂದ ಒಳ್ಳೆಯ ಗಾಳಿಯನ್ನು ದೇಹದೊಳಗೆ ಸೇರಿಸಿಕೊಳ್ಳುವುದು ಪೂರಕ ಎನಿಸಿದೆ. ದೇಹದ ಎಡಮಗ್ಗುಲಲ್ಲಿ 'ಇಡಾ' ಎಂಬ ನಾಡಿ ಇದ್ದು, ಆ ಬದಿ

---

1. ತಂ ಯಥಾಯಥೋಪಾಸತೇ ತದೇವ ಭವತಿ —ಶ್ರುತಿ (ಭಾಗ. ತಾ. ನಿ. 3-10-11)

ಯಲ್ಲಿಯೂ ದೇಹದ ಶುದ್ಧ ರಕ್ತದ ಚಲನೆ ನಡೆಯುವುದರಿಂದ ಮೂಗಿನ ಎಡ ರಂಧ್ರದಿಂದಲೇ ಪೂರಕವನ್ನು ನಡೆಸಬೇಕು. ಅಶುದ್ಧ ರಕ್ತದ ಚಲನೆ ಇರುವ ಬಲಮಗ್ಗುಲಿನ ಮೂಗಿನ ರಂಧ್ರದಿಂದ, ಗಾಳಿಯನ್ನು ಒಳಗೆ ತೆಗೆದುಕೊಂಡಲ್ಲಿ ಆ ಅಶುದ್ಧ ರಕ್ತದ ಸಂಪರ್ಕದಿಂದ ಶುದ್ಧಗಾಳಿಗೂ ಕಾಲುಷ್ಯ ತಗಲೀತು !

೫. ಪೂರಕ ಪ್ರಕ್ರಿಯೆಯಿಂದ ಒಳಗೆ ಸೇರಿಸಿಕೊಂಡ ಶುದ್ಧವಾಯುವನ್ನು ಮೂಗಿನ ಎರಡು ರಂಧ್ರಗಳನ್ನೂ ಬಿಗಿಯಾಗಿ ಹಿಡಿದುಕೊಂಡು ಬಂಧಿಸಿಕೊಳ್ಳುವುದು 'ಕುಂಭಕ' ಎನಿಸಿದೆ. ಕುಂಭಕ ಸ್ಥಿತಿಯಲ್ಲಿ ಹೃದಯದಲ್ಲಿ ಸುಷುಮ್ನಾನಾಡಿಯಲ್ಲಿ ವಾಯುವನ್ನು ವಿಶೇಷವಾಗಿ ಧರಿಸಿಕೊಳ್ಳುವುದು.

೬. ಹದಿನಾರು ಹ್ರಸ್ವವರ್ಣಗಳನ್ನು ಉಚ್ಚರಿಸಲು ಬೇಕಾದ ಅವಧಿಯಲ್ಲಿ ರೇಚಕವನ್ನೂ, ಇದಕ್ಕಿಂತ ಎರಡು ಪಾಲು ಅವಧಿಯಲ್ಲಿ ಪೂರಕವನ್ನೂ, ರೇಚಕದ ಅವಧಿಗಿಂತ ನಾಲ್ಕು ಪಾಲು ಅವಧಿಯಲ್ಲಿ ಕುಂಭಕವನ್ನೂ ನಡೆಸಬೇಕು.

೭. ಪ್ರಾಣಾಯಾಮವನ್ನು ನಡೆಸುವ ಕಾಲದಲ್ಲಿ ನೇರವಾಗಿ ಕುಳಿತುಕೊಳ್ಳಬೇಕು. ಬಾಗಿ ಕುಳಿತುಕೊಂಡಲ್ಲಿ ರೇಚಕದ ಸ್ಥಿತಿಯಲ್ಲಿ ದೇಹದ ಅಶುದ್ಧಗಾಳಿ ಪೂರ್ಣವಾಗಿ ಹೊರ ಹೊಮ್ಮದೆ ಸ್ವಲ್ಪ ಪ್ರಮಾಣದ ಅಶುದ್ಧ ಗಾಳಿ ಹಾಗೆಯೇ ಉಳಿದುಕೊಂಡು, 'ಪೂರಕ' ಸ್ಥಿತಿಯಲ್ಲಿ ಒಳಗೆ ಸೇರಿಸಿಕೊಂಡ ಶುದ್ಧ ಗಾಳಿಯನ್ನೂ ತನ್ನ ಸಂಪರ್ಕದಿಂದಾಗಿ ಅಶುದ್ಧಗೊಳಿಸೀತು! ಅಶುದ್ಧ ನೀರಿನ ಜೊತೆಗೆ ಸೇರಿಕೊಂಡ ಶುದ್ಧನೀರೂ ಅಶುದ್ಧವೆನಿಸುವಂತೆ. ಆದ್ದರಿಂದ ರೇಚಕಸ್ಥಿತಿಯಲ್ಲಿ ದೇಹದ ಅಶುದ್ಧ ಗಾಳಿ ಪೂರ್ಣವಾಗಿ ಹೊರಹೊಮ್ಮುವಂತೆ ಎಚ್ಚರಿಕೆ ವಹಿಸಬೇಕು.

೮. ಕುಂಭಕ ಸ್ಥಿತಿಯಲ್ಲಿ ವಾಯುವು ಮಲಮೂತ್ರ ವಿಸರ್ಜಿಸುವ ದ್ವಾರಗಳಿಂದ ಹೊರ ಹೊಮ್ಮುವ ಸಾಧ್ಯತೆ ಇರುವುದರಿಂದ, ಆ ದ್ವಾರಗಳನ್ನೂ ಮುಚ್ಚಿಕೊಳ್ಳಬೇಕು.

೯. ಪ್ರಾಣಾಯಾಮದ ಪೂರ್ವಸಿದ್ಧತೆಯಾಗಿ ರೇಚಕವನ್ನೂ ಪೂರಕವನ್ನೂ ಆಗಾಗ್ಗೆ ನಡೆಸುತ್ತ ನಾಸಾಶುದ್ಧಿ ಹಾಗೂ ನಾಡೀ ಶುದ್ಧಿಗಳನ್ನು ಗಳಿಸಿಕೊಂಡಿದ್ದಿರಬೇಕು.

೧೦. ಹೀಗೆ ಸಾಕಷ್ಟು ಎಚ್ಚರ ವಹಿಸಿ ನಡೆಸಲಾಗುವ 'ಪ್ರಾಣಾಯಾಮ'ದಿಂದ ಹರಿಗುರುಗಳ ಅನುಗ್ರಹದ ಜೊತೆಗೆ ಮಾನಸಿಕ ಏಕಾಗ್ರತೆ, ಮುಖ್ಯವಾಗಿ ಉಸಿರಾಟವನ್ನು ಅವಲಂಬಿಸಿರುವ ದೈಹಿಕ ಆರೋಗ್ಯವೂ ಸಿದ್ಧಿಸುವುದು.

---

○ ಶ್ರೀ ಬನ್ನಂಜೆ ಗೋವಿಂದಾಚಾರ್ಯರ 'ಸಭಾಷ್ಯಂ ಪ್ರಾಣಸೂತ್ರಮ್' ಎಂಬ ಕೃತಿಗೆ ಕೃತಜ್ಞತೆ.

ಪರಿಶಿಷ್ಟ : ೩

# ಆಸನಗಳ ಪರಿಚಯು

ಜಪ ಹೆಚ್ಚು ಫಲಪ್ರದವೆನಿಸಬೇಕಾದರೆ ಮನಸ್ಸಿನ ಏಕಾಗ್ರತೆ ಸಂಪಾದಿಸಿ ಕೊಳ್ಳಬೇಕು. ಮನಸ್ಸಿನ ಏಕಾಗ್ರತೆಗೆ ಶರೀರದ ನಿಶ್ಚಲತೆ ಅವಶ್ಯವೆನಿಸುವುದು.[1] ಶರೀರದ ನಿಶ್ಚಲತೆ ಸರಿಯಾದ ಆಸನವನ್ನು ಅಳವಡಿಸಿಕೊಂಡು ಕುಳಿತುಕೊಳ್ಳುವುದನ್ನು ಅವಲಂಬಿಸಿದೆ. ಆದ್ದರಿಂದ ಮನಸ್ಸಿನ ಏಕಾಗ್ರತೆಗೆ ಪರೋಕ್ಷವಾಗಿ ಸಂಬಂಧ ಪಡುವ ಆಸನಗಳ ಪರಿಚಯವನ್ನು ಪಡೆದುಕೊಳ್ಳಬೇಕು.

ಶ್ರೀ ಮಧ್ವಾಚಾರ್ಯರು ತಮ್ಮ ತಂತ್ರಸಾರ ಸಂಗ್ರಹದಲ್ಲಿ (4-144) ಸೂತ್ರ ಪ್ರಾಯದ ಮಾತಿನಲ್ಲಿ ಆಸನಗಳನ್ನು ಹೀಗೆ ಪರಿಚಯಿಸಿಕೊಟ್ಟಿರುವರು—

**"ಊರ್ವೋರಧಃ ಪದೋರೂರ್ಧ್ವಂ ವಿಭಾಗೇನೇತಿ ಚ ತ್ರಿಧಾ ।**
**ಆಸನತ್ರಯಮುದ್ದಿಷ್ಟಂ ಮಂತ್ರಸ್ಮರಣಪೂರ್ವಕವಮ್"**

ವಿಧಾನ ಪೂರ್ವಕವಾಗಿ ಸ್ವಸ್ತಿಕಾಸನ, ಪದ್ಮಾಸನ ಹಾಗೂ ವೀರಾಸನಗಳನ್ನು ಪರಿಚಯಿಸಿಕೊಟ್ಟಿರುವ ಇಲ್ಲಿ, ಈ ಆಸನಗಳನ್ನು ಮಂತ್ರಸ್ಮರಣ ಪೂರ್ವಕವಾಗಿ ರಚಿಸಬೇಕೆಂದು ವಿಧಿಸಲಾಗಿದೆ. ಮುಖ್ಯವಾಗಿ ತೊಡೆಗಳ ಹಾಗೂ ಪಾದಗಳ ಇಡುವಿಕೆಯನ್ನು ಒಳಗೊಂಡಿರುವ ಆಸನಗಳಲ್ಲಿಯ ವ್ಯತ್ಯಾಸಕ್ಕೆ ತೊಡೆ ಹಾಗೂ ಪಾದಗಳ ವಿನ್ಯಾಸಗಳಲ್ಲಿಯ ಬದಲಾವಣೆಯೇ ಕಾರಣವೆನಿಸುವುದು.

ಎರಡು ಪಾದಗಳನ್ನೂ ತೊಡೆಯ ಕೆಳಗಡೆ ಇಟ್ಟುಕೊಂಡಾಗ 'ಸ್ವಸ್ತಿಕಾಸನ' ವೆನಿಸಿದರೆ, ಎರಡು ಪಾದಗಳನ್ನೂ ತೊಡೆಯ ಮೇಲುಗಡೆ ಇಟ್ಟುಕೊಂಡರೆ 'ಪದ್ಮಾಸನ' ಆಗುವುದು. ವಿಭಾಗದಿಂದ ಒಂದು ಪಾದವನ್ನು ತೊಡೆಯ ಮೇಲೂ ಇನ್ನೊಂದನ್ನು ತೊಡೆಯ ಕೆಳಗೂ ಇಟ್ಟುಕೊಂಡರೆ 'ವೀರಾಸನ' ಎನಿಸುವುದು.

ಆಸನ ರಚನೆಯ ಮುಖ್ಯ ಉದ್ದೇಶ ಏಕಾಗ್ರತೆಯ ಸಂಪಾದನೆಯೇ ಆಗಿರುವುದರಿಂದ[2] ಯಾವ ಆಸನವನ್ನು ಅಳವಡಿಸಿಕೊಂಡಾಗ ಮನಸ್ಸಿನ ಏಕಾಗ್ರತೆ ಉಂಟಾಗುವುದೋ ಅಂತಹ ಆಸನವನ್ನೇ ಅಳವಡಿಸಿಕೊಳ್ಳಬೇಕು. ಸ್ವಸ್ತಿಕಾಸನ ಉಳಿದೆಲ್ಲ ಆಸನಗಳಿಗಿಂತ ಅನಾಯಾಸಸಾಧ್ಯವಾದುದರಿಂದ ಈ ಆಸನವೇ ನಮ್ಮಲ್ಲಿ ಹೆಚ್ಚು ಬಳಕೆಯಲ್ಲಿದೆ.

---

1. **ಅಚಲಃ ಚೇಚ್ಛರೀರಂ ಸ್ಯಾನ್ಮನಸಶ್ಚಾಪ್ಯಚಾಲನಮ್ ।**
**ಚಲನೇ ತು ಶರೀರಸ್ಯ ಚಂಚಲಂ ತು ಮನೋ ಭವೇತ್ ॥**
**—ಬ್ರಹ್ಮಾಂಡೇ (ಬ್ರ. ಸೂ. ಭಾ. 4-1-9)**

2. **ಯಾತ್ರೈಕಾಗ್ರತೇತ್ಯುಚ್ಯಮಾನಸ್ಯಾತ್ರಾಪ್ಯನುಸರ್ತವ್ಯತ್ವಾತ್**
**—ತತ್ತ್ವದೀಪಿಕಾ (ಬ್ರ. ಸೂ. ಭಾ. ಟಿ. 4-1-7)**

**ಪರಿಶಿಷ್ಟ: ೪**

## ಗೋಕರ್ಣಾಕಾರದ ಅಂಗೈಯಿಂದ ಆಚಮನ

ಆಚಮನಕ್ಕೆ ಸಂಬಂಧಪಟ್ಟ ಅನೇಕ ನಿಯಮಗಳಲ್ಲಿ ಒಂದು—ಬಲ ಅಂಗೈಯನ್ನು ಗೋಕರ್ಣಾಕಾರವನ್ನಾಗಿಸಿಕೊಂಡು ಅಂತಹ ಬಲಗೈಯ ಮೂಲಕ ಆಚಮನವನ್ನು ನಡೆಸಬೇಕೆಂಬುದು. ಅಂಗೈಯನ್ನು ಗೋಕರ್ಣಾಕಾರದಲ್ಲಿ ಅಂದರೆ ಹಸುವಿನ ಕಿವಿಯ ಆಕಾರದಲ್ಲಿ ಮಡಚಿದಾಗ ಅದು 'ಗೋಕರ್ಣ ಮುದ್ರೆ' ಎನಿಸುವುದು.

'ಗೋಕರ್ಣ ಮುದ್ರೆ'ಯ ಲಕ್ಷಣವನ್ನು ಧರ್ಮಶಾಸ್ತ್ರದಲ್ಲಿ ಹೀಗೆ ಹೇಳಲಾಗಿದೆ—

**'ಅಂಗುಷ್ಠಾಗ್ರಂ ಸಮಾಕುಂಚ್ಯ ಮಧ್ಯಮಾಮಧ್ಯಪರ್ವಣಿ ।**
**ಗೋಕರ್ಣಂ ತದ್ಧಿ ವಿಜ್ಞೇಯಂ ಸರ್ವೇಷ್ವಾಚಮನೇಷ್ವಪಿ ॥**

ಬಲಗೈಯ ಹೆಬ್ಬೆರಳನ್ನು ನಡುಬೆರಳಿನ ನಡುಗಂಟಿಗೆ ತಗಲಿಸಿ ಕಿರುಬೆರಳನ್ನು ಬೇರೆಯಾಗಿ ಹಿಡಿದರೆ ಅದು ಗೋಕರ್ಣ ಮುದ್ರೆ ಎನಿಸುವುದು. ಗೋಕರ್ಣ ಮುದ್ರೆಯನ್ನು ಪರಿಚಯಿಸಿಕೊಟ್ಟ ಪ್ರಮಾಣವು, ಎಲ್ಲ ಆಚಮನಗಳಲ್ಲೂ ಅಂಗೈ ಅಂತಹ ಗೋಕರ್ಣ ಮುದ್ರೆಗೊಳಗಾಗಿಯೇ ಇರಬೇಕೆಂದೂ ತಿಳಿಸಿದೆ.

ಗೌತಮನ 'ಧರ್ಮಸೂತ್ರ ಭಾಷ್ಯ'ದಲ್ಲಿಯೂ ಗೋಕರ್ಣ ಮುದ್ರೆಯಿಂದ ಆಚಮನ ನಡೆಸಬೇಕೆಂದು ಹೇಳಲಾಗಿದೆ—

**"ದಕ್ಷಿಣಂ ಹಸ್ತತಲಂ ಗೋಕರ್ಣಾಕಾರಂ ವಿನ್ಯಸ್ಯ ಪಿಬೇತ್"**

ಆದ್ದರಿಂದ ಸ್ತ್ರೀಯರೂ ಗೋಕರ್ಣಾಕಾರವನ್ನು ತಾಳಿದ ಬಲಗೈಯ ಮೂಲಕವೇ ಆಚಮನವನ್ನು ನಡೆಸಬೇಕು.

**ಪರಿಶಿಷ್ಟ: ೫**

## ಮಂತ್ರಗಳ ಎಣಿಕೆ ಯಾವುದರಿಂದ? ಹೇಗೆ?

ಮಂತ್ರಗಳನ್ನು ಜಪಿಸುವಾಗ ಅಳವಡಿಸಿಕೊಳ್ಳಬೇಕೆಂದು ವಿಹಿತಗಳಾದ ಅನೇಕ ನಿಯಮಗಳಲ್ಲಿ ಮಂತ್ರಗಳ ಎಣಿಕೆಗೆ ಸಂಬಂಧಪಡುವ ನಿಯಮವೂ ಒಂದು. ಸಾಮಾನ್ಯವಾಗಿ ಮಂತ್ರಗಳನ್ನು ಬೆರಳುಗಳ 'ಪರ್ವ' (ಗಂಟು)ಗಳ ಮೂಲಕ ಎಣಿಸಲಾಗುವುದು. ಆದರೆ ಬೆರಳುಗಳ ಪರ್ವಗಳ ಮೂಲಕ ಹೇಗೆ ಜಪಿಸಬೇಕೆಂದು ತಿಳಿಸ ಹೊರಟ 'ಬ್ರಹ್ಮಯಾಮಲ' ಬೆರಳುಗಳ ಪರ್ವಗಳ ಮೂಲಕದ ಎಣಿಕೆ ಗಾಯತ್ರೀ ಮಂತ್ರದ ಜಪಕ್ಕಷ್ಟೇ ಸಂಬಂಧಪಡುವಂತಹದ್ದೆಂದು ತಿಳಿಸಿದೆ—

**ಆರಾಭ್ಯಾನಾಮಿಕಾಮಧ್ಯಂ ಪರ್ವ ದೇವೀಮನುಕ್ರಮಾತ್ ।**
**ತರ್ಜನೀಮೂಲಪರ್ಯಂತಂ ಜಪೇದ್ದಶಸು ಪರ್ವಸು ।**
**ಮಧ್ಯಮಾಂಗುಲಿಮೂಲೇ ತು ಯತ್ಪರ್ವದ್ವಿತಯಂ ಭವೇತ್ ।**
**ತಂ ವೈ ಮೇರುಂ ವಿಜಾನೀಯಾತ್ ಜಪೇ ತಂ ನಾತಿಲಂಘಯೇತ್ ॥**

ಉಂಗುರದಬೆರಳಿನ ಮಧ್ಯದ ಗ್ರಂಥಿಯನ್ನು(ಗಂಟನ್ನು)ಪ್ರಾರಂಭಿಸಿ, ಪ್ರದಕ್ಷಿಣಾಕಾರವಾಗಿ ತೋರ್ಬೆರಳಿನ ಬುಡದ ಗ್ರಂಥಿಯವರೆಗೆ ಒಟ್ಟು ಹತ್ತು ಗ್ರಂಥಿಗಳಲ್ಲಿ ಹತ್ತು ಸಂಖ್ಯೆಯನ್ನು ಎಣಿಸಬೇಕು. ಮಧ್ಯ ಬೆರಳಿನ ಬುಡದ ಹಾಗೂ ಮಧ್ಯದ ಎರಡು ಗ್ರಂಥಿಗಳು ಮೇರುಪರ್ವತವೆಂದು ಪರಿಗಣಿಸಲಾಗಿವೆ. ಆದುದರಿಂದ ಇವುಗಳನ್ನು ಅತಿಕ್ರಮಿಸದೆ, ಪುನಃ ಅಪ್ರದಕ್ಷಿಣಾಕಾರವಾಗಿ ತೋರ್ಬೆರಳಿನ ಗ್ರಂಥಿಯಿಂದ ಉಂಗುರಬೆರಳಿನ ಮಧ್ಯದ ಗ್ರಂಥಿಯವರೆಗೆ ಹತ್ತು ಸಂಖ್ಯೆಯನ್ನು ಎಣಿಸಬೇಕು.

ಆದರೆ ಬೆರಳುಗಳ ಪರ್ವಗಳಿಂದ ನಡೆಸಬೇಕಾದ ಈ ಎಣಿಕೆ ಗಾಯತ್ರೀ ಮಂತ್ರಕ್ಕಷ್ಟೇ ಸಂಬಂಧಪಡುವಂತಹದ್ದೆಂದು '....ದೇವೀಂ....' —ಎಂಬ ಮಾತಿನಿಂದ ಸ್ಪಷ್ಟೀಕರಿಸಲಾಗಿದೆ. ಬೇರೆ ಮಂತ್ರಗಳನ್ನು ಜಪಮಾಲೆಗಳ ಮೂಲಕ ಎಣಿಸಿದಲ್ಲಿ ವಿಶೇಷ ಫಲವಿದೆ—ಎಂದು 'ಪಾದ್ಮ' ಸಂಗ್ರಹಿಸಿದೆ—

**ಅಂಗುಲೀಜಪಸಂಖ್ಯಾನಂ ಏಕಮೇಕಂ ವರಾನನೇ ।**
**ಪರ್ವೇ ದಶಗುಣಂ ಪ್ರೋಕ್ತಂ ಪುತ್ರಜೀವಫಲೈಃ ದಶ ।**
**ಶತಂ ವೈ ಶಂಖಮಣಿಭಿಃ ಪ್ರವಾಲೈಶ್ಚ ಸಹಸ್ರಕಮ್ ।**
**ಮೌಕ್ತಿಕೈಃ ಶತಸಾಹಸ್ರಂ ಸೌವರ್ಣೈಃ ಲಕ್ಷಮೇವ ಚ ।**
**ಕುಶಗ್ರಂಥ್ಯಾ ಕೋಟಿಗುಣಂ ತುಲಾಸ್ಯಾನಂತಕಂ ಫಲಮ್ ॥**

ಬೆರಳುಗಳಿಂದ ಜಪವನ್ನು ಎಣಿಸಿದಲ್ಲಿ ಜಪಕ್ಕೆ ಒಂದೇ ಪಟ್ಟು ಫಲ ದೊರಕುವುದು. ಬೆರಳುಗಳ ಪರ್ವಗಳ (ಗಂಟುಗಳ) ಮಾಧ್ಯಮದಲ್ಲಿ ಜಪಿಸಿದರೆ, ಹತ್ತುಪಟ್ಟು ಫಲ. ಹಾಗೆಯೇ 'ಪುತ್ರಜೀವ' —ಎಂಬ ಗರ್ಭವನ್ನು ಕಾಪಾಡುವ 'ಕುಮಾರ ಜೀವ', 'ಗರ್ಭಜೀವ' —ಎಂದೆಲ್ಲ ಕರೆಸಿಕೊಳ್ಳುವ ಮರದ ಫಲಗಳಿಂದ ರಚಿತವಾದ ಜಪಮಾಲೆಯ ಮೂಲಕ ಜಪಿಸಿದಲ್ಲೂ ಹತ್ತು ಪಟ್ಟು ಫಲ. ಶಂಖಮಣಿಗಳಿಂದ ಎಣಿಸಿದಲ್ಲಿ ನೂರುಪಟ್ಟು, ಹವಳಗಳಿಂದ ಎಣಿಸಿದಲ್ಲಿ ಸಾವಿರ ಪಟ್ಟು, ಮುತ್ತುಗಳ ಮಣಿಗಳಿಂದ ಹಾಗೂ ಸುವರ್ಣದ ಮಣಿಗಳಿಂದ ಎಣಿಸಿದಲ್ಲಿ ಲಕ್ಷ ಪಟ್ಟು ಪುಣ್ಯ. ದರ್ಭೆಗಳ ಗ್ರಂಥಿಗಳಿಂದ ಎಣಿಸಿದಲ್ಲಿ ಕೋಟಿ ಪಟ್ಟು, ತುಲಸೀಮಣಿಗಳಿಂದ ಎಣಿಸಿದಲ್ಲಿ ಅನಂತಪುಣ್ಯ ದೊರಕುವುದು.

ಆದ್ದರಿಂದ ಜಪಮಂತ್ರಗಳ ಎಣಿಕೆಯನ್ನು ಜಪಮಾಲೆಗಳ ಮಾಧ್ಯಮದಲ್ಲಿ ನಡೆಸುವುದೇ ಉತ್ತಮ. ಜಪಮಾಲೆ ನೂರಾಎಂಟು ಮಣಿಗಳಿಂದ ಕೂಡಿದ್ದರೇ ಉತ್ತಮಮಟ್ಟದ್ದೆಂದು ಪರಿಗಣಿತವಾಗಿದೆ—

"ಅಷ್ಟೋತ್ತರಶತಾ ಮಾಲಾ ಉತ್ತಮಾ ಪರಿಕೀರ್ತಿತಾ"

—ಪ್ರಜಾಪತಿಃ

ಆದ್ದರಿಂದ ಸ್ತ್ರೀಯರೂ ಜಪಮಾಲೆಗಳ ಮೂಲಕ ಕೃಷ್ಣಷಡಕ್ಷರ ಮಂತ್ರದ ಎಣಿಕೆಯನ್ನು ನಡೆಸುವುದು ಸಮುಚಿತ.

# ಮಾಸನಿಯಾಮಕ ಭಗವದ್ರೂಪಗಳು

ಎಲ್ಲ ಕಾಲದಲ್ಲಿ ನಡೆಯುವ ಪ್ರತಿಯೊಂದು ಆಗುಹೋಗುವನ್ನೂ ಕಾಲ ನಿಯಾಮಕ ಭಗವಂತನು ನಿಯಂತ್ರಿಸುತ್ತಿರುವನು. ಅಂತಹ ಕಾಲನಿಯಾಮಕ ಭಗವಂತನೇ ವರ್ಷದ ಚೈತ್ರಾದಿ ಹನ್ನೆರಡು ಮಾಸಗಳಲ್ಲಿ ನಡೆಯುವ ಪ್ರತಿಯೊಂದು ಆಗುಹೋಗುವನ್ನೂ ತನ್ನ ಕೇಶವಾದಿ ಹನ್ನೆರಡು ರೂಪಗಳಿಂದ ವಿಶೇಷವಾಗಿ ನಿಯಂತ್ರಿಸುವನು. ಆಯಾ ಮಾಸದಲ್ಲಿ ನಡೆಯುವ ಸಾಧನೆಯೂ ಅವನ ನಿಯಂತ್ರಣದಲ್ಲಿಯೇ ಇರುವುದರಿಂದ, ಪ್ರತಿಯೊಂದು ಸಾಧನೆಯನ್ನು ನಡೆಸುವಾಗಲೂ ಅದರ ಸಂಕಲ್ಪದಲ್ಲಿ ಆಯಾ ಭಗವದ್ರೂಪವನ್ನು ಉಲ್ಲೇಖಿಸಿ ಅವನ ಪ್ರೇರಣೆಗೆ ಅನುಗುಣವಾಗಿ, ಅವನ ಪ್ರೀತಿಗಾಗಿ ನಡೆಸಲಾಗುವುದೆಂದೂ, ಆ ಸಾಧನೆಯನ್ನು 'ಕೃಷ್ಣಾರ್ಪಣ' ನಡೆಸುವಾಗ ಸಾಧನೆ ನಡೆಸಲು ವಿಶೇಷವಾಗಿ ಅನುಗ್ರಹಿಸಿದ ಆಯಾ ಮಾಸ ನಿಯಾಮಕ ಭಗವದ್ರೂಪವನ್ನು ಉಲ್ಲೇಖಿಸಿ, ಆ ಸಾಧನೆಯಿಂದ ಅವನು ಪ್ರಸನ್ನನಾಗಲೆಂದೂ ಪ್ರಾರ್ಥಿಸಿಕೊಳ್ಳಬೇಕು.

ಮಾಸನಿಯಾಮಕ ಭಗವದ್ರೂಪಗಳು ಹೀಗಿವೆ—

| ಮಾಸ | ಮಾಸನಿಯಾಮಕ ಭಗವದ್ರೂಪ |
|---|---|
| ಚೈತ್ರ | ವಿಷ್ಣು |
| ವೈಶಾಖ | ಮಧುಸೂದನ |
| ಜ್ಯೇಷ್ಠ | ತ್ರಿವಿಕ್ರಮ |
| ಆಷಾಢ | ವಾಮನ |
| ಶ್ರಾವಣ | ಶ್ರೀಧರ |
| ಭಾದ್ರಪದ | ಹೃಷೀಕೇಶ |
| ಆಶ್ವಯುಜ | ಪದ್ಮನಾಭ |
| ಕಾರ್ತಿಕ | ದಾಮೋದರ |
| ಮಾರ್ಗಶೀರ್ಷ | ಕೇಶವ |
| ಪುಷ್ಯ | ನಾರಾಯಣ |
| ಮಾಘ | ಮಾಧವ |
| ಫಾಲ್ಗುನ | ಗೋವಿಂದ |

ಭಗವಂತನ ಕೇಶವಾದಿ ದ್ವಾದಶಮೂರ್ತಿಗಳು ಚೈತ್ರಾದಿ ಹನ್ನೆರಡು ಮಾಸಗಳಿಗೆ ನಿಯಾಮಕಗಳಾಗಿವೆಯಾದರೂ, ಮಾರ್ಗಶೀರ್ಷಮಾಸದಿಂದ ಪ್ರಾರಂಭಿಸಿ ಕ್ರಮೇಣ ಕೇಶವಾದಿ ರೂಪಗಳು ನಿಯಾಮಕಗಳೇ ಹೊರತು ಮೊದಲ ಮಾಸವಾದ ಚೈತ್ರದಿಂದ ಪ್ರಾರಭಿಸಿ ಕ್ರಮೇಣ ಕೇಶವಾದಿ ಭಗವದ್ರೂಪಗಳು ನಿಯಾಮಕಗಳಲ್ಲ.

ಶುಕ್ಲಪಕ್ಷದ ಪಾಡ್ಯದಿಂದ ಆಯಾ ಮಾಸ ಪ್ರಾರಂಭವಾಗುವುದೆಂದು ಒಪ್ಪಿಕೊಳ್ಳಲಾಗಿದೆಯಾದರೂ, ಕೆಲವೆಡೆ ಮಾಸ ಕೃಷ್ಣಪಕ್ಷದ ಪಾಡ್ಯದಿಂದ ಪ್ರಾರಂಭವಾಗಿ ಶುಕ್ಲಪಕ್ಷದ ಹುಣ್ಣಿಮೆಗೆ ಕೊನೆಗೊಳ್ಳುವುದೆಂದು ಒಪ್ಪಲಾಗಿದ್ದು, ಆ ಪದ್ಧತಿಗೆ ಅನುಗುಣವಾಗಿ ಕೆಲವು ಪಂಚಾಂಗಗಳಲ್ಲಿ ಮಾಸವು ಪ್ರಾರಂಭವಾಗುವ ಶುಕ್ಲಪಕ್ಷದ ಪಾಡ್ಯದಿಂದ ಆಯಾ ಮಾಸದ ನಿಯಾಮಕರನ್ನು ಉಲ್ಲೇಖಿಸುವ ಬದಲು ಆ ಮಾಸ ಪ್ರಾರಂಭವಾಗುವ ಹಿಂದಿನ ಕೃಷ್ಣಪಕ್ಷದ ಪಾಡ್ಯದಿಂದಲೇ ಆಯಾ ಮಾಸ ನಿಯಾಮಕರನ್ನು ಉಲ್ಲೇಖಿಸಿರುವುದುಂಟು. ಆದರೆ ಆಯಾ ಮಾಸದ ಪ್ರಾರಂಭದಿಂದ ಆ ಮಾಸ ಕೊನೆಗೊಳ್ಳುವವರೆಗೆ ಆಯಾ ಮಾಸನಿಯಾಮಕರನ್ನು ಉಲ್ಲೇಖಿಸುವುದೇ ಸಮುಚಿತ :

**ಪರಿಶಿಷ್ಟ : ೬**

## ದಾಸ ಸಾಹಿತ್ಯದಲ್ಲಿ 'ಸ್ತ್ರೀಧರ್ಮ'

ದಾಸ ಸಾಹಿತ್ಯದಲ್ಲಿ ಧರ್ಮದ, ನೀತಿಯ ಪ್ರಸ್ತಾವದಲ್ಲಿ ನಿರೂಪಿತವಾಗಿರುವ 'ಸ್ತ್ರೀಧರ್ಮ'ದ ಸಾಹಿತ್ಯವನ್ನು ಸ್ಥೂಲವಾಗಿ ಮೂರು ವಿಭಾಗಗಳಿಂದ ವಿಂಗಡಿಸಬಹುದು—

**೧. ವಿಧಿಮುಖವಾಗಿ ಸ್ತ್ರೀಧರ್ಮಗಳನ್ನು ಬೋಧಿಸುವ ಹಾಡುಗಳು.**

**೨. ನಿಷೇಧಮುಖವಾಗಿ ಸ್ತ್ರೀಯರು ಯಾವ ರೀತಿಯಾಗಿ ನಡೆದುಕೊಳ್ಳಬಾರದೆಂದು ಎಚ್ಚರಿಸುವ ಹಾಡುಗಳು.**

**೩. ಸ್ತ್ರೀಯರು ತಮ್ಮ ನಿತ್ಯ ನೈಮಿತ್ತಿಕ ಚಟುವಟಿಕೆಗಳನ್ನು ನಡೆಸುವಾಗ ಆ ಚಟುವಟಿಕೆಗಳಿಗೆ ಸಂಬಂಧಿಸುವಂತೆ ಅವರಿಗೆ ಭಗವದನುಸಂಧಾನವನ್ನು ಮೂಡಿಸುವ ಹಾಡುಗಳು.**

**ವಿಧಿಮುಖವಾದ ಬೋಧನೆ :**

ವಿಧಿಮುಖವಾಗಿ ಸ್ತ್ರೀಧರ್ಮಗಳನ್ನು ಬೋಧಿಸುವ ಹಾಡುಗಳಲ್ಲಿ ಸ್ತ್ರೀ

ವಾದಿರಾಜತೀರ್ಥರು ರಚಿಸಿರುವ 'ಮನೆವಾರ್ತೆ ಹಾಡು'[1] —ಬಹಳ ಪ್ರಶಸ್ತವಾದುದು. ಸಾಧಕಳಾದ ಪತಿವ್ರತೆ ಬೆಳಿಗ್ಗೆ ಏಳುವುದರಿಂದ ಪ್ರಾರಂಭಿಸಿ ರಾತ್ರಿ ಮಲಗುವವರೆಗೆ ಯಾವ ಬಗೆಯ ಭಗವದನುಸಂಧಾನಪೂರ್ವಕವಾಗಿ ಯಾವ ಯಾವ ಚಟುವಟಿಕೆಗಳನ್ನು ನಡೆಸುತ್ತಿರಬೇಕೆಂಬುದನ್ನು ಮೂವತ್ತನಾಲ್ಕು ಪದ್ಯಗಳಲ್ಲಿ ಸ್ಪಷ್ಟಪಡಿಸುತ್ತಿರುವ ಈ ಹಾಡು ಪತಿವ್ರತೆಯ ಅಂತರಂಗದ ಅನಿಸಿಕೆಯ ರೂಪದಲ್ಲಿಯೇ ಇರುವುದರಿಂದ ಅನುಸಂಧಾನಕ್ಕೆ ಮತ್ತಷ್ಟು ಒತ್ತು ದೊರಕಿದಂತಾಗುವುದು.

ಮುತ್ತೈದೆತನದ ಧರ್ಮಕ್ಕೆ ಒಳ್ಳೆಯ ಸ್ಫೂರ್ತಿ ನೀಡುತ್ತಿರುವ ಈ ಹಾಡನ್ನು ತಪ್ಪದೆ ಹೇಳಿದವರಿಗೆ 'ಮುತ್ತೈದೆತನವನ್ನು ಕೊಟ್ಟು ರಕ್ಷಿಸುವ ನಮ್ಮ ಹಯವದನ" —ಎಂದು ನಿರೂಪಿಸಲಾದ ಫಲಶ್ರುತಿ ಖಂಡಿತವಾಗಿ ಫಲಿಸದಿರದು.

'ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ' —ಎಂಬ ಪುರಂದರದಾಸರ ಹಾಡೊಂದು ಶ್ರೀಕೃಷ್ಣ ತನ್ನ ನೆಚ್ಚಿನ ತಂಗಿಯಾದ ಸುಭದ್ರೆಗೆ ಅತ್ತೆಯ ಮನೆಯಲ್ಲಿ ಹೇಗೆ ಇರಬೇಕೆಂದು ಉಪದೇಶಿಸಿರುವುದನ್ನಾಗಿ ತಿಳಿಸುವ ಮೂಲಕ ಸ್ತ್ರೀಯರು ಗಂಡನ ಮನೆಯಲ್ಲಿ ಹೇಗೆ ಬದುಕಬೇಕೆಂಬುದರ ಬಗ್ಗೆ ಕೆಲವು ಮಾಹಿತಿಗಳನ್ನು ನೀಡುತ್ತಿದೆ. ಸ್ತ್ರೀಧರ್ಮಕ್ಕಿಂತಲೂ ಹೆಚ್ಚಾಗಿ, 'ಬಂಗಾರದ ಪೇಟೆಯೊಳು ಅಂಗಡಿಗೆ ಹೋಗದಿರು' 'ಬಂಗಾರ ವಸ್ತುಗಳ ಮುಚ್ಚಿಕೊಳ್ಳಮ್ಮ' —ಮುಂತಾದ ಲೌಕಿಕ ನೀತಿಗಳ ಕುರಿತಾದ ಉಪದೇಶವೆ ಇಲ್ಲಿ ಬಂದಿದೆ.

'ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ । ಮಗಳೆ ।' —ಎಂಬುದಾಗಿ ಇದೇ ಬಗೆಯ ಪುರಂದರದಾಸರ ಮತ್ತೊಂದು ಹಾಡು ಗಂಡನ ಮನೆಗೆ ಹೊರಡಲು ಸಿದ್ಧಳಾದ ಮಗಳನ್ನು ಸಂಬೋಧಿಸಿ ಅವಳ ತಂದೆತಾಯಂದಿರು ನೀಡುವ ಉಪದೇಶದ ರೂಪದಲ್ಲಿ ರೂಪುಗೊಂಡಿದ್ದು—ಇದರಲ್ಲಿ 'ಮನಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ' 'ಚಿತ್ತದೊಲ್ಲಭನಕ್ಕರೆಯನು ಪಡೆಯಬೇಕಮ್ಮ' 'ಗುರುಪುರಂದರ ವಿಠಲನ ಸ್ಮರಣೆ ಮರೆಯಬೇಡಮ್ಮ' —ಮುಂತಾದ ಸ್ತ್ರೀಧರ್ಮಗಳನ್ನೂ, 'ಹತ್ತು ಮಂದಿ ಒಪ್ಪುವ ಹಾಗೆ ನುಡಿಯಬೇಕಮ್ಮ' 'ಹಟ್ಟಿಬಾಗಿಲಲ್ಲಿ ನಿಲ್ಲಬೇಡಮ್ಮ' 'ನೆರೆಹೊರೆಯವರಿಗೆ ನ್ಯಾಯವನ್ನು ಹೇಳಬೇಡಮ್ಮ' —ಮುಂತಾದ ಲೌಕಿಕ ನೀತಿಗಳನ್ನೂ ತಿಳಿಸಲಾಗಿದೆ.

---

1. ಇಲ್ಲಿ ಉಲ್ಲೇಖಿಸಲಾಗುವ ಹೆಚ್ಚಿನ ಹಾಡುಗಳ ಪೂರ್ಣಪಾಠವನ್ನು ಕೊನೆಯಲ್ಲಿ ಕ್ರಮೇಣ ನೀಡಲಾಗುವುದು.

'ಆದ್ದದ್ದೆಲ್ಲ ಒಳಿತೇ ಆಯಿತು, ನಮ್ಮ ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು....' —ಎಂಬ ಹಾಡಲ್ಲಿ ಶ್ರೀ ಪುರಂದರದಾಸರು ತಮ್ಮ ಜೀವನ ದಲ್ಲಿ ಆಧ್ಯಾತ್ಮಿಕ ತಿರುವಿಗೆ ತಮ್ಮ ಪತ್ನಿ ಹೇಗೆ ಕಾರಣಳಾದಳೆಂಬುದನ್ನು ತಿಳಿಸುತ್ತ 'ಹೆಂಡತಿ ಸಂತತಿ ಸಾವಿರವಾಗಲಿ' —ಎಂಬುದಾಗಿ ತಮ್ಮ ಪತ್ನಿಯನ್ನು ಅಭಿನಂದಿ ಸುವ ಮೂಲಕ ತಮ್ಮ ಪತಿಯಂದಿರು ಆಧ್ಯಾತ್ಮಿಕ ಮಾರ್ಗಕ್ಕೆ ಹೊರಳುವಂತೆ ಸ್ಫೂರ್ತಿ ನೀಡಬೇಕಾದದ್ದು ಸ್ತ್ರೀಯರ ಧರ್ಮವೆಂದು ಸೂಚಿಸಿರುವರು.

ಹೀಗೆ ಕೆಲವು ಹಾಡುಗಳಲ್ಲಿ ನೇರವಾಗಿ ಸ್ತ್ರೀಧರ್ಮಗಳ ನಿರೂಪಣೆ ಇದ್ದರೆ, ಮತ್ತೆ ಕೆಲವು ಹಾಡುಗಳಲ್ಲಿ ಸೂಚ್ಯವಾಗಿ ಸ್ತ್ರೀಧರ್ಮಗಳನ್ನು ತಿಳಿಸಲಾಗಿದೆ.

**ನಿಷೇಧಮುಖವಾದ ಬೋಧನೆ :**

ದಾಸಸಾಹಿತ್ಯದಲ್ಲಿ ಸ್ತ್ರೀಧರ್ಮದ ಕುರಿತು ವಿಧಿಮುಖವಾದ ನಿರೂಪಣೆ ಗಿಂತಲೂ ನಿಷೇಧಮುಖವಾದ ನಿರೂಪಣೆಯೇ ಅಧಿಕಪ್ರಮಾಣದಲ್ಲಿ ಕಾಣಿಸುವುದು.

ವಿಜಯದಾಸರ 'ಡಂಗುರ ಹೊಯಿಸಿದ ಯಮನು । ಪಾಪಿ ಹೆಂಗಳೆಯರ ತಂದು ಭಂಗಪಡಿಸಿರೆಂದು' —ಎಂಬ ಒಂಭತ್ತು ನುಡಿಗಳನ್ನೊಳಗೊಂಡ ಹಾಡಲ್ಲಿ ಸ್ತ್ರೀಯರು ಯಾವ ರೀತಿಯಾಗಿ ನಡೆದುಕೊಳ್ಳದಿದ್ದರೆ ಅಥವಾ ಕೆಟ್ಟರೀತಿಯಿಂದ ಹೇಗೆ ನಡೆದುಕೊಂಡರೆ, 'ಪಾಪಿ ಹೆಂಗಳೆಯ'ರೆನಿಸಿ ಯಮನ ದಂಡನೆಗೆ ಒಳಪಡು ವವರಾಗಬೇಕಾದೀತೆಂದು ಎಚ್ಚರಿಸುವುದರ ಮೂಲಕ ಹೇಗೆ ನಡೆದುಕೊಳ್ಳಬೇಕೆಂಬು ದನ್ನು ನಿಷೇಧಮುಖದಿಂದ ಸೂಚಿಸಲಾಗಿದೆ. ಇದರಲ್ಲಿ 'ಗಂಧ ಪೋಗುವಂತೆ ಮೃತ್ತಿಕೆ ಶೌಚವ ಮಾಡದಿರುವುದು, ವಸನವಿಲ್ಲದೆ ಮೈಯ ತೊಳಕೊಂಬುದು, ಬಿಗಿದು ಪುಟವ ಹಾಕಿ ಬದಿಬಗಲ ಮುಚ್ಚದಿರುವುದು, ಕಾಂತ ಕರೆದಾಗ ಪೋಗ ದಿರುವುದು—ಮುಂತಾದವುಗಳೆಲ್ಲ ಸ್ತ್ರೀಯರು ಎಸಗಬಹುದಾದ ಪಾಪಗಳೆಂದು ಸೂಕ್ಷ್ಮಪಾಪಗಳನ್ನೂ ಪರಿಚಯಿಸಿ ಕೊಡಲಾಗಿದೆ.

ಇದೇ ಮಾದರಿಯ ಹಾಡು 'ಸಾರಿದ ಡಂಗುರ ಯಮನು—ಅಘನಾರಿಯ ರೆಳೆದು ತಂದು ನರಕದೊಳಿಡು ಎಂದು' —ಎಂಬುದಾಗಿ ಶ್ರೀ ಜಗನ್ನಾಥದಾಸರದ್ದು. ಹದಿನೇಳು ನುಡಿಗಳನ್ನೊಳಗೊಂಡ ಇದರಲ್ಲಿ ಇನ್ನೂ ಅಧಿಕ ಸ್ತ್ರೀಧರ್ಮಗಳನ್ನು ನಿಷೇಧ ಮುಖದಿಂದ ತಿಳಿಸಲಾಗಿದೆ. ಇದರಲ್ಲೂ 'ತಿಲಕಾಯುಧವ ಬಿಟ್ಟು ಕುಂಕುಮವಿಡುವುದು, ಭಾಗವತಾದಿ ಶಾಸ್ತ್ರವ ಕೇಳದಿರುವುದು, ಬಾಲಕರನ್ನು ಬಡಿದಳಿಸುತಿಪ್ಪುದು, ಮೃತವತ್ಸ ಗೋವಿನ ಪಾಲುಂಬುದು, ಹುತವಹನನ್ನು ಪಾದತಳದಿ ಮಂದಿಸುವುದು, ಸತ್ತವರ ನೆನೆ ನೆನೆದಳುತಿಪ್ಪುದು, ಸೊಸೆಯ ರೊಡನೆ ಮತ್ಸರಿಸುವುದು—ಮುಂತಾದವು ಸ್ತ್ರೀಯರ ಅಘಗಳೆಂದು ಪರಿಚಯಿಸಿ

ಕೊಡುವ ಮೂಲಕ ಅವರ ಕೆಲವು ಧರ್ಮಸೂಕ್ಷ್ಮಗಳ ಮಾಹಿತಿಯನ್ನು ನಿಷೇಧ ಮುಖದಿಂದ ಒದಗಿಸಿದಂತಾಗಿದೆ. ಕೊನೆಯ ಮೂರು ನುಡಿಗಳಲ್ಲಿ 'ಸುಗುಣೆ' ಯರ ಪ್ರವೃತ್ತಿಯನ್ನು ಉಲ್ಲೇಖಿಸಿ ವಿಧಿಮುಖದಿಂದಲೇ ತಾನು ಅನುಭವಿಸು ತ್ತಿರುವ ಸುಖವನ್ನು ಭಗವಂತನಿಗೆ ಸಮರ್ಪಿಸುವುದೇ ಮುಂತಾದ ಸ್ತ್ರೀಧರ್ಮ ಗಳನ್ನು ತಿಳಿಸಲಾಗಿದೆ.

"ಸುಜ್ಞಾನಿಯಿಂದಾಳಬೇಕಣ್ಣ" —ಎಂಬ ಪುರಂದರದಾಸರ ಹಾಡಲ್ಲಿ 'ಗಂಡ ನಾಜ್ಞೆಯ ಮೀರಿ ನಡೆವ ಲಂಡ ಹೆಣ್ಣು'....ಇತ್ಯಾದಿಯಾಗಿ ಯಾವ ಯಾವ ಕೆಟ್ಟ ಸ್ತ್ರೀಯರನ್ನು ಸುಜ್ಞಾನಿಯಿಂದಾಳಬೇಕೆಂಬುದನ್ನು ತಿಳಿಸುತ್ತ ಕೆಟ್ಟ ಸ್ತ್ರೀಯರ ದುರ್ಲಕ್ಷಣಗಳನ್ನು ತಿಳಿಸುವ ಮೂಲಕ ನಿಷೇಧ ಮುಖದಿಂದ ಪತಿವ್ರತೆಯರ ಧರ್ಮಗಳನ್ನು ಸೂಚಿಸಿಕೊಟ್ಟಂತಾಗಿದೆ. 'ಶ್ರೀ ಪುರಂದರವಿಠಲರಾಯಗಲ್ಲದವಳ' —ಎಂಬ ಹಾಡಿನ ಕೊನೆಯ ಮಾತಿನಿಂದ, ಹಿಂದೆ ತಿಳಿಸಿದ ಸ್ತ್ರೀಯರ ದುರ್ಲಕ್ಷಣ ಗಳೆಲ್ಲ ಶ್ರೀ ಪುರಂದರವಿಠಲನಿಗೆ ಅಪ್ರಿಯಗಳಾದವು; ಅದ್ದರಿಂದಲೇ ಹೇಯ ವೆನಿಸಿವೆ—ಎಂಬುದು ಸೂಚಿತವಾಗುವುದು.

'ನೆಚ್ಚಬೇಡಿ ಪತಿತ ನಾರಿಯ....' ಎಂಬ ವಿಜಯದಾಸರ ಹಾಡು ಪತಿತ ನಾರಿಯ ದುರ್ನಡತೆಗಳನ್ನು ತಿಳಿಸುತ್ತ, ಒಳ್ಳೆಯ ಸ್ತ್ರೀಯರು ಅದಕ್ಕೆ ವಿರುದ್ಧ ವಾಗಿ ನಡೆದುಕೊಳ್ಳಬೇಕೆಂದು ಸೂಚಿಸುತ್ತಿದೆ.

'ಹೆಂಡತಿ ಪ್ರಾಣ ಹಿಂಡುತಿ' —ಎಂಬ ಮತ್ತೊಂದು ಪುರಂದರದಾಸರ ಹಾಡಲ್ಲಿ ಹೆಂಡತಿಯೊಬ್ಬಳು ಗಂಡನ ಪ್ರಾಣ ಹಿಂಡುವಷ್ಟು ದುಷ್ಟಳೆನಿಸಬೇಕಾದರೆ ಆಕೆಯ ಕೆಟ್ಟ ನಡತೆಗಳು ಯಾವುವು ಎಂಬುದನ್ನು ಉಲ್ಲೇಖಿಸುವ ಮೂಲಕ ನಿಷೇಧಮುಖದಿಂದ ಒಳ್ಳೆಯ ಹೆಂಡತಿಯ ನಡತೆಗಳನ್ನು ಸೂಚಿಸಿದಂತಾಗಿದೆ.

'ಒಲ್ಲೆನ ವೈದಿಕ ಗಂಡನ....' —ಎಂಬ ಪುರಂದರದಾಸರ ಹಾಡಲ್ಲಿ, 'ಒಳ್ಳೆಯ ಸೀರೆಯ ಉಡಬೇಕು' 'ಗಂಡ ದೃಷ್ಟಿಯಿಂದ ಮತ್ತೆ ಮತ್ತೆ ತನ್ನನ್ನು ನೋಡುತ್ತಿರಬೇಕು' 'ತನ್ನ ಜೊತೆಗೆ ಮಾತಾಡುತ್ತಿರಬೇಕು. ಕಣ್ಣುಸನ್ನೆಯನ್ನಾ ದರೂ ಮಾಡುತ್ತಿರಬೇಕು —ಎಂದು ಲೌಕಿಕ ಸುಖವನ್ನು ವಿಶೇಷವಾಗಿ ಬಯಸು ತ್ತಿದ್ದು, ಅದರಿಂದ ವಂಚಿತಳಾಗಿರುವ ವೈದಿಕ ಗಂಡನ ಕೈಹಿಡಿದವಳ ಆತ್ಮೀಯ ಅನಿಸಿಕೆಗಳನ್ನು ಮುಂದಿಡುವ ಮೂಲಕ ವೈದಿಕ ಗಂಡನ ವ್ಯಾವಹಾರಿಕ ದಡ್ಡತನಕ್ಕೆ ಕನ್ನಡಿ ಹಿಡಿಯುವುದರ ಜೊತೆಗೆ ಅವನ ಪತ್ನಿಯಾದವಳು ಅವನ ಸಾಧನೆಗೆ ಅನು ಗುಣವಾಗಿ ತನ್ನ 'ಬೇಕು 'ಬೇಡ'ಗಳನ್ನು ಹೊಂದಿಸಿಕೊಳ್ಳದೆ ಆ ಪ್ರಯುಕ್ತ ಕೊರಗಿ ಕೊರಗಿ ಆ ಬಗ್ಗೆ ತನ್ನ ಸಖಿಯರಲ್ಲೆಲ್ಲ ದೂರಿಡುವಷ್ಟು ಕೆಳಮಟ್ಟಕ್ಕೆ

ಇಳಿದಿರುವುದನ್ನು ವಿಡಂಬಿಸಿರುವುದರ ಮೂಲಕ ವೈದಿಕ ಗಂಡನಾದವನು ತನ್ನ ಸಾಧನೆಯ ಜೊತೆಗೆ ತನ್ನ ಪತ್ನಿಯ 'ಬೇಕು ಬೇಡ'ಗಳಿಗೂ ಸ್ವಲ್ಪ ಸ್ಪಂದಿಸುತ್ತಿರ ಬೇಕು, ಸ್ತ್ರೀಸಹಜಸುಖಕ್ಕಾಗಿ ಅವಳು ಮಾನಸಿಕವಾಗಿಯಾದರೂ ಜಾರ ದಿರುವಲ್ಲಿ ವೈದಿಕನ ಪ್ರಜ್ಞೆಯಿರಬೇಕು, ಲಾಲನೆಪೋಷಣೆಯಿರಬೇಕು; ಎಂದೂ ಹೆಣ್ಣಿಗೆ ತನ್ನ ಪತಿ ಅನುರಕ್ತನೆ ಅಲ್ಲ ಎನ್ನುವಂತಿರ ಬಾರದು ಎಂಬುದನ್ನು ಸೂಚಿಸುವುದರ ಜೊತೆಗೆ ವೈದಿಕನ ಪತ್ನಿ ತನ್ನ 'ಬೇಕು ಬೇಡ'ಗಳನ್ನು ತನ್ನ ಪತಿಯ ಮನೋಭಾವಕ್ಕೆ ಅನುಗುಣವಾಗಿ ಹೊಂದಿಸಿ ಕೊಳ್ಳಬೇಕು; ಹೊರತು ತಾನು ದಾಂಪತ್ಯಸುಖದಿಂದ ವಂಚಿತಳಾಗಿರುವುದರ ಕುರಿತಾಗಲೀ, ಅದಕ್ಕೆ ಮುಖ್ಯ ಕಾರಣನಾದ ತನ್ನ ವೈದಿಕಗಂಡನ ಅತಿಯಾದ ವೈದಿಕತನದ ಕುರಿತಾಗಲೀ ಮತ್ತೊಬ್ಬರೆದುರು ತನ್ನ ಅಸಮಾಧಾನವನ್ನು ತೋಡಿಕೊಳ್ಳುವ ಚಾಪಲ್ಯಕ್ಕೆ ಒಳಗಾಗಬಾರದು ಎಂದು ಸೂಚಿಸಲಾಗಿದೆ.

ಇದೇ ರೀತಿಯಾಗಿ 'ಇಕ್ಕಲಾರದ ಕೈ ಎಂಜಲು, ಚಿಕ್ಕ ಮಕ್ಕಳು ಅಳುತಾರೆ ಹೋಗೋ ದಾಸಯ್ಯ' —ಎಂಬ ಹಾಡಲ್ಲಿ ತೊಡೆಯ ಮೇಲಿನ ಕೂಸು ಮೊಲೆಯ ನುಣ್ಣು ತಲಿದೆ, ಅಟ್ಟದ ಮೇಲಿನ ಅಕ್ಕಿ ತೆಗೆಯಬೇಕು ...' ಮುಂತಾದ ನೆಪ ಒಡ್ಡಿ ದಾಸಯ್ಯನಿಗೆ ಇಕ್ಕಲಾರದೆ ಮುಂದಕ್ಕೆ ಕಳುಹಿಸುವ ಲೋಭಿ ಸ್ತ್ರೀಯೊಬ್ಬಳ ಚಿತ್ರಣವನ್ನು ನೀಡಿ ಉಳಿದ ಒಳ್ಳೆಯ ಸ್ತ್ರೀಯರು ಹೀಗೆ ನಡೆದುಕೊಳ್ಳಬಾರ ದೆಂದು ಸೂಚ್ಯವಾಗಿ ಸಂದೇಶಿಸಲಾಗಿದೆ.

'ಕದವ ಮುಚ್ಚಿದಳಿದಕೋ ಗಯ್ಯಾಳಿ ಮೂಳಿ ' —ಎಂಬ ಹಾಡಲ್ಲೂ ಹರಿದಾಸರು ಭಿಕ್ಷೆಗಾಗಿ ಬರುತ್ತಿದ್ದಾರೆಂದು ತಿಳಿದಾಕ್ಷಣ ತನ್ನ ಮನೆಯ ಕದವ ಮುಚ್ಚಿದ ಗಯ್ಯಾಳಿಯೊಬ್ಬಳನ್ನು ಮೂದಲಿಸುವ ಮೂಲಕ ಒಳ್ಳೆಯ ಸ್ತ್ರೀಯರು ಹೀಗೆ ನಡೆದುಕೊಳ್ಳದೆ, ಹರಿದಾಸರ ಸೇವೆಯನ್ನು ನಡೆಸಿ ಅವರ ಅನುಗ್ರಹದಿಂದ ಒಳಗಿದ್ದ ಪಾಪ ಹೋಗುವುದಕ್ಕೆ ಭಾರತ, ರಾಮಾಯಣ, ಪುಣ್ಯಕಾವ್ಯಂಗಳ ತತ್ವದ ಬಿಂದು ಸೇರುವುದಕ್ಕೆ....' ಅವಕಾಶವನ್ನು ಕಲ್ಪಿಸಿಕೊಳ್ಳಬೇಕೆಂದು ಸೂಚಿಸ ಲಾಗಿದೆ.

'ನಗೆಯು ಬರುತಿದೆ ಎನಗೆ' —ಎಂಬ ಹಾಡಲ್ಲಿ ಪುರಂದರದಾಸರು ತಮ್ಮ ನಗೆಗೆ ಕಾರಣಗಳಾಗಿ ಉಲ್ಲೇಖಿಸಿರುವ ವಿಕೃತ ಧಾರ್ಮಿಕ ನಡತೆಗಳಲ್ಲಿ 'ಪತಿಯ ಸೇವೆ ಬಿಟ್ಟು ಪರ । ಪತಿಯ ಕೂಡೆ ಸರಸವಾಡಿ ॥ ಸತತ ಮೈಯ ತೊಳೆದು ಹಲವು । ವ್ರತವ ಮಾಳ್ಪ ಸತಿಯ ...' ನಡತೆಯನ್ನೂ ಸೇರಿಸಿರುವುದರ ಮೂಲಕ ಸತಿಯಾದವಳು ಹಾಗೆ ನಡೆದುಕೊಳ್ಳಬಾರದೆಂದು ಸೂಚಿಸಿರುವರು.

'ಸತಿಗೆ ಸ್ವಾತಂತ್ರ್ಯವ ಕೊಡದಿರು....' —ಎಂಬ ಹಾಡಲ್ಲಿ ಶ್ರೀ ಪುರಂದರ

ದಾಸರು, 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' —ಎಂಬ ಶಾಸ್ತ್ರೀಯ ಸಂದೇಶದ ಹಿನ್ನೆಲೆಯಲ್ಲಿ ಪತ್ನಿಗೆ ಮಿತಿಮೀರಿದ ಸ್ವಾತಂತ್ರ್ಯ ಕೊಟ್ಟಲ್ಲಿ ಏನೇನು ಅನರ್ಥಗಳು ಸಂಭವಿಸಿಯಾವು ಎಂಬುದನ್ನು ಉಲ್ಲೇಖಿಸುತ್ತ, 'ಹಡೆದ ತಂದೆ ತಾಯಿ ತೊರೆ ಸ್ಯಾಳೋ, ತನ್ನ । ಕಡೆಗೆ ಬಾಯೆಂದು ಕರೆಸ್ಯಾಳೋ । ಬಿಡದೆ ಒಂಟಿಯ ಮಾಡಿ ನಿಲಿಸ್ಯಾಳೋ.... ಹೀಗೆ ಕೊಂಡ ಕೋತಿಯಂತೆ ಕುಣಿಸ್ಯಾಳೋ....' ಎಂದು ಲೌಕಿಕ ವಾಗಿ ಆಕೆಯಿಂದ ನಡೆಯಬಹುದಾದ ಅನಿಷ್ಟಗಳನ್ನೂ, 'ಅತಿ ಹರುಷದಿಂದ ಕೂಡ್ಯಾಳೋ, ಪರಗತಿಗೆ ಕರೆಕರೆ ಮಾಡ್ಯಾಳಣ್ಣ' —ಎಂದು ಆಧ್ಯಾತ್ಮಿಕವಾಗಿ ಆಕೆಯಿಂದ ನಡೆಯಬಹುದಾದ ಅನಿಷ್ಟಗಳನ್ನೂ ತಿಳಿಸಿರುವರು.

ಶ್ರೀ ಪುರಂದರದಾಸರು 'ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ....' —ಎಂಬ ಹಾಡಲ್ಲಿ ವಿಧವಾ ಸ್ತ್ರೀಯು ಹೇಗೆ ಸಮಾಜದ ಪ್ರತಿಯೊಬ್ಬರ ಟೀಕೆಗೆ, ಬೈಗುಳಕ್ಕೆ, ಛೀಮಾರಿಗೆ ಪಾತ್ರಳಾಗಬೇಕೆಂಬುದನ್ನು ವಿವರಿಸಿ, ಕೊನೆಯಲ್ಲಿ 'ಈಸು ಸೈರಿಸಿಕೊಂಡು, ಏಕಾಂತದಲಿ ಕುಳಿತು । ಶ್ರೀ ಪುರಂದರವಿಠಲನ ನೆನೆಯೆ ನಾರಿ' —ಎಂಬುದಾಗಿ ಸಮಾಜದಲ್ಲಿ ತನ್ನ ಬಗ್ಗೆ ಯಾರೇ ಏನೇ ಹೇಳಲಿ ಅದಕ್ಕೆ ಸ್ಪಂದಿಸದೆ ಏಕಾಂತದಲ್ಲಿ ಶ್ರೀ ಪುರಂದರವಿಠಲನನ್ನು ನೆನೆಯುತ್ತಿರಬೇಕು —ಎಂದು ಸೂಚಿಸಿರುವರು.

ಹೀಗೆ ಕೆಟ್ಟ ಸ್ತ್ರೀಯರ ದುರ್ಗುಣಗಳನ್ನು, ದುರ್ಲಕ್ಷಣಗಳನ್ನು ಎತ್ತಿ ತೋರಿಸುವುದರ ಮೂಲಕ ಉತ್ತಮ ಸ್ತ್ರೀಯರು ಹಾಗೆ ನಡೆದುಕೊಳ್ಳಬಾರದೆಂದು ಸಂದೇಶಿಸಲಾಗಿದೆ.

## ಸ್ತ್ರೀಯ ಚಟುವಟಿಕೆಗಳಲ್ಲಿ ಭಗವದನುಸಂಧಾನಕ್ಕೆ ಪೋಷಕ ಹಾಡುಗಳು :

'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ' —ಎಂಬುದಾಗಿ ಗೀತಾ ಚಾರ್ಯ ಸಂದೇಶಿಸಿರುವಂತೆ ಮನುಷ್ಯನು ತನ್ನ ವರ್ಣಾಶ್ರಮೋಚಿತ ಕರ್ಮಗಳನ್ನು ಭಗವದಾರಾಧನಾರೂಪದಲ್ಲಿ ನಡೆಸಿದಾಗ ಸಿದ್ಧಿಯನ್ನು ಹೊಂದುವನು. ಅಂತೆಯೇ ಸ್ತ್ರೀ ತನ್ನ ಪಾಲಿನ ಕರ್ತವ್ಯಗಳನ್ನೂ ಭಗವದಾರಾಧನಾರೂಪದಲ್ಲಿ ನಡೆಸಬೇಕು. ಆಗ ಆ ಕರ್ತವ್ಯಗಳೇ ಆಕೆಯ ಪಾಲಿಗೆ ತಾರಕಗಳಾಗುವವು. ಮನೆಗೆ, ಪತಿಗೆ, ಮಕ್ಕಳಿಗೆ ಸಂಬಂಧಿಸುವ ಕರ್ಮಗಳನ್ನು ಭಗವದಾರಾಧನಾದೃಷ್ಟಿಯಿಂದ ನಡೆಸ ಬೇಕೆಂದರೆ, ಪ್ರತಿಯೊಂದು ಕರ್ಮವನ್ನು ನಡೆಸುವಾಗಲೂ ಭಗವದನುಸಂಧಾನ ಬೇಕು. ಇಂತಹ ಅನುಸಂಧಾನವನ್ನು ತಂದುಕೊಡುವುದಕ್ಕಾಗಿಯೇ ಆಯಾ ಸಂದರ್ಭಕ್ಕೆ ಹೊಂದಿಕೊಳ್ಳುವ ಹಾಡುಗಳು ದಾಸಸಾಹಿತ್ಯದಲ್ಲಿ ನಿರ್ಮಿತವಾಗಿವೆ. ಆಯಾ ಹಾಡುಗಳನ್ನು ಹಾಡುತ್ತ ಆಯಾ ಕರ್ಮಗಳನ್ನು ನಡೆಸಿದಾಗ ಭಗವದನು

ಸಂಧಾನಪೂರ್ವಕವಾಗಿ ನಡೆಯುವ ಅವು ಭಗವದಾರಾಧನೆಯಾಗಿ ಮಾರ್ಪಡುವವು.

ಶ್ರೀ ವಾದಿರಾಜ ಗುರುಗಳ 'ಮನೆವಾರ್ತೆ ಹಾಡು' ಈ ದೃಷ್ಟಿಯಿಂದಲೂ ಮುಖ್ಯವಾದುದು. 'ಭಕ್ತವತ್ಸಲ ನಿನ್ನ ಅರಮನೆ ಕೆಲಸವ ಭಕ್ತಿಯಿಂದ ಮಾಡ ತೊಡಗುವೆ' 'ಸಕರ್ಷಣ ಮೂರ್ತಿ ಸವಿಪಾಕದ ಪಾತ್ರೇ ಸಂತೋಷದಿಂದ ತೊಳೆದು ಒಳಗಿಡುವೆ' 'ದಧಿಯ ವಾಮನ್ನ ಮನದೊಳಗೆ ಪಾಡುತ್ತ ದಧಿಯ ಕಡೆಯುವೆನೆ ಹರುಷದಲಿ' 'ಪತಿಯಂತರ್ಯಾಮಿ ಶ್ರೀಪತಿಯೆ ಗತಿಯೆಂದು ಪತಿಯ ಪಾದವನೊತ್ತಿ ಹರುಷದಲಿ ಕರ್ಪೂರ ವೀಳ್ಯಗಳ ಕೊಡುವೆನು' 'ಕ್ಷೀರಸಾಗರದಲ್ಲಿ ಶೇಷನ್ಹಾಸಿಗೆಯಲ್ಲಿ ಶ್ರೀ ಲಕ್ಷ್ಮೀಸಹಿತನಾಗಿ ಮಲಗಿರ್ಪ ಹರಿಯನ್ನು ಧ್ಯಾನಿಸುತೆ ಪತಿಯ ಹಾಸಿಗೇಲಿ ಮಲಗೂವೆ' —ಹೀಗೆ ಗೃಹಿಣಿಯಾದವಳು ಗೃಹಕೃತ್ಯಗಳನ್ನೂ. ತನ್ನ ದೈನಂದಿನ ಚಟುವಟಿಕೆಗಳನ್ನೂ ಭಗವದನುಸಂಧಾನವನ್ನು ತಂದುಕೊಳ್ಳುತ್ತ ನಡೆಸಲು ಬೇಕಾದ ಸ್ಫೂರ್ತಿ ಈ ಹಾಡಿನಿಂದ ದೊರಕಬಲ್ಲದು.

ಶ್ರೀ ವಾದಿರಾಜ ಯತಿಗಳ 'ಲಕ್ಷ್ಮೀಶೋಭಾನ' ಹಾಡು ಭಾಗವತ ಅಷ್ಟಮ ಸ್ಕಂಧದಲ್ಲಿ ಪ್ರಸ್ತುತವಾಗಿರುವ ಲಕ್ಷ್ಮೀನಾರಾಯಣರ ವಿವಾಹವನ್ನೇ ಮೂಲ ವಸ್ತುವನ್ನಾಗಿಸಿಕೊಂಡು ರಚಿತವಾಗಿದ್ದು ವಿವಾಹಸಮಾರಂಭದಲ್ಲಿ ಲಕ್ಷ್ಮೀನಾರಾಯಣರ ವಿವಾಹದ ಅನುಸಂಧಾನಕ್ಕೆ ಪುಷ್ಟಿ ನೀಡುವಂತಹದ್ದಾಗಿದೆ. ಪ್ರತಿ ನಿತ್ಯ ಮನೆಯಲ್ಲಿ ಲಕ್ಷ್ಮೀನಾರಾಯಣರ ವಿವಾಹದ ಮಂಗಲ ವಾತಾವರಣದ ಅನುಸಂಧಾನವನ್ನೂ ಈ ಹಾಡಿನಿಂದ ತಂದುಕೊಳ್ಳಬಹುದಾಗಿದೆ. 'ಸ್ತ್ರೀಯರೆಲ್ಲರು ಬನ್ನಿರೆ । ಶ್ರೀನಿವಾಸನ ಪಾಡಿರೇ....'—ಎಂದು ಪ್ರಾರಂಭವಾಗುವ ಶ್ರೀ ವಾದಿರಾಜ ತೀರ್ಥರ 'ಶ್ರೀನಿವಾಸ ಕಲ್ಯಾಣ' ಹಾಡೂ ಈ ನಿಟ್ಟಿನಲ್ಲಿ ಉಪಯುಕ್ತವೆನಿಸಬಲ್ಲದು.

'ನವನೀತವಿಲಿಪ್ತಾಂಗಃ' 'ನವನೀತನಟಃ' 'ನವನೀತನವಾಹಾರಃ' — ಎಂದು ಕರೆಸಿಕೊಳ್ಳಲ್ಪಡುವ ಶ್ರೀಕೃಷ್ಣಪರಮಾತ್ಮನಿಗೆ ಬೆಣ್ಣೆ ಎಂದರೆ ಎಲ್ಲಿಲ್ಲದ ಪ್ರೀತಿ. ಅವನ ಅತಿ ಪ್ರೀತಿಗೆ ಪಾತ್ರವಾದ ಭಕ್ತಿಯನ್ನು ಸಂಕೇತಿಸುವಂತಹದ್ದು ಬೆಣ್ಣೆ. ಅಂತಹ ಬೆಣ್ಣೆಗಾಗಿ ಮೊಸರನ್ನು ಕಡೆಯುವಾಗ, ಆ ಬೆಣ್ಣೆ ಬಾಲಕೃಷ್ಣನಿಗೆ ಸಮರ್ಪಿತವಾಗಲಿ ಎಂಬ ಅನುಸಂಧಾನಕ್ಕೆ ಪೋಷಕವಾಗುವಂತೆ ಬಾಲಕೃಷ್ಣನ ಚರಿತ್ರೆಯನ್ನು ಹಾಡುತ್ತಿರಬೇಕು. ಯಶೋದಾದೇವಿಯೂ ಮೊಸರು ಕಡೆಯುತ್ತಿದ್ದಾಗ, ಬಾಲಕೃಷ್ಣ ಅದುವರೆಗೆ ತೋರಿಸಿದ ಲೀಲೆಗಳನ್ನು ಹಾಡುತ್ತಿದ್ದಳೆಂದು ಭಾಗವತ ಉಲ್ಲೇಖಿಸಿದೆ.[1] ಈಗಲೂ ಸ್ತ್ರೀಯರು ಬಾಲಕೃಷ್ಣನನ್ನೆ ನೆನೆಯುತ್ತ ಮೊಸರು ಕಡೆಯುವುದಕ್ಕೆ ಅನುಕೂಲವಾಗುವಂತೆ 'ಉದಯ ಕಾಲದೊಳ್ ಎದ್ದು ಗೋಪಿಯು....' —ಎಂಬ ಹಾಡು ಶ್ರೀದ ವಿಠಲದಾಸರಿಂದ ರಚಿತವಾಗಿದೆ.

---

1. ಯಾನಿ ಯಾನೀಹ ಗೀತಾನಿ ತದ್ಬಾಲಚರಿತಾನಿ ಚ ।
ದಧಿನಿರ್ಮಂಥನೇ ಕಾಲೇ ಸ್ಮರಂತೀ ತಾನ್ಯಗಾಯತ ॥ —ಭಾಗ. 10-9-2

ಉದಯ ಕಾಲದಲ್ಲಿ ಎದ್ದು ಯಶೋದಾದೇವಿ ದಧಿಯ ಮಥಿಸಲು ತೊಡಗಿದಾಗ ಬಾಲಕೃಷ್ಣನೂ ಏಳಲು ಅವನನ್ನು ಸಮಾಧಾನಪಡಿಸಿ ಮಲಗಿಸಿದುದೇ ವಸ್ತುವಾಗಿ ಉಳ್ಳ ಈ ಹಾಡು ಬಾಲಕೃಷ್ಣನ ನೆನಪನ್ನು ತಂದುಕೊಡುವಂತಹದ್ದು.

ಅಡುಗೆ ಮಾಡುವಂತಹದ್ದು ಗೃಹಿಣಿಯರ ಪ್ರಮುಖ ಕರ್ತವ್ಯ. ಆ ಅಡುಗೆ ಮುಖ್ಯವಾಗಿ ಭಗವಂತನ ಆಸ್ವಾದನೆಗಾಗಿ —ಎಂಬ ಭಾವನೆ ಇರಬೇಕಲ್ಲದೆ ಅಡಗೆಯ ಮಾಡುವಿಕೆ ಮೋಕ್ಷ ಪರಿಕರವಾದಂಥ ಪಾಕವ ಮಾಡುವ ಅನುಭವ ದಡಿಗೆಯ ಸ್ಫೂರ್ತಿಯನ್ನು ನೀಡುತ್ತಿರಬೇಕು. ಈ ಬಗೆಯ ಆಧ್ಯಾತ್ಮಿಕ ಸ್ಫೂರ್ತಿಯನ್ನು ಪಡೆದುಕೊಳ್ಳಲು ಅನುಕೂಲವಾಗುವಂತೆ 'ಅನುಭವದಡಿಗೆಯ ಮಾಡಿ....' ಎಂದು ಪುರಂದರದಾಸರಿಂದ ಹಾಡು ರಚಿತವಾಗಿದೆ. ಈ ಹಾಡಲ್ಲಿ ಅಡುಗೆ ಮಾಡುವುದಕ್ಕೆ ಸಂಬಂಧಿಸುವ ಭಾಂಡವ ತೊಳೆಯುವುದು, ಮುಸುರೆಯ ಕಳೆಯುವುದೇ ಮುಂತಾದ ಚಟುವಟಿಕೆಗಳನ್ನು ಅನುಭವದಡಿಗೆಯ ಯಾವ ಯಾವ ಚಟುವಟಿಕೆಗೆ ಸಾಂಕೇತಿಕವಾಗಿ ನಡೆಸಬಹುದೆಂಬುದನ್ನು ವಿವರಿಸಲಾಗಿದೆ.

ಶಿಶುಗಳನ್ನು ತೂಗಿ ಮಲಗಿಸುವಾಗ, ಮೊಮ್ಮು ಉಣ್ಣಿಸುವಾಗ, ಅವುಗಳ ಆಟಗಳನ್ನು ನೋಡುತ್ತಿರುವಾಗ ಬಾಲಕೃಷ್ಣನ ಚರಿತ್ರೆಯ ಅನುಸಂಧಾನವನ್ನು ತಂದುಕೊಳ್ಳಲು ಅನುಕೂಲವಾಗುವಂತೆ ಬಾಲಕೃಷ್ಣನ ಲೀಲೆಗಳನ್ನೇ ವಸ್ತುವಾಗಿಟ್ಟುಕೊಂಡು ಹೊರಟ ನೂರಾರು ಹಾಡುಗಳಿವೆ.

ಶ್ರೀ ವಿಜಯದಾಸರ 'ಚಿರಂಜೀವಿಯಾಗೆಲೋ ಚಿನ್ನ ನೀನು....' —ಎಂಬ ಪದ್ಯದಲ್ಲಿ ಮಗು ಸುಸಂಸ್ಕೃತವಾಗಿ ಬಾಳಲು ಬೇಕಾದ ಆಧ್ಯಾತ್ಮಿಕ ಹಾಗೂ ಲೌಕಿಕ ನೀತಿಗಳನ್ನು ಸಂಗ್ರಹಿಸಲಾಗಿದ್ದು, ತಾಯಿಯಂದಿರು ತಮ್ಮ ಮಕ್ಕಳಿಗೆ ಮತ್ತೆ ಮತ್ತೆ ಕೇಳಿಸುವಂತೆ ಪಠಿಸುತ್ತಿರಬೇಕಾದ ಪದ್ಯ ಇದೆನಿಸಿದೆ.

ಗೋಪಾಲದಾಸರು ವಿಜಯದಾಸರ ಉದರಶೂಲೆಯನ್ನು ಪರಿಹರಿಸಲು ಶ್ರೀ ಧನ್ವಂತರಿಯಲ್ಲಿ ಸಲ್ಲಿಸಲಾಗುವ ನಿವೇದನೆಯ ರೂಪದಲ್ಲಿರುವ 'ಎನ್ನ ಭಿನ್ನಪವ ಕೇಳೋ ಧನ್ವಂತ್ರಿ ದಯಮಾಡೋ....' —ಎಂಬ ಹಾಡಿನಲ್ಲಿ ಆರೋಗ್ಯದ ವಿಷಯದಲ್ಲಿ ಮಾತ್ರವಲ್ಲದೆ, ಘೋರ ವ್ಯಭಿಚಾರ, ಪರನಿಂದೆ, ಪಿತ್ರಾಪಹಾರ ಮಾಡಿದ ದೋಷದ ವಿಷಯದಲ್ಲೂ ರಕ್ಷಣೆ ನೀಡುವಂತೆ ಶ್ರೀ ಧನ್ವಂತ್ರಿಯಲ್ಲಿ ಪ್ರಾರ್ಥಿಸಲಾಗುತ್ತಿದ್ದು, ಸ್ತ್ರೀಯರು ತಮ್ಮ ಮಕ್ಕಳ ಬಗ್ಗೆ ಈ ಬಗೆಯ ಪ್ರಾರ್ಥನೆಯನ್ನು ಸಲ್ಲಿಸುವುದಕ್ಕಾಗಿ ಮಕ್ಕಳನ್ನು ಮಲಗಿಸುವುದೇ ಮುಂತಾದ ಸಂದರ್ಭಗಳಲ್ಲಿ ಈ ಹಾಡನ್ನು ಹಾಡುತ್ತಿರುವುದು ಅತ್ಯವಶ್ಯ.

ಮುತ್ತೈದೆತನಕ್ಕೆ ಸಂಕೇತಗಳಾದ ಮಾಂಗಲ್ಯ, ಮೂಗುತಿ, ಮುಂತಾದ ಆಭರಣಗಳನ್ನು ತೊಡುವಾಗ, ಆಧ್ಯಾತ್ಮಿಕವಾಗಿ ಮುತ್ತೈದೆಯರಾಗಿರಲು ಈ

ಆಭರಣಗಳ ಸ್ಥಾನದಲ್ಲಿ ಯಾವ ಯಾವ ಸಾಧನೆಗಳ ಆವಶ್ಯಕತೆ ಇದೆ —ಎಂಬ ಅನುಸಂಧಾನ ಇರಬೇಕು. ಇದಕ್ಕೆ ಪುಷ್ಟಿ ನೀಡುವಂತೆ ಪುರಂದರದಾಸರ 'ಮುತ್ತೈದೆಯಾಗಿರಬೇಕು ಮುದದಿಂದಲಿ' —ಎಂಬ ಹಾಡು ಹೊರಟಿದೆ. ಇದರಲ್ಲಿ ಮುತ್ತೈದೆಯರು ಯಾವ ಯಾವ ಆಭರಣಗಳನ್ನು ಧರಿಸಬೇಕೆಂಬುದರ ಮಾಹಿತಿಯನ್ನಲ್ಲದೆ ಅವುಗಳನ್ನು ತೊಡುವಾಗ ಆಧ್ಯಾತ್ಮಿಕ ಮುತ್ತೈದೆತನವನ್ನು ಪಡೆದುಕೊಳ್ಳಲು ಅಳವಡಿಸಿಕೊಳ್ಳಬೇಕಾದ ಮಧ್ವಶಾಸ್ತ್ರವನ್ನು ಓದುವುದು, ಹರಿಕಥೆಯ ಕೇಳುವುದು —ಮುಂತಾದ ಸಾಧನೆಗಳ ಸ್ಫೂರ್ತಿಯನ್ನೂ ನೀಡಲಾಗಿದೆ.

ಮುಸುರೆ ತೊಳೆಯುವುದು ಗೃಹಿಣಿಯರ ಕರ್ತವ್ಯಗಳಲ್ಲೊಂದು. ಲೌಕಿಕ ದೃಷ್ಟಿಯಿಂದ ಇದೊಂದು ಸ್ವಲ್ಪ ಹೇಯವಾದ ಚಟುವಟಿಕೆ ಎನಿಸಿರುವುದಾದರೂ ಅಂತಃಕರಣದ ಶುದ್ಧೀಕರಣಕ್ಕೆ ಸಂಕೇತಿಸುವಂತಹದ್ದು. ಕಾಮಕ್ರೋಧದಿಂದ, ಅಷ್ಟಮದಗಳಿಂದ ಬೆಂದ, ಸುಟ್ಟ ಈ ಅಂತಃಕರಣ ಎಂಬ ಪಾತ್ರೆಯನ್ನು ರಾಮನಾಮ, ಕೃಷ್ಣನಾಮ—ಎಂಬ ಪ್ರೇಮನದಿಯಲ್ಲಿ, ಗಂಗಾನದಿಯಲ್ಲಿ 'ಈಶಪ್ರೇರಣೆ' —ಎಂಬ ಹಸಿಹುಲ್ಲನ್ನು ಬಳಸಿಕೊಂಡು ಮುಸುರೆ ತೊಳೆಯಬೇಕು. ಹೀಗೆ ತೊಳೆದ ಭಾಂಡವನ್ನು ಪುರಂದರವಿಠಲನಿಗೆ ಅರ್ಪಿಸಬೇಕು. ಅಂದರೆ ಅವನು ಆ ಪಾತ್ರೆಯಲ್ಲಿ ನೆಲೆಸುವಂತೆ ಮಾಡಬೇಕು.

ಈ ರೀತಿಯಾಗಿ ಮುಸುರೆ ತೊಳೆಯುವಾಗ ತಂದುಕೊಳ್ಳಬೇಕಾದ ಅನುಸಂಧಾನಕ್ಕೆ ಪುರಂದರದಾಸರ 'ಮನಸಿನಾ ಮುಸುರೆ ತೊಳೆಯ ಬೇಕು' —ಎಂಬ ಹಾಡಿನಿಂದ ಪುಷ್ಟಿ ದೊರಕುವುದು.

ಹೀಗೆ ಸ್ತ್ರೀಯರು ತಮ್ಮ ಬೇರೆ ಬೇರೆ ಚಟುವಟಿಕೆಗಳಿಗೆ ಭಗವದನುಸಂಧಾನವನ್ನು ತಂದುಕೊಳ್ಳುವುದಕ್ಕೆ ಹಾಗೂ ತಮ್ಮ ಮಕ್ಕಳಲ್ಲಿ ಆಧ್ಯಾತ್ಮಿಕ ಹಾಗೂ ಧಾರ್ಮಿಕ ಸ್ಫೂರ್ತಿಯ ಪ್ರಭಾವವನ್ನು ಬೀರುವುದಕ್ಕೆ ಉಪಯುಕ್ತಗಳಾದ ಅನೇಕ ಹಾಡುಗಳು ದಾಸ ಸಾಹಿತ್ಯದಲ್ಲಿ ಬಂದಿವೆ.



### ಸ್ತ್ರೀ ಧರ್ಮಗಳ ಪ್ರಸ್ತಾವ ಇರುವ

## ದಾಸ ಸಾಹಿತ್ಯದ ಕೆಲವು ಪದ್ಯಗಳು

ಪತಿವ್ರತೆಯರು ತಮ್ಮ ನಿತ್ಯಕರ್ಮಾನುಷ್ಠಾನದಲ್ಲಿ ಅಳವಡಿಸಿಕೊಳ್ಳಬೇಕಾದ ಅನುಸಂಧಾನಕ್ಕೆ ಪೋಷಕವಾದ ಹಾಡು — ಮನೆವಾರ್ತೆಹಾಡು

## ಪತಿವ್ರತೆಯರು ನಿತ್ಯಾನುಷ್ಠಾನದಲ್ಲಿ ಅಳವಡಿಸಿಕೊಳ್ಳಬೇಕಾದ ಅನುಸಂಧಾನ

—ಶ್ರೀ ವಾದಿರಾಜತೀರ್ಥರು

ಹೊತ್ತಾರೆ ಎದ್ದು ನಾ ಶ್ರೀಕೃಷ್ಣನ್ನ ನೆನೆವೆನು ।
ಭಕ್ತವತ್ಸಲ ನಿನ್ನ ಅರಮನೆ ಕೆಲಸವ ।
ಭಕ್ತಿಯಿಂದ ಮಾಡತೊಡಗೂವೆ ॥ ೧ ॥

ಉದಯಕಾಲದೆದ್ದು ಪದುಮನಾಭನ ನೆನೆದು ।
ಗರುಡವಾಹನ ನಿಮ್ಮ ಆರಮನೆ ಕೆಲಸವ ।
ಮುದದಿ ಮಾಡತೊಡಗೂವೆ ॥ ೨ ॥

ಸಂಕರ್ಷಣ ವಾಸುದೇವ ಪ್ರದ್ಯುಮ್ನ ಅನಿರುದ್ಧ ।
ಇವರು ವಾಸವಾಗಿರುವ ಅರಮನೆ ಕೆಲಸವ ।
ದಾಸಿಯಾಗಿ ಬಳಿದು ಸುಖದಲಿಪ್ಪೇ ॥ ೩ ॥

ಉಪ್ಪರಿಗೆ ಸಾರಿಸಿ ಮತ್ತೆ ಕಾರಣೆಗೊಂಡು
ಅಚ್ಚಮುತ್ತಿನ ರಂಗವಲ್ಲಿಯನೆ ಹಾಕಿ ನಾ ।
ಅಚ್ಯುತನ ಚರಣಕ್ಕೆ ಎರಗೂವೆ ॥ ೪ ॥

ಪದ್ಮಜನಾಭನಾ ಮನೆಬಿಂಕ ಬೃಂದಾವನಕೆ ।
ಶಂಖ ಚಕ್ರಗದಾ ಪದ್ಮವನೆ ಇಟ್ಟು ನಾ ।
ಪಂಚವರ್ಣದ ಗಿಳಿಯ ರಚಿಸೂವೆ ॥ ೫ ॥

ನೂರೆಂಟು ಕೋಟಿ ಅರಮನೆ ಉಪಕರಣೆಯ ।
ತೊಳೆದು ಮನೆವಾರ್ತೆ ಮಾಡಿ ನಾ ।
ನರಹರಿಯ ಚರಣಕ್ಕೆ ಎರಗೂವೆ ॥ ೬ ॥

ಕಂಚುಕಲಾಯದ ಪಾತ್ರೆ ಪಂಚಲೋಹದ ಪಾತ್ರೆ ।
ಸಂಕರ್ಷಣ ಮೂರ್ತಿ ಸವಿಪಾಕದ ಪಾತ್ರೆ ।
ಸಂತೋಷದಿಂದ ತೊಳೆದು ಒಳಗಿಡುವೆ ॥ ೭ ॥

ಗೋಕುಲಾದೊಳಗ್ಹುಟ್ಟಿ ಗೋವರ್ಧನಗಿರಿನೆತ್ತಿದ ।
ಗೋಪಾಲಕೃಷ್ಣನಿಗೆ ಶರಣೆಂದು ನಾನೀಗ ।
ಆಕಳಾ ಕರೆಯುವೆನು ಹರುಷದಲಿ ॥ ೮ ॥

ಯಾದವರಾಯರಾ ಮನೆ ಹಾಲು ಕಾಸಿಡುವೆನಾ ।
ಮಾಧವರಾಯರಿಗೆ ಆರೋಗಣೆಯ ಮಾಡೆ ।
ಬೇಡಿದಿಷ್ಟಾರ್ಥ ಕೊಡುವೋನೆ ॥ ೯ ॥

ದಧಿಯ ಸಮುದ್ರನ್ನ ಹೃದಯದೊಳಗಿಟ್ಟು ।
ದಧಿಯ ವಾಮನ್ನ ಮನದೊಳಗೆ ಪಾಡುತ್ತ ।
ದಧಿಯ ಕಡೆಯುವೆನೆ ಹರುಷದಲಿ ॥ ೧೦ ॥

ಆದ ಬೆಣ್ಣೆಯ ಕಾಸಿ ಘೃತವ ಪಾತ್ರೆಗೆ ಹಾಕಿ ।
ದೇವರ್ನ್ನೈವೇದ್ಯಕ್ಕಿಟ್ಟು ಮಿಕ್ಕಾದ್ದು ನಾನೀಗ ।
ದೀವಿಗೆ ಹಚ್ಚುವೆ ನರಹರಿಗೆ ॥ ೧೧ ॥

ಗಂಗೆ ಉದಕವ ಕಾಸಿ ಕಂಚಿಣ್ಣಿಗಳನ್ನೊತ್ತಿ ।
ಕಂದರಿಗೆ ನೀರೆರೆದು ಮೊಲೆಕೊಟ್ಟು ನಾನೀಗ ।
ಇಂದಿರಾಪತಿಗೆ ಎರಗೂವೆ ॥ ೧೨ ॥

ಉಂಡ ಕಂದರಿಗೆ ಎಂಜಲಾ ಕೈತೊಳೆದು ।
ಮುಂಜೆರಗ ತಕ್ಕೊಂಡು ಮೈ ಒರಸಿ ನಾನೀಗ ।
ಅಲಿಗಳಕೆ ಆಡ ಕಳಹೂವೆ ॥ ೧೩ ॥

ಗಂಗೆ ಗೋದಾವರಿ ಸಿಂಧು ಕಾವೇರಿಯಲಿ ।
ಮಿಂದು ಮೈತೊಳೆದು ಹಣೆಗಿಟ್ಟು ನಾನೀಗ ।
ಇಂದಿರಾ ಪತಿಗೆ ಎರಗೂವೆ ॥ ೧೪ ॥

ಪೊಳೆವ ಅರಶಿನ ಹಚ್ಚಿ ನದಿಯೊಳಗೆ ಮೈತೊಳೆದು ।
ಚಲುವ ಊರ್ಧ್ವಪುಂಡ್ರ ಗಂಧ ಕುಂಕುಮವ್ಹಚ್ಚಿ ।
ನರಹರಿಯ ಚರಣಕ್ಕೆ ಎರಗೂವೆ ॥ ೧೫ ॥

ಗುರುಗಳು ಕೊಟ್ಟಂಥ ಪರಮ ಮಂತ್ರವ ಜಪಿಸಿ ।
ಒಡನೆ ಪ್ರದಕ್ಷಿಣೆ ನಮಸ್ಕಾರವನೆ ಮಾಡಿ ।
ನರಹರಿಯ ಚರಣಕ್ಕೆ ಎರಗೂವೆ ॥ ೧೬ ॥

ಮಂಗಳಮಹಿಮನ ಉಂಗುಷ್ಠದಲಿ ಜನಿಸಿದ ।
ಗಂಗೆಯಾ ತಂದು ಹರಿಯ ನೈವೇದ್ಯಕ್ಕೆ ।
ಹಂಡೆ ಹಂಡೆಗಳಲ್ಲಿ ಇರಿಸೂವೆ ॥ ೧೭ ॥

ಆರತಿ ಕರ್ಪೂರ ನೀರಾಜನಗಳ ತುಂಬಿ ।
ಪರಿಪರಿ ಪುಷ್ಪ ಮಾಲಿಕೆಗಳನೆ ಕಟ್ಟಿ ।
ನರಹರಿಯ ಪೂಜೆಗೆ ಇರಿಸುವೆ ॥ ೧೮ ॥

ಹಾಗಲ್ಹೀರೀಕಾಯಿ ಬೇಗ ಬೆಂಡೇಕಾಯಿ ।
ಸಾಗರಶಯನನಾ ನೈವೇದ್ಯಕ್ಕಣಿ ಮಾಡಿ ।
ಶಾಕಗಳ ಹೆಚ್ಚಿ ಇರಿಸೂವೆ ॥ ೧೯ ॥

ಪಾಯಸಾ ಭಕ್ಷ್ಯವೂ ಸೂಪ ಶಾಕಾನ್ನವೂ ।
ಆಯುತವಾಗಿದ್ದ ಲವಣ ಶಾರಾನ್ನವೂ ।
ದೇವರ ನೈವೇದ್ಯಕ್ಕಿಡುವೇನೇ ॥ ೨೦ ॥

ದೇವರ ನೈವೇದ್ಯಕ್ಕಿಟ್ಟು ಬೇಗ ವೈಶ್ವದೇವ ತೆಗೆದು ।
ಗೋಗ್ರಾಸಕ್ಕೆ ತೆಗೆದು ನಾನೀಗ ।
ಹಸ್ತೋದಕಕ್ಕೆ ಇಡುವೇನೂ ॥ ೨೧ ॥

ಅಚ್ಯುತಾ ಶ್ರೀ ತುಳಸೀಗೆ ಭಕ್ತಿಯಿಂದೆರಗಿ ಪೂಜಿಸಿ ।
ಅಚ್ಚ ಶ್ರೀಗಂಧವನು ಕೊರಳಿಗೆ ಲೇಪಿಸಿ ।
ಮುತ್ತಿನಾರತೀಯು ಬೆಳಗೂವೆ ॥ ೨೨ ॥

ಅಚ್ಯುತಾ ಶ್ರೀ ತುಳಸಿ ಕೊಟ್ಟ ಪ್ರಸಾದವನು ।
ಮುಡಿಯಲ್ಲಿ ಮುಡಿಕೊಂಡು ನಾನೀಗ ।
ಅಚ್ಯುತಾ ಶ್ರೀ ತುಳಸೀಗೆರಗೂವೆ ॥ ೨೩ ॥

ಹಿರಿಯರೂ ಗುರುಗಳೂ ನೆರೆದು ನಾರಾಯಣನ ।
ಪೊಗಳುವ ಪುರಾಣವನು ಕೇಳುವೆನು ।
ಶ್ರೀಹರಿಯ ಕೃಪೆಯಿಂದ ನಾನೂ ॥ ೨೪ ॥

ಗೌರಿ ಮೊಸರನ್ನವನು ಹರಿವಾಣದೊಳಗಿಟ್ಟು ।
ಹರಿಯ ದಾಸರಿಗೆ ಉಣಲಿಟ್ಟು ನಾನೀಗ ।
ನರಹರಿಯ ಚರಣಕ್ಕೆ ಎರಗೂವೆ ॥ ೨೫ ॥

ಅತ್ತೆ ಮಾವಂದಿರಿಗೆ ಪುತ್ರರಿಗೆ ಮಿತ್ರರಿಗೆ ।
ವಿಷ್ಣುದಾಸರಿಗೆ ಸುಗುಣ ಬಾಂಧವರಿಗೆ ।
ಅರ್ಥಿಯಿಂದ ಉಣಲು ಬಡಿಸೂವೆ ॥ ೨೬ ॥

ಉಂಡು ಕೈ ತೊಳೆದವರಿಗೇ ತಾಂಬೂಲಗಳ ಕೊಟ್ಟು
ಎಂಜಲಾ ಬಳಿದು ಪತಿ ಉಂಡ ಶೇಷವನು ।
ಭುಂಜಿಪೆನು ಶ್ರೀಹರಿಯ ಕೃಪೆಯಿಂದ ॥ ೨೭ ॥

ಸಂಜೆಯಾ ಹೊತ್ತಿನಲಿ ದೀಪವನೆ ಹಚ್ಚಿರಿಸುವನು ।
ಗೋವುಗಳನೆ ಕರೆದು ಕ್ಷೀರವನೆ ಕಾಸಿ ನಾ ।
ದೇವರ ನೈವೇದ್ಯಕ್ಕಿಡುವೇನೂ ॥ ೨೮ ॥

ಸಂಜೆಯಾ ಕಸಬಳಿದು ಉಂಬುವರಿಗುಣಲಿಟ್ಟು ।
ಸಂಭ್ರಮದಿಂದ ಪಡಿಹಾಸಿ ಮಂಚವನು ।
ಇಂದಿರಾ ಪತಿಗೆ ಎರಗೂವೆ ॥ ೨೯ ॥

ಪತಿಯಾಂತರ್ಯಾಮಿ ಶ್ರೀಪತಿಯೆ ಗತಿಯೆಂದು ।
ಪತಿಯ ಪಾದವನ್ನೊತ್ತಿ ಹರುಷದಲಿ ।
ಕರ್ಪೂರ ವೀಳ್ಯಗಳ ಕೊಡುವೇನು ॥ ೩೦ ॥

ಕ್ಷೀರಸಾಗರದಲ್ಲಿ ಶೇಷನ್ಹಾಸಿಗೆಯಲಿ ।
ಶ್ರೀ ಲಕ್ಷ್ಮೀಸಹಿತಾಗಿ ಮಲಗಿರ್ಪ ಹರಿಯನ್ನು ।
ಧ್ಯಾನಿಸುತ ಪತಿಯ ಹಾಸಿಗೇಲಿ ಮಲಗೂವೆ ॥ ೩೧ ॥

ಯೋಗೀಂದ್ರರಾಯರಾ ಪಾದಕ್ಕೆ ಶರಣೆಂಬೆ ।
ಈ ಧರೆಯೊಳಗೆ ಸಾಧು, ಸಜ್ಜನರಿಗೇ ।
ಬೇಡಿದಿಷ್ಟಾರ್ಥ ಕೊಡುವೊನೇ ॥ ೩೨ ॥

ನಿತ್ಯ ಈ ಹಾಡು ತಪ್ಪದೆ ಹೇಳಿದವರಿಗೆ ।
ಮುತ್ತೈದೆತನವನ್ನು ಕೊಟ್ಟು ।
ರಕ್ಷಿಸುವ ನಮ್ಮ ಹಯವದನ ॥ ೩೩ ॥

ಯಾವಾಗ ಈ ಹಾಡು ಪ್ರೇಮದಿ ಹೇಳಿ ಕೇಳಿದರೆ ।
ಸಾವಿತ್ರತನವನ್ನು ಸಾಯುಜ್ಯ ಪದವಿಯನು ।
ಕೊಟ್ಟು ರಕ್ಷಿಸುವ ನಮ್ಮ ಹಯವದನ ॥ ೩೪ ॥



## ಅತ್ತೆಯ ಮನೆಯಲ್ಲಿ ಹೇಗಿರಬೇಕು ಶ್ರೀಕೃಷ್ಣ ಸುಭದ್ರೆಗೆ ನೀಡಿದ ಉಪದೇಶ

(ರಾಗ–ಕಾಂಭೋಜಿ ಝಂಪೆ ತಾಳ) —ಶ್ರೀ ಪುರಂದರದಾಸರು

ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ ॥ ಪ ॥
ಅತ್ತೆಯ ಮನೆಯಲ್ಲಿ ಇರುವಂಥ ಸುದ್ದಿ ॥ ಅ ॥

ಯಾರೇನು ಅಂದರೂ ಮೋರೆಯನು ತಿರುಹದಿರು ।
ಮೋರೆ ಮೇಲಕೆಯೆತ್ತಿ ಬಲ್ಲಳೆಂದೆನಿಸಿ ॥
ವಾರಿಗೇಯವರ ಕೂಡಿ ನೀರನ್ನು ತರುವಾಗ ।
ದಾರಿಗಣ್ಣಲ್ಲಿ ನೋಟ ನೋಡದಿರು ಕಂಡ್ಯ ॥ ೧ ॥

ಪರರ ಒಡವೆಯ ಕಂಡು ಮರುಳ ಮಾತಾಡದಿರು ।
ನೆರೆಹೊರೆಯವರಿಗೆ ನೀನು ತಲೆಬಾಗಿ ನಡೆಯೋ ॥
ಪರರ ಮಾತುಗಳಿಂದ ಮರುಳಳೆಂದು ಎಣಿಸಬೇಡ ।
ನೆರೆಹೊರೆಯವರ ಕಂಡು ಬದುಕು ಮಾಡಮ್ಮ ॥ ೨ ॥

ಬಂಗಾರದ ಪೇಟೆಯೊಳು ಅಂಗಡಿಗೆ ಹೋಗದಿರು ।
ಅಂಗನೇರಿಗೆ ಮಾನಭಂಗಾಗಿ ನಡೆಯೆ ।
ಅಂಗನೇರಿಗೆ ನಿನ್ನಂತರಂಗವ ಹೇಳದಿರು ।
ಬಂಗಾರ ವಸ್ತುಗಳ ಮುಚ್ಚಿಕೊಳ್ಳಮ್ಮ ॥ ೩ ॥

ಹಾಕಿದ್ದು ನೀನುಂಡು ಬೇಕೆಂದು ಬೇಡದಿರು ।
ಸಾಕು ಸಾಕು ಎಂಬ ನಾಚಿಕೆಯ ಹಿಡಿಯೆ ।
ನಾಕು ಮಂದಿಯೊಡನೆ ಜೋಕೆ ಮಾತಾಡಿದರ ।
ಲೋಕದೊಳಿವಳೊಬ್ಬ ಮೂಕಿಯೆಂದೆನಿಸೆ ॥ ೪ ॥

ಇಷ್ಟರು ಅಂದರು ನಿಷ್ಠೂರ ಮಾಡದಿರು ।
ಘಟ್ಟಿ ಮಾಡಮ್ಮ ನಿನ್ನ ಮನಸು ।
ಸೃಷ್ಟಿಯೊಳಗೆ ನಮ್ಮ ಪುರಂದರವಿಠಲನ್ನ ।
ಶ್ರೇಷ್ಠನಾದ ಕೃಷ್ಣನ್ನ ತಂಗಿಯೆಂದೆನಿಸೆ ॥ ೫ ॥



## ಮಗಳಿಗೆ ತಂದೆತಾಯಂದಿರ ಉಪದೇಶ

(ರಾಗ ಶಂಕರಾಭರಣ ಆದಿತಾಳ) —ಶ್ರೀ ಪುರಂದರದಾಸರು

ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ । ಮಗಳೆ ।
ಮನ ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ ॥ ಪ ॥

ಅತ್ತೆಮಾವಗಂಜಿಕೊಂಡು ನಡೆಯಬೇಕಮ್ಮ । ಮಗಳೆ ।
ಚಿತ್ತದೊಲ್ಲಭ ನಕ್ಕರೆಯನು ಪಡೆಯ ಬೇಕಮ್ಮ ॥

ಹೊತ್ತು ಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ । ಮಗಳೆ ।
ಹತ್ತು ಮಂದಿ ಒಪ್ಪುವ ಹಾಗೆ ನುಡಿಯಬೇಕಮ್ಮ ॥ ೧ ॥

ಕೊಟ್ಟು ಕೊಂಬುವ ನೆಂಟರೊಡನೆ ದ್ವೇಷ ಬೇಡಮ್ಮ । ಮಗಳೆ ।
ಅಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ ॥
ಹಟ್ಟಿ ಬಾಗಿಲಲ್ಲಿ ನಿಲ್ಲಬೇಡಮ್ಮ । ಮಗಳೆ ।
ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ ॥ ೨ ॥

ನೆರೆಹೊರೆಯವರಿಗೆ ನ್ಯಾಯವನ್ನು ಹೇಳಬೇಡಮ್ಮ । ಮಗಳೆ ।
ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ ॥
ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ । ಮಗಳೆ ।
ಗುರು ಪುರಂದರವಿಠಲನ ಸ್ಮರಣೆ ಮರೆಯ ಬೇಡಮ್ಮ ॥ ೩ ॥



## ಪತಿ ಆಧ್ಯಾತ್ಮಿಕಮಾರ್ಗದತ್ತ ತಿರುವುದಕ್ಕೆ ಪತ್ನಿಯ ಪ್ರೇರಣೆ

(ರಾಗ-ಪಂತುವರಾಳಿ ಆದಿತಾಳ) —ಶ್ರೀ ಪುರಂದರದಾಸರು

ಆದದ್ದೆಲ್ಲ ಒಳಿತೇ ಆಯಿತು ನಮ್ಮ । ಪ ।
ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು । ಅ ।

ದಂಡಿಗೆ ಬೆತ್ತ ಹಿಡಿಯುವುದಕ್ಕೆ । ಮಂಡೆ ಬಾಗಿ ನಾಚುತಲಿದ್ದೆ ॥
ಹೆಂಡತಿ ಸಂತತಿ ಸಾವಿರವಾಗಲಿ । ದಂಡಿಗೆ ಬೆತ್ತ ಹಿಡಿಸಿದಳಯ್ಯ ॥ ೧ ॥

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ । ಭೂಪತಿಯೆಂದು ಗರ್ವಿಸುತ್ತಿದ್ದೆ ॥
ಆ ಪತ್ನೀಕುಲ ಸಾವಿರವಾಗಲಿ । ಗೋಪಾಳ ಬುಟ್ಟಿ ಹಿಡಿಸಿದಳಯ್ಯ ॥ ೨ ॥

ತುಲಸೀ ಮಾಲೆ ಹಾಕುವುದಕ್ಕೆ । ಅರಸನೆಂದು ತಿರುಗುತಲಿದ್ದೆ ॥
ಸರಸಿಜಾಕ್ಷ ಪುರಂದರವಿಠಲನು । ತುಲಸೀಮಾಲೆ ಹಾಕಿಸಿದನು ॥ ೩ ॥



## ಪಾಪಿ ಹೆಂಗಳೆಯರ ದಂಡಿಸಲು ಡಂಗುರ ಹೊಯಿಸಿದ ಯಮನು

(ರಾಗ–ಪಂತುವರಾಳಿ-ಆಟತಾಳ) — ಶ್ರೀ ವಿಜಯದಾಸರು

ಡಂಗುರ ಹೊಯಿಸಿದ ಯಮನು ।
ಪಾಪಿ ಹೆಂಗಳೆಯರ ತಂದು ಭಂಗಪಡಿಸಿರೆಂದು ॥ ಪ ॥

ಮೃತ್ತಿಕೆ ಶೌಚವ ಗಂಧ ಪೋಗುವಂತೆ ।
ನಿತ್ಯದಲಿ ಸ್ನಾನ ಮಾಡದೆ ಸುಮ್ಮನೆ ॥
ತೊತ್ತು ಬಡಕಿಯಾಗಿ ಮುಖವ ತೊಳಿಯದಿಪ್ಪ ।
ಕತ್ತೆ ಹೆಂಗಸರನು ಕಡಿದೋ ಕೊಲ್ಲಿರೋ ಎಂದು ॥ ೧ ॥

ಪತಿಗೆರಗದೆ ಗೃಹಕೃತ್ಯ ಮಾಡುವಳ ।
ಮತಿ ಏಕವಿರದೆ ಚಂಚಲದಿಪ್ಪಳ ॥
ವ್ರತಗೇಡಿ ಅನ್ಯರ ಮಾತಿಗೆ ಸೋಲುವ ।
ಪತಿತಳ ಎಳೆತಂದು ಹತವ ಮಾಡಿರೆಂದು ॥ ೨ ॥

ಒಬ್ಬರಿಬ್ಬರ ಕೂಡ ಸಖಿತನ ಮಾಡುವಳ ।
ಒಬ್ಬೊಬ್ಬರಿಗೆ ಮೈಯಿತ್ತು ಪಾಡುವಳ ॥
ಅಬ್ಬರದ ಸೊಲ್ಲನು ವಿಸ್ತರಿಸುವಳ ।
ದಬ್ಬಿರೋ ವೃಶ್ಚಿಕದ ಕುಂಡದೊಳಗೆ ಎಂದು ॥ ೩ ॥

ವಸನವಿಲ್ಲದೆ ಮೈಯ ತೊಳಕೊಂಬೊ ಪಾಪಿಯು ।
ಹಸಿವೆಯಾದರೆ ಮಲಗಿಕೊಂಡಿಪ್ಪಳ ॥
ಅಶನ ಭಕ್ಷಿಸುವಾಗ ಅಳಲುವ ದುಖಿಯ ।
ಪೆಸರಿಯ ತಲೆ ಕೆಳಗಾಗಿ ಬಾಧಿಸಿರೆಂದು ॥ ೪ ॥

ಬಗಿದು ಪುಟವ ಹಾಕಿ ಬದಿಬಾಗಲ ಮುಚ್ಚದೆ ।
ನಗುವಳು ಅವರಿವರೆಂದರಿಯದೆ ॥
ಬಗೆಬಗೆ ವಯ್ಯಾರ ನಿಜವಾಗಿ ತೋರುವ ।
ಅಧಮ ನಾರಿಯ ತಂದು ಅರಿದು ಕೊಲ್ಲಿರೋ ಎಂದು ॥ ೫ ॥

ಪಾಕದ ಪದಾರ್ಥ ನೋಡಿ ಇಡದವಳ ।
ಲೋಕವಾರ್ತೆಗೆ ಮನೆಯ ಜರಿದು ಪತಿಗೆ ॥
ಬೇಕಾದವರ ಜರಿದು ಬಹುಪುಷ್ಪ ಮುಡಿದಿಪ್ಪ ।
ಕಾಕಿಯ ಎಳೆತಂದು ಕಣ್ಣು ಕಳಚಿರೆಂದು ॥ ೬ ॥

ಪಂಕ್ತಿ ಭೇದವ ಮಾಡಿ ಬಡಿಸುವ ಪಾಪಿಯ ।
ಕಾಂತ ಕರೆದಾಗ ಪೋಗದವಳ ॥
ಸಂತರ ನೋಡಿ ಸ್ಥೈರಿಸದಿಪ್ಪ ನಾರಿಯ ।
ದಂತಿಯ ಕೆಳಗೆ ಹಾಕಿ ತುಳಿಸಿಕೊಲ್ಲಿರೋ ಎಂದು ॥ ೭ ॥

ವಿಧವೆಯು ಸಂಗಡ ಇರುಳು—ಹಗಲು ಇದ್ದು ।
ರದನ ತೆಗೆದು ನೆರಳು ನೋಡುವಳ ॥
ಕದದ ಮುಂದೆ ಕುಳಿತು ತಲೆ ಬಾಚಿಕೊಂಬುವಳ ।
ಕುದಿಸಿ ಕಟಾಹದೊಳು ಮೆಟ್ಟಿ ಸೀಳಿರೋ ಎಂದು ॥ ೮ ॥

ಆವದಾದರು ತೊರೆದು ಪತಿದೈವವೆಂದರಿಡು ।
ಸೇವೆಯ ಮಾಡಿ ಸುಜನರಿಗೆ ಬೇಗ ॥
ದೇವೇಶ ವಿಜಯವಿಠ್ಠಲ ತಿರುವೆಂಗಳ ।
ಕಾಯುವನು ದಯದಿಂದ ಕೈವಲ್ಯ ಕಲ್ಪಿಸಿ ॥ ೯ ॥



## ಅಘನಾರಿಯರೆಳೆದು ತರಲು ಸಾರಿದ ಡಂಗುರ ಯಮನು

[ರಾಗ-ನಾದನಾಮಕ್ರಿಯ-ಅಟತಾಳ] —ಶ್ರೀ ಜಗನ್ನಾಥದಾಸರು

ಸಾರಿದ ಡಂಗುರ ಯಮನು—ಅಘ
ನಾರಿಯರೆಳೆದು ತಂದು ನರಕದೊಳಿಡು ಎಂದು ॥ ಅ. ಪ. ॥

ಹೊತ್ತಾರೆ ಎದ್ದು ಪತಿಗೆ ಎರಗದವಳ
ಮೃತ್ತಿಗೆ ಶೌಚ ಮಾಡದೆ ಇಪ್ಪಳ
ಹೊತ್ತಾಗಿ ಮೈತೊಳೆದತ್ತಿಗೆ ನಾದಿನಿ
ಅತ್ತೆ ಮಾವರ ಬೈವಳೆತ್ತಿ ತನ್ನಿರೋ ಎಂದು ॥ ೧ ॥

ತಿಲಕಾಯುಧವ ಬಿಟ್ಟು ಕುಂಕುಮವಿಡುವಳ
ಬೆಳಗಾದ ಕಾಲಕ್ಕು ಮಲಗಿಪ್ಪಳ
ಮಲಿನ ವಸ್ತ್ರವನುಟ್ಟು ಪತಿಬಳಿ ಪೋಪಳ
ಕಲಹಕಾರಿಯ ಪಿಡಿದೆಳೆತನ್ನಿರೋ ಎಂದು ॥ ೨ ॥

ಉತ್ತಮ ಗುರುಹಿರಿಯರನು ನಿಂದಿಸುವಳ
ಹೆತ್ತ ಮಕ್ಕಳ ಮಾರಿ ಬದುಕುವಳ
ಪ್ರತ್ಯೇಕ ಶಯ್ಯದಿ ಮಲಗಿಪ್ಪಳ ನೀಚ
ವೃತ್ತಿಯಳ ಪಿಡಿದೊತ್ತಿ ತನ್ನಿರೊ ಎಂದು ॥ ೩ ॥

ಜಲಜಕ್ಕಿಸಾಳಿ ಕಂಬಳಿ ಬೋಳಿ ಬಕ್ಕಿ ಗೊಂ—
ದಲ ಮೊದಲಾದುವು ದೈವವೆಂದು
ತಿಳಿದು ಪಿಶಾಚಿ ಎಂಜಲನುಂಡು ಹಿಗ್ಗುವ
ಲಲನೇರನಾಲಸ್ಯಗೊಳದೆ ತನ್ನಿರೋ ಎಂದು ॥ ೪ ॥

ಒಲುಮೆ ಔಷಧ ಮಾಡಿ ಪತಿಯ ನೊಲಿಸುವಳ
ಮಲಮಕ್ಕಳೊಳು ಮತ್ಸರಿಸುತಿಪ್ಪಳ
ಕಳುವಿಲಿ ಕಾಂತನ ಧನವ ವಂಚಿಸುವಳ
ಗಳಕೆ ಪಾಶವ ಸುತ್ತಿ ಎಳೆದು ತನ್ನಿರೋ ಎಂದು ॥ ೫ ॥

ನಾಗೇಂದ್ರಶಯನನ ದಿನದಲಿ ಉಪವಾಸ
ಜಾಗರ ಮಾಡದೆ ಮಲಗಿಪ್ಪಳ
ಭಾಗವತಾದಿ ಶಾಸ್ತ್ರವ ಕೇಳದೆ ಮತ್ತ
ಳಾಗಿ ತಿರುಗುವಳ ಎಳೆದು ತನ್ನಿರೋ ಎಂದು ॥ ೬ ॥

ಉಡಲಿಲ್ಲ ಉಣಲಿಲ್ಲ ಇಡಲಿಲ್ಲ ತೊಡಲಿಲ್ಲ
ಸುಡಲಿ ಗಂಡನ ಒಗತನವೆನ್ನುತ
ಪಡೆದವರನು ನುಡಿನುಡಿಗೆ ಬೈಯುವ ಇಂಥ
ಕಡು ಪಾಪಿಗಳ ಹೆಡೆಮುಡಿಕಟ್ಟಿ ತಾ ಎಂದು ॥ ೭ ॥

ಗಂಡ ನಿರ್ಧನಿಕನೆಂದವಮಾನ ಮಾಳ್ಪಳ
ಉಂಡ ಶೇಷಾನ್ನವನುಣಿಸುವಳ
ಕೊಂಡೆ ಮಾತುಗಳ್ಹೇಳಿ ಕಳವಳಗೊಳಿಪಳ
ಮಂಡೆ ಕೂದಲು ಪಿಡಿದೆಳೆದು ತನ್ನಿರೋ ಎಂದು ॥ ೮ ॥

ಸಾಲಿಡೆಯಲಿ ಭೇದ ಮಾಡಿ ಬಡಿಸುವಳ
ನೀಲಾಂಬರವನುಟ್ಟು ಮಡಿಯೆಂಬಳ
ಬಾಲಕರನು ಬಡಿದಳಿಸುತಿಪ್ಪಳ ಹಿಂ—
ಗಾಲ ತೊಳಿಯದವಳ ಎಳೆದು ತನ್ನಿರೋ ಎಂದು ॥ ೯ ॥

ಮೀಸಲು ಮಡಿ ಎನ್ನದೆ ಭುಂಜಿಸುವಳ ಸ
ಕ್ಕೇಶಿಯೊಡನೆ ಗೆಳತನ ಮಾಳ್ಪಳ
ದಾಸೇರಿಂದಲಿ ಪಾಕಪಾತ್ರೆ ಮುಟ್ಟಿಸುವಳ
ಪಾಶಗಳನೆ ಹಾಕಿ ಎಳೆದು ತನ್ನಿರೋ ಎಂದು ॥ ೧೦ ॥

ಪತಿಗೆ ಬೇಕಾದವರೊಳು ಮತ್ಸರಿಸುವಳ
ಮೃತವತ್ಸಗೋವಿನ ಪಾಲುಂಬಳ
ಹುತವಹನನು ಪಾದತಳದಿ ನೊಂದಿಸುವಳ
ಮತಿಗೇಡಿಯ ಹಿಡಿದೆಳೆದು ತನ್ನಿರೊ ಎಂದು ॥ ೧೧ ॥

ಅತ್ತೆ ಮಾವರ ಕೂಡೆ ಮತ್ಸರಿಸುವಳ
ಸತ್ತವರ ನೆನೆನೆನೆದಳುತಿಪ್ಪಳ
ದತ್ತಾಪಹಾರವ ಮಾಡುತಿಪ್ಪಳ ಉ—
ನ್ಮತ್ತಳ ಹಿಡಿದೆಳೆದೆತ್ತಿ ತನ್ನಿರೋ ಎಂದು ॥ ೧೨ ॥

ಲಶುನ ವೃಂತಾಕಾದಿಗಳನು ಭಕ್ಷಿಸುವಳ
ಸೊಸೆಯರೊಡನೆ ಮತ್ಸರಿಸುತಿಹಳ
ಹಸಿದು ಬಂದವರಿಗೆ ಅಶನವಿಲ್ಲೆಂಬಳ
ಉಸಿರು ಬಿಡದ ಹಾಗೆ ಎಳೆದು ತನ್ನಿರೊ ಎಂದು ॥ ೧೩ ॥

ತುಲಸಿ ವೃಂದಾವನಕಭಿನಮಿಸದವಳ
ಜಲವ ಶೋಧಿಸದೆ ಪಾನವ ಮಾಳ್ಪಳ
ಫಲಧಾನ್ಯಾದಿಗಳ ನೋಡದೆ ಪಾಕ ಮಾಳ್ಪಳ
ಮಳೆಗಾಳಿ ನಿಂದಿಪಳೆಳೆದು ತನ್ನಿರೊ ಎಂದು ॥ ೧೪ ॥

ಅರಸಿನ ಕುಂಕುಮ ಪುಷ್ಪಾಂಜನ ವಸ್ತ್ರಾ—
ಭರಣ ಭೂಷಿತಳಾಗಿ ಪತಿಯೊಡನೆ
ಸರಸವಾಡುವ ಸುಖ ಹರಿಗೆ ಅರ್ಪಿತವೆಂಬ
ಗರತೇರೆಡೆಗೆ ಕರಮುಗಿದು ಬನ್ನಿರೊ ಎಂದು ॥ ೧೫ ॥

ಬಾಲಕರನು ತೊಟ್ಟಿಲೊಳಗಿಟ್ಟು ತೂಗುತ
ಪಾಲೆರೆವುತ ಹಾಡಿ ಪಾಡುತಲಿ
ಆಲಯದೊಳು ಕೆಲಸಗಳ ಮಾಡುತ ಲಕ್ಷ್ಮೀ
ಲೋಲನ ಸ್ಮರಿಸುವವರನು ಮುಟ್ಟದಿರೆಂದು ॥ ೧೬ ॥

ಅಗಣಿತ ಮಹಿಮ ಶ್ರೀ ಜಗನ್ನಾಥವಿಠಲನ
ಹಗಲು—ಇರುಳು ಬಗೆಬಗೆಯಿಂದಲಿ
ಹೊಗಳುವ ದಾಸರ ಬಗೆಯುವರೆನಿಸುವ
ಸುಗುಣೇರಿದ್ದೆಡೆಗೆ ಕೈಮುಗಿದು ಬನ್ನಿರೋ ಎಂದು ॥ ೧೭ ॥



## ಸುಜ್ಞೆಯಿಂದಾಳಬೇಕಾದ
## ಲಂಡ ಹೆಣ್ಣಿನ ದುರ್ನಡತೆಗಳು

[ರಾಗ-ಪಂತುವರಾಳಿ ಅಟತಾಳ] —ಶ್ರೀ ಪುರಂದರದಾಸರು

ಸುಜ್ಞೆಯಿಂದಾಳ ಬೇಕಣ್ಣ ॥ ಪ ॥
ಗಂಡ । ನಾಜ್ಞೆಯ ಮೀರಿ ನಡೆವ ಲಂಡ ಹೆಣ್ಣು ॥ ಅ ॥

ಅತ್ತೆ ಮಾವಗೆ ಅಂಜದವಳ । ತನ್ನ ಉತ್ತಮ ಪುರುಷನ ಜರೆದು ನುಡಿವವಳ ।
ಭಕ್ತರ ಕಂಡು ಬಂಧಿಪಳ । ನಡು ನೆತ್ತಿಯ ಚರ್ಮವ ಕೆತ್ತಬೇಕವಳ ॥ ೧ ॥

ಕೂಳು ಕೊಬ್ಬಲಿ ಉರಿವವಳ । ಗಂಡ । ಹೇಳಿದ ಮಾತ ಕೇಳದೆ ಮೀರುವವಳ ॥
ಸೂಳೆಯಂದದಿ ನಡೆವಳ । ತಲೆ ಬೋಳಿಸಿ ಕಸಹೆಡಿಗೆ ಹೊರಿಸಬೇಕವಳ ॥ ೨ ॥

ಬಟ್ಟ ಕುಚವ ತೋರಿಸುವವಳ । ಹುಟ್ಟು । ಹುಟ್ಟಲಿ ಬಾಯೊಳು ಹೆಟ್ಟಬೇಕವಳ ॥ ೩ ॥

ನಲ್ಲರ ಕಂಡು ನಗುವವಳ । ತನ್ನ । ಬಲ್ಲಿದ ಗಂಡನ ಬೈದು ಕರೆವಳ ॥
ಮಲ್ಲರಂಥದಿ ಹೋರುವಳ । ಅವಳ । ಹಲ್ಲು ಮುರಿದು ಜಿಹ್ವೆ ಸೀಳಬೇಕವಳ ॥ ೪ ॥

ಎಂದೂ ಈ ಪರಿಯಲ್ಲಿರುವವಳ । ಆವಳ । ಅಂದಮಾಡುವದೇಕೆ ಬಿಡಬೇಕಿನ್ನವಳ ॥
ಒಂದಿಷ್ಟು ಗುಣವಿಲ್ಲದವಳ । ಶ್ರೀ ಪುರಂದರವಿಠಲ ದಾಯಗಲ್ಲದವಳ ॥ ೫ ॥

೧೦೩

## ಪತಿತನಾರಿಯ ದುರ್ಲಕ್ಷಣಗಳು

(ರಾಗ-ಪಂತುವರಾಳಿ-ಅಟತಾಳ) —ಶ್ರೀ ವಿಜಯದಾಸರು

ನೆಚ್ಚ ಬೇಡಿ ಪತಿತ ನಾರಿಯ । ಕಚ್ಚುವ ಹಾವಿನ ಸಂಗವೆನ್ನಿ ॥ ಪ ॥
ಮೆಚ್ಚುಗೊಳಿಪಳು ಗುಣಿಸಿ ನೋಡಿ ॥ ನಿಚ್ಚದಲಿ ಚಿತ್ತಚಂಚಲಳಾಗಿ ॥ ಅ.ಪ. ॥

ಯುವ ತನಗೆ ಬರುವ ಪರಿಯಂತ । ಯಾವದನಿತು ಮೊಗವನೆತ್ತದಲೆ ॥
ಏವೆ ತೆಗೆದು ದಿಕ್ಕುಗಳ ನೋಡದೆ । ಅವನಿಗೆ ಬಾಗಿ ನಡೆಯುತ ॥
ತವರು ಮನೆಯವರನು ಹಳಿದು । ನವನವ ಪ್ರಾವರ್ತನವನು ತೋರುತ ॥
ಅವಗುಣಂಗಳಿಲ್ಲ ದೋಪಾದಿಲಿ । ಲವಕಾಲವನು ಕಳೆವ ನಾರಿಯ ॥ ೧ ॥

ಪ್ರಾಯಾವಸ್ಥೆ ಬಂದು ಪ್ರಾಪ್ತವಾಗಲು । ಆಯತಾಕ್ಷಿಗಳ ತಿರುಹಿ ಮೆಲ್ಲನೆ ।
ಬಾಯಲ್ಲಿ ಒಂದೊಂದು ಕ್ರಮಾಸಾರದಿ ನೋಯ ನೋಯದಂತೆ ವಚನವ ॥
ದಾಯಿಗಳಂತೆ ಮತ್ಸರಿಸಿ ಬಯ್ಯದೆ । ಮಾಯಾವಿ ಕಲ್ಪಿಸಿ ಮುಸಿ ಮುಸಿ ನಗೆ ।
ಆಯಕೆ ತಗಲಿ ಕಂಡ ಜನರಿಗೆ । ಛಾಯ ಕಾಣಿಸದಂತೆ ಮಾಳ್ಪಳ ॥ ೨ ॥

ಅತ್ತೆ ಮಾವಗೆ ಅತ್ಯಂತವಾಗಿ ತಾನು । ಪ್ರತಿ ಉತ್ತರ ಪೇಳಲು ಅಂಜಿ ಅಂಜಿದಂತೆ ॥
ಉತ್ತಮರ ಮನೋರಥವ ಕೆಡಿಸಿ । ಅತ್ತಿಗೆ ನಾದುನಿ ಮಿಗಿಳಾದವರೆಲ್ಲ ॥
ಕತ್ತೆ ನಾಯಿ ನರಿಯೆಂಬೊ ಸೊಲ್ಲಲ್ಲಾದೆ । ಎತ್ತಲಾದರು ವಂಚಿಸಿ ಗಂಡನ್ನ ।
ತನ್ನಂತೆ ಮಾಡಿಕೊಂಡು ಹಗಲಿರುಳು ಥೈ ತಥ್ಥಾ ಎಂದಾಡಿಸಿ ಕುಣಿಸುವ ಸತಿಯಳ ॥೩॥

ಮಿಥನ ಭಾವಕೆ ಕೊಂಡ ತೆರದಿ । ಪತಿಯ ಸಮಯ ನೋಡದೆ ತಾನು ।
ಸಥೆಯಿಂದಲಿ ಸಂಸಾರದೊಳಗಿದ್ದು । ಸುತರ ಪಡೆದು ಹಮ್ಮಲಿ ॥
ಕಥನವೆಬ್ಬಿಸಿ ಗಂಡನ್ನ ಅಡವಿ । ಪಥವ ಹಿಡಿಸಿ ಹಣದಗೋಸುಗ ॥
ಸತತ ಮನೆಯೊಳಗಿದ್ದ ಬದುಕ । ಮಿತಿಯಿಲ್ಲದೆ ಭಕ್ಷಿಸುವ ನಾರಿಯ ॥ ೪ ॥

ಒಲಿಪಗೆ ನೀವು ಮೋಸಗೊಂಡು । ಒಲಿಯದಿರಿ ಸ್ತ್ರೀಯರಿಗೆ ಸೋತು ॥
ಕಲಿಗೆ ಪ್ರಥಮ ಪಟ್ಟದ ಗದ್ದಿಗೆ । ಸುಲಭವಲ್ಲವೊ ಸುಖವಿಲ್ಲಾ ॥
ಕೆಲಕಾಲ ಮಹಾಕಾತುರದಿಂದಲಿ । ವಳಗಾಗದಿರು ಒಳಿತು ಪೇಳುವೆ ॥
ಜಲಜಾಕ್ಷ ವಿಜಯವಿಠಲನ್ನ ನಂಬಿರೋ । ನಂಬಿರೋ ನಂಬಿರೋ ಚತುರರು ॥ ೫ ॥

## ಕೊಂಡ ಕೋತಿಯಂತೆ ಗಂಡನನ್ನು ಕುಣಿಸುವ ಕೆಟ್ಟ ಹೆಂಡತಿ

(ರಾಗ-ಪಂತುವರಾಳಿ ಅಟತಾಳ) —ಶ್ರೀ ಪುರಂದರದಾಸರು

ಹೆಂಡತಿ । ಪ್ರಾಣ । ಹಿಂಡುತಿ ॥ ಪ ॥
ದೊಡ್ಡ । ಕೊಂಡ ಕೋತಿಯಂತೆ ಕುಣಿ ಕುಣಿಸುತ್ತಿ ॥ ಅ ॥
ಹೊತ್ತಾರೆ ಏಳುತ್ತಿ ಹೊರಗೆ ತಿರುಗಾಡುತ್ತಿ। ಹೊತ್ತು ಹೋಯಿತು ಭತ್ಯ ತಾರೆನ್ನುತ್ತಿ॥
ಉತ್ತಮ ಗುರುಹಿರಿಯರ ಮಾತು ಮೀರುತ್ತಿ ।
ಮೃತ್ಯುದೇವತೆಯಂತೆ ಮನೆಯೊಳಗಿರುತಿ ॥ ೧ ॥

ಇಲ್ಲದ್ದು ಬೇಡುತ್ತಿ ಸುಳ್ಳು ಮಾತಾಡುತ್ತಿ। ಒಳ್ಳೆ ಊಟವನುಂಡು ಕುಳಿತಿರ್ಪೆನಂತಿ ॥
ಎಳ್ಳಿನಷ್ಟು ಕೆಲಸ ಮಾಡಲಾರೆನಂತಿ । ಎಲ್ಲೆಲ್ಲಿ ತಲೆಯೆತ್ತದಾಂಗೆ ಮಾಡುತ್ತಿ ॥ ೨ ॥

ಹಿರಿಯತನಕ್ಹೋಗುತ್ತಿ ಗರುವಿಕೆ ಮಾಡುತ್ತಿ ನೆರೆಹೊರೆಯರ ಕಲ್ಲಿಗೆ ಬಡಿದಾಡುತ್ತಿ॥
ದೊರೆ ಸಿರಿ ಪುರಂದರವಿಠಲನ ಸ್ಮರಿಸದೆ ದುರಿತಕ್ಕೆ ಗುರಿಯಾಗಿ ನೀ ನಿಲ್ಲುತ್ತಿ ॥ ೩ ॥



## ವೈದಿಕ ಗಂಡನ ನೀರಸ ಪ್ರವೃತ್ತಿಗಾಗಿ ದೂರಿಡುವ ಕೆಟ್ಟ ಸ್ತ್ರೀ

(ರಾಗ - ಪಂತುರಾವಳಿ ಅಟತಾಳ) —ಶ್ರೀ ಪುರಂದರದಾಸರು

ಒಲ್ಲೆನೆ ವೈದಿಕಗಂಡನ ನಾ।ನೆಲ್ಲಾದರೂ ನೀರು ಧುಮುಕುವೆನಮ್ಮ ॥ ಪ ॥
ಉಟ್ಟೆನೆಂದರೆ ಇಲ್ಲ ತೊಟ್ಟೆನೆಂದರೆ ಇಲ್ಲ । ಕೆಟ್ಟ ಸೀರೆಯ ನಾನುಡಲಾರೆನೆ ॥
ಹಿಟ್ಟು ತೊಳಿಸಿ ಎನ್ನ ರಟ್ಟೆಲ್ಲ ನೊಂದವು। ಎಷ್ಟೆಂತ ಹೇಳಲಿ ಕಷ್ಟದ ಒಗತನ ॥೧॥

ಕೃಷ್ಣಾಜಿನವನ್ನು ರಟ್ಟೆಲಿ ಹಾಕಿಕೊಂಡು । ಬೆಟ್ಟೆಲೆ ಗಿಂಡಿಯ ಹಿಡಿದಿಹನೆ ॥
ದಿಟ್ಟತನದಿ ನಾನೆದುರಿಗೆ ಹೋದರೆ । ದೃಷ್ಟಿಯಿಂದಲಿ ಎನ್ನ ನೋಡನಮ್ಮ ॥ ೨ ॥

ನಿನ್ನಾಣೆ ಹುಸಿಯಲ್ಲ ಬಿನ್ನಾಣ ಮಾತಲ್ಲ । ಕಣ್ಣು ಸನ್ನೆಯಂತು ಮೊದಲೆ ಇಲ್ಲ ॥
ಮುನ್ನಿನ ಜನ್ಮದಲಿ ಶ್ರೀ ಪುರಂದರವಿಠಲನ। ಚೆನ್ನಾಗಿ ಪೂಜೆಯ ಮಾಡಲಿಲ್ಲಮ್ಮ ॥೩॥



೧೦೫

## ದಾಸಯ್ಯನಿಗೆ ಇಕ್ಕಲಾರದ ಕೈಯ ಆಸೆಬುರುಕ ಮನೆಯೊಡತಿ

(ರಾಗ-ಪೂರ್ವಿ ಅಟತಾಳ) —ಶ್ರೀ ಪುರಂದರದಾಸರು

ಇಕ್ಕಲಾರದ ಕೈ ಎಂಜಲು, ಚಿಕ್ಕ ॥ ಪ ॥
ಮಕ್ಕಳು ಅಳುತಾರೆ ಹೋಗೊ ದಾಸಯ್ಯ ॥ ಅ ॥

ಮಡಕೆ ತೊಳೆಯುತೇನೆ ಮನೆಯ ಸಾರಿಸುತೇನೆ ।
ಹುಡುಗರೊಬ್ಬರ ಕಾಣೆ ಹೋಗೋ ದಾಸಯ್ಯ ॥
ತೊಡೆಯ ಮೇಲಿನ ಕೂಸು ಮೊಲೆಯನುಣ್ಣುತಲಿದೆ ।
ಹುಡುಗಾಟ ಮಾಡದೆ ಹೋಗೋ ದಾಸಯ್ಯ ॥ ೧ ॥

ಅಟ್ಟದ ಮೇಲಿನ ಅಕ್ಕಿ ತೆಗೆಯಬೇಕು ।
ಹೊಟ್ಟೆ ನೋಯುತಲಿದೆ ಹೋಗೊ ದಾಸಯ್ಯ ॥
ಮುಟ್ಟಾಗಿ ಇದ್ದೇನೆ ಮನೆಯೊಳಗಾರಿಲ್ಲ ।
ನಿಷ್ಠೂರ ಮಾಡದೆ ಹೋಗೋ ದಾಸಯ್ಯ ॥ ೨ ॥

ವೀಸದ ಕಾಸಿಗೆ ದವಸವ ನಾ ತಂದೆ ।
ಕೂಸಿಗೆ ಸಾಲದು ಹೋಗೊ ದಾಸಯ್ಯ ॥
ಆಸೆಕಾರ ನೀನು ದೋಷಕಾರಿ ನಾನು ।
ಶೇಷಾಚಲವಾಸ ಪುರಂದರವಿಠಲ ॥ ೩ ॥



## ಕುಣಿವ ದಾಸರ ಕಂಡು ಕದವ ಮುಚ್ಚಿದ ಗಯ್ಯಾಳಿ

(ರಾಗ ಮಧ್ಯಮಾವತಿ ಆದಿತಾಳ) —ಶ್ರೀ ಪುರಂದರದಾಸರು

ಕದವ ಮುಚ್ಚಿದಳಿದಕೋ ಗಯ್ಯಾಳಿ ಮೂಳಿ ॥ ಪ ॥
ಕದವ ಮುಚ್ಚಿದಳಿದಕೋ ಚಿಲುಕ ಅಲ್ಲಾಡುತ್ತಿದೆ
ಒಳಗಿದ್ದ ಪಾಪವು ಹೋದೀತು ಹೊರಗೆಂದು ॥ ಅ ॥

ಭಾರತ ರಾಮಾಯಣ ಪುಣ್ಯಕಾವ್ಯಂಗಳ
ಸಾರತತ್ವದ ಬಿಂದು ಸೇರೀತು ಒಳಗೆಂದು ॥ ೧ ॥

ಅಂದಿಗೆ ಕಿರುಗೆಜ್ಜೆ, ಮುಂಗಾಲಿಲಳಪಟ್ಟು
ಧಿಂಧಿಮಿಧಿಮಿಕೆಂದು ಕುಣಿವ ದಾಸರ ಕಂಡು ॥ ೨ ॥

ನಂದನ ಕಂದ ಗೋವಿಂದ ಮುಕುಂದನ
ಚಂದವಾದ ಧ್ವನಿ ಹೋದೀತು ಕರ್ಣಕೆಂದು ॥ ೩ ॥

ಹರಿಶರಣರ ಪಾದ ಸರಸಿಜಯುಗಳದ
ಪರಮಪಾವನವಾದ ರಜವು ಬಿದ್ದೀತೆಂದು ॥ ೪ ॥

ಮಂಗಳ ಮೂರುತಿ ಪುರಂದರವಿಠಲನ
ತುಂಗವಿಕ್ರಮ ಪದದಂಗುಳಿ ಸೋಕೀತೆಂದು ॥ ೫ ॥



## ಸತಿಗೆ ಸ್ವಾತಂತ್ರ್ಯವ ಕೊಡದಿರು

(ರಾಗ-ಮೋಹನ-ಛಾಪುತಾಳ) **—ಪುರಂದರದಾಸರು**

ಸತಿಗೆ ಸ್ವಾತಂತ್ರ್ಯವ ಕೊಡದಿರು । ನಿನ್ನ । ಮತಿಗೆಟ್ಟು ಬಾಯ ಬಿಡದಿರಣ್ಣ ॥ ಪ ॥

ಪತಿಗೆ ಬಣ್ಣದ ಮಾತನಾಡ್ಯಾಳೋ । ಅವಳು । ಮಿತಿಯಿಲ್ಲದೆ ವೆಚ್ಚ ಮಾಡ್ಯಾಳೊ ॥
ಅತಿ ಹರುಷದಿಂದ ಕೂಡ್ಯಾಳೊ । ಪರ । ಗತಿಗೆ ಕರಕರೆ ಮಾಡ್ಯಾಳಣ್ಣ ॥ ೧ ॥

ಹಡೆದ ತಂದೆ ತಾಯಿ ತೊರೆಸ್ಯಾಳೊ । ತನ್ನ ಕಡೆಗೆ ಬಾಯೆಂದು ಕರೆಸ್ಯಾಳೊ ॥
ಬಿಡದೆ ಒಂಟಿಯು ಮಾಡಿ ನಿಲಿಸ್ಯಾಳೊ । ಒಂದು । ಪಡಿ ಭತ್ತಕೆ ಬಾಯಬಿಡಿಸ್ಯಾಳಣ್ಣ ॥ ೨ ॥

ತಂದಿದ್ದರೊಳಗರ್ಧ ಕದ್ದಾಳೊ । ತನ್ನ ಸಂದು ಸುಳಿವು ನೋಡಿ ಮೆದ್ದಾಳೊ ।
ಮುಂದಿದ್ದ ಕೂಸನ್ನು ಒದ್ದಾಳು । ಹತ್ತು । ಮಂದಿಲಿ ಮಾನವ ಕೆಡಿಸ್ಯಾಲಣ್ಣ ॥ ೩ ॥

ಉಂಡು ಉಟ್ಟು ಮನೆ ಎಣಿಸ್ಯಾಳೊ । ಅವನ ।
ಭಂಡು ಮಾಡಿ ಬಾಯ ಬಿಡಿ ಕೋತಿಯಂತೆ ಕುಣಿಸ್ಯಾಳಣ್ಣ ॥ ೪ ॥

ಕರಕರೆ ಸಂಸಾರ ತರವಲ್ಲ । ಇಂಥ । ದುರುಳ ಹೆಣ್ಣಿನ ಸಂಗವಿರೆ ಸಲ್ಲ ॥
ನೆರೆಹೊರೆ ನೋಡಿ ನಗುವರಲ್ಲ । ಇಂಥ । ದುರುಳ ಹೆಣ್ಣಿನ ಸಂಗವಿರೆ ಸಲ್ಲ ॥
ನೆರೆಹೊರೆ ನೋಡಿ ನಗುವರಲ್ಲ ಸಿರಿ । ಪುರಂದರವಿಠ್ಠಲ ತಾ ಬಲ್ಲ ॥ ೫ ॥



## ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ

(ರಾಗ-ಮುಖಾರಿ ಝಂಪೆ ತಾಳ) —ಶ್ರೀ ಪುರಂದರದಾಸರು

ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ । ಪ ।
ಪಡೆದವಳ ಎದೆ ಗೊರಳ್ ಕೊಯ್ವಂಥ ಚೂರಿ । ಅ ।

ಮಾತು ಕಲಿತರೆ ಏನು, ಮಹಜಾಣೆಯಾದರೇನು ।
ಚಾತುರ್ಯವಿದ್ದರೇನು, ಚೆಲುವೆಯಾದರೇನು ॥
ರಾಸಿ ಹಣವಿದ್ದರೇನು, ಏಸು ಪೇಳಿದರೇನು ।
ರೀತಿ ಕೆಟ್ಟ ಜನ್ಮ ಪೊರೆಯಬೇಕಲ್ಲ ॥ ೧ ॥

ಹೊರಗೆ ಬರಲಿಕೆ ಸಲ್ಲ, ಇದಿರಾಗಿ ಇರೆ ಸಲ್ಲ ।
ಅಡುಗೆ ಯೋಗ್ಯಳಲ್ಲ, ಹರಿಯು ತಾನೆ ಬಲ್ಲ ॥
ಮರಿಯಾದೆಗಳು ಇಲ್ಲ, ಬಲು ಹಗುರ ರಾಜ್ಯಕ್ಕಿಲ್ಲ ।
ಸರ್ವ ರೀತಿಲಿ ಕೆಟ್ಟ ಜನ್ಮ ಪೊರೆಸಲ್ಲ ॥ ೨ ॥

ಅತ್ತೆ ತನ್ನಯ ಮಗಗೆ ಮೃತ್ಯು ಎಂತೆಂಬವಳು ।
ಹುಟ್ಟಿದಾ ಮನೆಯವರು ದೂಷಿಸುವರು ।
ಎಷ್ಟು ಹೇಳಲಿ ಬಹಳ ತುಚ್ಛವನೆ ಮಾಡುವರು ।
ಅಕ್ಕತಂಗಿಯರಿಗೆ ದಿಕ್ಕು ಎಂಬುವರು ॥ ೩ ॥

ಉಪಕಾರ ಮಾಡಿದರೆ ಗತಿಯು ನೀನೆಂಬುವರು ।
ಅತಿ ಶ್ರಮ ಪಟ್ಟರೂ ಆದರಿಸರು ।
ವಿಪರೀತ ಹಣವಿದ್ದರಪಹರಿಸಿ ತಿಂಬುವರು ।
ಅತಿ ದೈನ್ಯದಿಂದ ಬೇಡೆ ಭಾಯ ಬಡಿಸುವರು ॥ ೪ ॥

ಚಾಕರಿಯ ಮಾಡಿದ್ದರೆ ಆಚೀಚೆಲಾಡುವರು ।
ರಾಶಿ ಅನ್ನವನುಂಡಳೆಂದು ದೂರುವರು ॥
ಈಸು ಸೈರಿಸಿಕೊಂಡು, ಏಕಾಂತದಲಿ ಕುಳಿತು ।
ಶ್ರೀಶ ಪುರಂದರವಿಠ್ಠಲನ ನೆನೆಯೆ ನಾರಿ ॥ ೫ ॥



೧೦೮

## ಮೊಸರು ಕಡೆಯುವಾಗ
## ಹೇಳಬೇಕಾದ ಹಾಡು

—ಶ್ರೀದ ವಿಠ್ಠಲದಾಸರು

ಉದಯಕಾಲದೊಳ್ ಎದ್ದು ಗೋಪಿಯು
ದಧಿಯ ಮಥಿಸುವೆನೆಂಬ ಸಮಯದಿ ।

ಯದುವರೇಣ್ಯನು ಎದ್ದು ತೊಟ್ಟಿಲೊಳ್
ತೊದಲ ನುಡಿಯಲಿ ತಾಯ ಕರೆದನು ।

ನುಡಿಯು ಲಾಲಿಸಿ ನಳಿನ ನೇತ್ರನ
ತಾ ತೊಡೆಯಲೇರಿಸಿ ತಾ ತೊರೆದ ಮೊಲೆಗಳ ।

ಕೊಡುವೆನೆಂದರೆ ಕಣ್ಣ ಮುಚ್ಚುವ
ಒಡನೆ ಮಲಗುವ ಮಲಗದೇಳುವ ।

ನಿದ್ದೆ ತೀರದೆ ನೀ ಎದ್ದ ಕಾರಣ
ಬುದ್ಧಿ ಸಾಲದು ಮುದ್ದು ಮಗುವಿಗೆ ।

ಪೊದ್ದಿ ಪವಡಿಸು ಎಂದು ಎದ್ದು ಬೇಗನೆ ।

ಕದ್ದು ಕೆಲಸವ ತಿದ್ದ ಪೋದಳು
ಅಮ್ಮ ಬಾರೆಲೆ ಎನ್ನಗಲ ಬೇಡವೆ ।

ಗುಮ್ಮ ಬರುತದೆ ಗುಸುಗುಸೆನುತದೆ
ಅಮ್ಮಿ ಕೊಡುವೆನು ವೆಲ್ಲನೆಂದರೆ
ತಿಂಬೆನೆನುತಿದೆ ತಾಳಲಾರೆನೆ ।
ವೇದಗೋಚರ ನೀನೇಳ ಬೇಡವೊ

ನಿನ್ನ ಪಾದಕ್ಕೆರಗುವೆ ಪವಡಿಸೆನ್ನುತ ।

ಶ್ರೀದವಿಠಲನಾ ಶ್ರೀ ಲತಾಂಗಿಯೂ
ಮೋದ ಪಡಿಸುತ ಮಾನನೀಯಳು ।



## ಅಡುಗೆ ಮಾಡುವಾಗ ತಂದುಕೊಳ್ಳಬೇಕಾದ ಸಾಂಕೇತಿಕ ಅನುಸಂಧಾನ

(ರಾಗ–ನಾದನಾಮಕ್ರಿಯೆ ಛಾಪು ತಾಳ) —ಶ್ರೀ ಪುರಂದರದಾಸರು

ಅನುಭವದಡುಗೆಯ ಮಾಡಿ । ಅದ । ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ ॥ ಪ ॥

ತನುವೆಂಬ ಭಾಂಡವ ತೊಳೆದು ।ಕೆಟ್ಟ। ಮನದ ಚಂಚಲವೆಂಬ ಮುಸುರೆಯ ಕಳೆದು॥
ಘನವಾಗಿ ಮನೆಯನ್ನು ಬಳಿದು । ಅಲ್ಲಿ ಮಿನುಗುವ ತ್ರಿಗುಣದ ಒಲೆಗುಂಡ ನಡೆದು ॥೧॥

ವಿರಕ್ತಿಯೆಂಬುವ ಮಡಿಯುಟ್ಟು । ಪೂರ್ಣ ಹರಿಭಕ್ತಿಯೆಂಬ ನೀರನ್ನೆಸರಿಟ್ಟು ॥
ಅರಿವೆಂಬ ಬೆಂಕಿಯ ಕೊಟ್ಟು । ಮಾಯಾ ಮರವೆಂಬ ಕಾಷ್ಠವ ಮುದದಿಂದ ಸುಟ್ಟು॥೨॥

ಕರುಣೆಂಬೊ ಸಾಮಗ್ರಿ ಹೂಡಿ । ಮೋಕ್ಷ । ಪರಿಕರವಾದಂಥ ಪಾಕವ ಮಾಡಿ ॥
ಗುರು ಶರಣರು ಸವಿದಾಡಿ । ನಮ್ಮ । ಪುರಂದರವಿಠಲನ ಬಿಡದೆ ಕೊಂಡಾಡಿ ॥ ೩ ॥



## ತನ್ನ ಚಿನ್ನನಿಗೆ ಅಕ್ಕರೆಯ ಅಮ್ಮನ ಮಹತ್ತ್ವಪೂರ್ಣ ಉಪದೇಶ

—ಶ್ರೀ ವಿಜಯದಾಸರು

ಚಿರಂಜೀವಿಯಾಗೆಲೋ ಚಿನ್ನ ನೀನು
ಪರಮ ಭಾಗವತರ ಪದಧೂಳು ಧರಿಸುತಲಿ ॥ ಪ ॥

ಮರೆಯ ಬೇಡ ಹರಿಯ ಮೆರೆಯ
ಬೇಡೆಂದಿಗೂ ತಿರುಗಬೇಡ ಖಳರ ಮನೆ ಮನೆಗೆ ಪೋಗಿ ॥

ಬರೆಯ ಬೇಡನ್ಯರಿಗೆ ತತ್ತ್ವೋಪದೇಶವನು,
ಬೆರೆಯ ಬೇಡ ಪರಸತಿಯ ಸ್ವಪ್ನದಲ್ಲಿ ॥ ೧ ॥

ಸಾಲ ಮಾಡಲು ಬೇಡ, ಸಾಲದೆನ್ನಲು ಬೇಡ ।
ನಾಳೆಗೆ ಹೇಗೆಂಬ ಚಿಂತೆ ಬೇಡ ।
ಖೂಳ ಜನರೊಡನಾಡಿ ಕಂಗೆಟ್ಟು ಕೆಡಬೇಡ ।
ಬಾಳುವವರ ಸಂಗಡ ಬಾಳೆಲೋ ಬಾಲಾ ॥ ೨ ॥

ಲೋಕವಾರ್ತೆಯು ನಿನ್ನ ಕಿವಿಗೆ ಕೇಳಿಸಲು ಬೇಡ ।
ಶ್ರೀಕಾಂತನ ಕೀರ್ತನೆ ಕೇಳದಿರಬೇಡ ।
ಪಾಕವನು ಮಾಡಿ ಏಕಾಂತದಲುಣ ಬೇಡ ।
ಭೂಕಾಂತರನುಸರಿಸಿ ಬೆಸಗೊಳಲು ಬೇಡ ॥ ೩ ॥

ಪಂಡಿತರು ಪಾಮರರು ಆರಾದರೂ ನಿನ್ನನೆ
ಕಂಡವರಿಗೆಲ್ಲ ಕೌತಕವ ತೋರುತಲಿ ।
ಹೆಂಡಿರು ಮಕ್ಕಳು ಮೊಮ್ಮಕ್ಕಳಳಿಯ
ಸೊಸೆ ಉಂಡುಟ್ಟು ದ್ವಿಜರ ಸಹ ಗಂಡುಗಲಿಯತಿರು ॥ ೪ ॥

ಮಂದಮತಿಗಳ ಕೂಡ ಮಾತಾಡದಿರು । ಹರಿ ।
ನಿಂದಕರ ಕಣ್ಣೆತ್ತಿ ನೋಡಬೇಡಾ ।
ಇಂದಿರಾ ರಮಣ ಸಿರಿ ವಿಜಯವಿಠ್ಠಲನ ಪಾದ—
ದ್ವಂದ್ವ ಮಸ್ತಕನೇಕ ನೋಡದಿರಬೇಡ ॥ ೫ ॥



## ಧನ್ವಂತ್ರಿಯಲಿ ಸರ್ವತೋಮುಖದ ಸಂರಕ್ಷಣೆಗೆ ಬಿನ್ನಪ

(ರಾಗ–ರೇಗುಪ್ತಿ ಝಂಪೆತಾಳ) —ಗೋಪಾಲದಾಸರು

ಎನ್ನ ಬಿನ್ನಪ ಕೇಳೊ ಧನ್ವಂತ್ರಿ ದಯಮಾಡೋ ಸಣ್ಣವನು ಇವ ಕೇವಲ ॥ ಪ ॥
ಬನ್ನಬಡಿಸುವ ರೋಗವನು ಮೋಚನ ಮಾಡಿ ಚೆನ್ನಾಗಿ ಪಾಲಿಸುವುದೊ ವಿಭುವೆ॥ಅ. ಪ॥

ಆರೋಗ್ಯ ಆಯುಷ್ಯ ಐಶ್ವರ್ಯವೆಂಬೊವಿವು ಮೂರು ವಿಧ ವಸ್ತುಗಳು
ನಾರಾಯಣನ ಭಜಕರಾದವರ ಸಾಧನಕೆ ಪೂರ್ಣವಾಗಿಪುದೋ
ಘೋರ ವ್ಯಭಿಚಾರ ಪರನಿಂದೆ ವಿತ್ತಾಪಹಾರ ಮಾಡಿದ ದೋಷಧಿ

ದಾರಿದ್ರ್ಯರಾಗುವರೊ ಮೂರು ವಿಧದಿಂದಲಿ
ಕಾರಣನೆ ನೀನು ದುಷ್ಕರ್ಮ ಪರಿಹರಿಸುವುದೋ ॥ ೧ ॥

ವಸುಮತಿಯ ಮೇಲಿನ್ನು ಅಸುರ ಜನರೇ ಬಹಳ ವಶವಲ್ಲ ಕಲಿಯ ಬಾಧೆ
ಬಿಸಿಲಿಂದ ಪೀಡಿತವಾದ ಸಸಿಗಳಂತೆ ಶಿಶುಗಳ ನಾವಿಪ್ಪೆವೊ
ಅಸುರಾರಿ ನಿನ್ನ ಕರುಣಾಮೃತದ ಮಳೆಗರೆದು ಕುಶಲದಿ ಪಾಲಿಸುವುದೊ
ಕೆಸರಿಂದ ಕೆಸರ ತೊಳೆದಂತೆ ಕರ್ಮದ ಪಥವು
ಅಸುನಾಥ ಹರಿಯೆ ಪೊರೆಯೊ ಸ್ವಾಮಿ ॥ ೨ ॥

ಆಧಿವ್ಯಾಧಿಗಳು ಉನ್ಮಾದ ವಿಭ್ರಮ ನಾನಾ ಬಾಧೆಗೌಷಧನು ನೀನೆ
ಹೇ ದೇವ ನಿನ್ನ ಕರಕಲಶ ಸುಧೆಯನು ಎರೆದು ಸಾಧುಗಳ ಸಂತೈಸುವಿ
ಮೋದ ಬಡಿಸುವಿ ನಿನ್ನ ಸಾಧಿಸುವರಿಗೆ ಶುಭೋದಯಂಗಳನು ಮಾಡಿ
ಆದರಿಸಿ ಇವರಿಗೆ ತವ ಪಾದಧ್ಯಾನವನಿತ್ತು
ಸಾಧುಗಳೊಳಗಿಟ್ಟು ಮೋದಕೊಡು ಸರ್ವದಾ ॥ ೩ ॥

ಅನ್ಯರನು ಭಜಿಸದಲೆ ನಿನ್ನನೆ ತುತಿಸುತ್ತ ನಿನ್ನ ಚಿಹ್ನೆಗಳ ಧರಿಸಿ
ನಿನ್ನವರವನೆನಿಸಿ ನಿನ್ನ ನಾಮೋಚ್ಚರಿಸಿ ನಿನ್ನಿಂದ ಉಪಜೀವಿಸಿ
ಅನ್ನ ಆರೋಗ್ಯಕ್ಕೆ ಅಲ್ಪಜೀವಿಗಳಿಗೆ ಇನ್ನು ಅಲ್ಪರಿಯಬೇಕೆ
ನಿನ್ನ ಸಂಕಲ್ಪ ಭಕ್ತರನು ಪೋಷಿಪೆನೆಂಬ ಘನ್ನ ಬಿರುದಿನ್ನು ಉಳುಹೋ ಸಲಹೊ ॥೪॥

ನಿನ್ನವರಲಿ ಇವಗೆ ಇನ್ನು ರತಿಯನು ಕಂಡು ನಿನ್ನವನೆಂದು ಅರಿದು
ನಿನ್ನನಾ ಪ್ರಾರ್ಥಿಸಿದೆ ಅನ್ಯರಿಗೆ ಅಲ್ಪರಿಯೆ ಎನ್ನ ಪಾಲಿಸುವ ದೊರೆಯೇ
ಎನ್ನ ಮಾತಲ್ಲವಿದು ಎನ್ನ ಹಿರಿಯರ ಮಾತು ಮನ್ನಿಸಬೇಕೋ ಕರುಣಿ
ಅನಂತಗುಣಪೂರ್ಣ ಗೋಪಾಲವಿಠಲನೆ ಇನ್ನಿದನು ಲಾಲಿಸಯ್ಯಾ ಜೀಯಾ ॥ ೫ ॥

**ಮುಸುರೆ ತೊಳೆಯುವ ರಹಸ್ಯ**

ಮುಸುರೆ ತೊಳೆಯು ಬೇಕು ।
ಮನಸಿನಾ ಮುಸುರೆ ತೊಳೆಯಬೇಕು ಗುಸು ಗುಸು ಬಿಡಬೇಕು ॥
ಈಶ ಪ್ರೇರಣೆ ಎಂಬ ಹಸಿಯ ಹುಲ್ಲನೆ ಹಾಕಿ ॥

ಕಾಮಕ್ರೋಧದಿಂದ ಬೆಂದ ಈ ಪಾತ್ರೆಯ ರಾಮನಾಮ ಎಂಬ ಪ್ರೇಮ ನದಿಯಲ್ಲಿ ॥
ಅಷ್ಟಮದದಿಂದ ಸುಟ್ಟ ಈ ಭಾಂಡವಾ ಕೃಷ್ಣನಾಮ ಎಂಬ ಗಂಗಾನದಿಯಲ್ಲಿ ॥
ವಿಷಯವೆಂಬ ಪಾತ್ರೆಯ ಮುಸುರೆಯ ತೊಳೆದಿಟ್ಟು ।
ಬಿಸಜಾಕ್ಷ ಪುರಂದರವಿಠಲಗರ್ಪಿಸೋ ನಿತ್ಯ ॥



## ಮುತ್ತೈದೆಯರು ಧರಿಸಿಕೊಳ್ಳಬೇಕಾದ ಆಭರಣಗಳು

(ರಾಗ–ಕಾಂಭೋಜಿ ಝಂಪೆತಾಳ) —ಶ್ರೀ ಪುರಂದರದಾಸರು

ಮುತ್ತೈದಾಗಿರಬೇಕು ಮುದದಿಂದಲಿ ।
ಹತ್ತು ನೂರುನಾಮದೊಡೆಯ ಹರಿನಾಮ ಪತಿಯೆಂದು ॥ ಪ ॥

ಗುರುಮಧ್ವಶಾಸ್ತ್ರವನು ಓದುವುದೆ ಮಾಂಗಲ್ಯ ।
ವೈರಾಗ್ಯವೆಂಬ ಒಪ್ಪುವ ಮೂಗುತಿ ।
ತಾರತಮ್ಯ ಜ್ಞಾನ ತಾಯಿತು ಮುತ್ತು ಸರ ।
ಕರುಣರಸವೆಂಬಂಥ ಕಟ್ಟಾಣಿ ಕಟ್ಟಿಕೊಂಡು ॥ ೧ ॥

ಹರಿಕಥೆ ಕೇಳುವದು ಕಿವಿಗೆ ಮುತ್ತಿನ ಓಲೆ । ನಿರತ ಸತ್ಕರ್ಮವು ನಿಜಕಾಂತಿಯು ।
ಹರಿದಾಸರ ಪಾದರಜ ಹೆರಳು ಬಂಗಾರ । ಗುರುಭಕುತಿ ಪಟ್ಟಾವಳಿಯನುಟ್ಟು ।

ಕೊಡುವ ದಾನಗಳೆಂಬೋ ಕುಬಸ ತೊಟ್ಟು ॥
ಬಿಡದೆ ಎನ್ನೊಡೆಯ ಶ್ರೀ ಪುರಂದರವಿಠಲನ ।
ದೃಢಭಕ್ತಿಯೆಂಬಂಥ ಕಡಗ ಬಳೆ ಇಟ್ಟುಕೊಂಡು ॥ ೨ ॥



**ಪರಿಶಿಷ್ಟ : ೭**

# ಸಂತಾನ ಗೋಪಾಲ ಮಂತ್ರ

"ಉತ್ಪಾದನಮಪತ್ಯಸ್ಯ.......ಪ್ರತ್ಯಕ್ಷಂ ಸ್ತ್ರೀನಿಬಂಧನಮ್" —ಎಂದು ಮನುಸ್ಮೃತಿಯಲ್ಲಿ (9–27) ತಿಳಿಸಿರುವಂತೆ ಸಂತಾನೋತ್ಪಾದನೆಯಲ್ಲಿ ಸ್ತ್ರೀಯು ರದ್ದು ದೊಡ್ಡ ಪಾತ್ರ. ಕೆಲವೊಮ್ಮೆ ತಮ್ಮ ಪ್ರಾರಬ್ಧ ಕರ್ಮದಿಂದಾಗಿ ಸಂತಾನ ವನ್ನು ಪಡೆಯಲು ಅವರು ಅಸಮರ್ಥರಾಗಬಹುದು. ಆಗ ಸಂತಾನಪ್ರಾಪ್ತಿಗಾಗಿ ಯಾರ್ಯಾರನ್ನೋ ಮೊರೆಹೊಕ್ಕುವ ಬದಲು ಕರ್ಮಾಧ್ಯಕ್ಷನಾದ ಶ್ರೀಕೃಷ್ಣ ಪರಮಾತ್ಮನನ್ನೇ ಶರಣಾಗತರಾಗವುದು ಸಮುಚಿತ. ಶ್ರೀಕೃಷ್ಣನೇ ಪ್ರತಿಪಾದ್ಯ ನಾಗಿ ಉಳ್ಳ ಕೃಷ್ಣಷಡಕ್ಷರ ಮಂತ್ರದ ಜಪದಿಂದಲೇ ಸಂತಾನ ಮುಂತಾದ ಕಾಮನೆ ಗಳನ್ನೂ ಪಡೆಯಬಹುದು. ಆ ಮಂತ್ರದ 'ಕ್ಲೀಂ' —ಎಂಬುದು ಕಾಮಬೀಜ ವೆನಿಸಿದ್ದು, ಅದು ಅನುಸಂಧಾನಪೂರ್ವಕವಾಗಿ ತನ್ನ ಜಪವನ್ನು ಮಾಡುವವರಿಗೆ ಸಂತಾನವೇ ಮುಂತಾದ ಸಕಲಾಭೀಷ್ಟಗಳನ್ನೂ ಈಡೇರಿಸಬಲ್ಲದು.

'ಕ್ಲೀಂ' ಬೀಜಮಂತ್ರದಿಂದ ಅಂತಹ ಅನುಸಂಧಾನ ಕಷ್ಟಸಾಧ್ಯ ಎಂದರೆ ಸಂತಾನಗೋಪಾಲ ಮಂತ್ರವನ್ನು ಜಪಿಸಬಹುದು. ಸಂತಾನಕ್ಕಾಗಿ ಶ್ರೀ ಗೋಪಾಲನನ್ನು ಬೇಡಿಕೊಳ್ಳಲಾಗುವ ಈ ಮಂತ್ರದಲ್ಲಿ ಸಂತಾನಪ್ರದನಾದ ಗೋಪಾಲನು ಪ್ರತಿಪಾದ್ಯನು.

**ಪ್ರಾಣಾಯಾಮ :**

**ಶ್ರೀ ದೇವಕೀಸುತ ಗೋವಿಂದ ವಾಸುದೇವ ಜಗತ್ಪತೇ ।**
**ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಃ"**

ಮೂರು ಬಾರಿ ಜಪಿಸಿ ಪ್ರಾಣಾಯಾಮ ಮಾಡಬೇಕು.

**ಋಷ್ಯಾದಿಸ್ಮರಣೆ :**

ಅಸ್ಯ ಶ್ರೀ ಸಂತಾನಗೋಪಾಲಮಂತ್ರಸ್ಯ ಶ್ರೀ ನಾರದಋಷಿಃ (ತಲೆಯನ್ನು ಮುಟ್ಟಿಕೊಳ್ಳಬೇಕು) ಅನುಷ್ಟುಪ್ ಛಂದಃ । (ವಾಗೀಂದ್ರಿಯವನ್ನು ಮುಟ್ಟಿಕೊಳ್ಳ ಬೇಕು) ಶ್ರೀಕೃಷ್ಣೋ ದೇವತಾ । (ಹೃದಯವನ್ನು ಮುಟ್ಟಿಕೊಳ್ಳಬೇಕು) ಪುತ್ರಾರ್ಥೇ ಜಪೇ ವಿನಿಯೋಗಃ ।

**ಅಂಗನ್ಯಾಸ :**

ದೇವಕೀಸುತ ಗೋವಿಂದ ಹೃದಯಾಯ ನಮಃ । (ಹೃದಯವನ್ನು ಮುಟ್ಟಿಕೊಳ್ಳುವುದು) ವಾಸುದೇವ ಜಗತ್ಪತೇ ಶಿರಸೇ ಸ್ವಾಹಾ (ತಲೆಯನ್ನು ಮುಟ್ಟಿಕೊಳ್ಳಬೇಕು) 'ದೇಹಿ ಮೇ ತನಯಂ ಕೃಷ್ಣ' ಶಿಖಾಯೈ ವಷಟ್

(ಜುಟ್ಟನ್ನು ಮುಟ್ಟಿಕೊಳ್ಳಬೇಕು) ತ್ವಾಮಹಂ ಶರಣಂ ಗತಃ ಕವಚಾಯ ಹುಮ್ (ಸ್ವಸ್ತಿಕಾಕಾರದಲ್ಲಿ ತೋಳುಗಳನ್ನು ಮುಟ್ಟಿಕೊಳ್ಳಬೇಕು) ದೇವಕೀಸುತ ಗೋವಿಂದ ವಾಸುದೇವ ಜಗತ್ಪತೇ । ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಃ ಅಸ್ತ್ರಾಯ ಫಟ್ । (ತಲೆಯ ಸುತ್ತ ಚಿಟಿಕೆ ಹಾಕಿ ದಿಗ್ಬಂದನ ಮಾಡಿಕೊಳ್ಳಬೇಕು)

**ಧ್ಯಾನ :**

**ಶಂಖಚಕ್ರಗದಾಪದ್ಮಂ ಧಾರಯಂತಂ ಜನಾರ್ದನಮ್ ।**
**ಅಂಕೇ ಶಯಾನಂ ದೇವಕ್ಯಾಃ ಸೂತಿಕಾಮಂದಿರೇ ಶುಭೇ ।**
**ಏವಂರೂಪಂ ಸದಾ ಕೃಷ್ಣಂ ಸುತಾರ್ಥಂ ಭಾವಯೇತ್ ಸುಧೀಃ ॥** 1
**ಸಂತಾನಫಲಪ್ರಾಪ್ತ್ಯರ್ಥಂ ಪತ್ಯಂತರ್ಗತ ಶ್ರೀಮಧ್ವಾಂತರ್ಗತ**
**ಶ್ರೀ ಸಂತಾನಗೋಪಾಲ ಪ್ರೇರಣಯಾ ಶ್ರೀ ಸಂತಾನಗೋಪಾಲಕೃಷ್ಣಪ್ರೀತ್ಯರ್ಥಂ**
**ಶ್ರೀ ಸಂತಾನಗೋಪಾಲ ಮಂತ್ರ ಜಪಾಖ್ಯಂ ಕರ್ಮ ಕರಿಷ್ಯೇ ॥**

**ಮೂಲಮಂತ್ರ :**

**'ಶ್ರೀ ದೇವಕೀಸುತ ಗೋವಿಂದ ವಾಸುದೇವ ಜಗತ್ಪತೇ ।**
**ದೇಹಿ ಮೇ ತನಯಂ ಕೃಷ್ಣ ತ್ವಾಮಹಂ ಶರಣಂ ಗತಃ ॥**

[ಈ ಮಂತ್ರವನ್ನು ಸಾಧ್ಯವಾದಷ್ಟು ಜಪಿಸಿ, ಹತ್ತು ಮಂತ್ರಗಳಿಗೆ ಒಂದರಂತೆ ಅರ್ಘ್ಯವನ್ನು ನೀಡಬೇಕು. ಹಿಂದಿನಂತೆಯೇ ಧ್ಯಾನ, ಅಂಗನ್ಯಾಸ, ಋಷಿ, ಛಂದಸ್ಸು, ದೇವತೆಗಳ ಸ್ಮರಣೆ ಹಾಗೂ ಮೂರು ಬಾರಿ ಪ್ರಾಣಾಯಾಮ ಇವುಗಳನ್ನು ನಡೆಸಬೇಕು.]

ಅನೇನ ಶ್ರೀ ಸಂತಾನ ಗೋಪಾಲಕೃಷ್ಣ ಮಹಾಮಂತ್ರಜಪತರ್ಪಣಾಖ್ಯಕರ್ಮಣಾ ಶ್ರೀಮಧ್ವಾಂತರ್ಗತ ಶ್ರೀ ಗೋಪಾಲಕೃಷ್ಣಃ ಪ್ರೀಯತಾಮ್ ।

ಶ್ರೀಕೃಷ್ಣಾರ್ಪಣಮಸ್ತು

---

1. **ಮಂಗಳಮಯವಾದ ಪ್ರಸೂತಿ ಕೋಣೆಯಲ್ಲಿ ಶಂಖ, ಚಕ್ರ, ಗದಾ ಪದ್ಮಗಳನ್ನು ಧರಿಸಿಕೊಂಡು ದೇವಕಿಯ ತೊಡೆಯಲ್ಲಿ ಪವಡಿಸಿರುವ ಶ್ರೀಕೃಷ್ಣ ಪರಮಾತ್ಮನನ್ನು ಸಂತಾನ ಪ್ರಾಪ್ತಿಗಾಗಿ ವಿವೇಕಿಯಾದವನು ಸರ್ವದಾ ಚಿಂತಿಸಬೇಕು.**

ಪರಿಶಿಷ್ಟ : ೮

# ವೈದಿಕ ವಾಙ್ಮಯದಲ್ಲಿ ಸ್ತ್ರೀಯ ಸ್ಥಾನಮಾನಗಳನ್ನು ಗುರುತಿಸಿಕೊಡುವುದರಲ್ಲಿ ಶ್ರೀ ಮಧ್ವರ ಕೊಡುಗೆ

ಮೇಲ್ನೋಟಕ್ಕೆ ವೈದಿಕವಾಙ್ಮಯದಲ್ಲಿ ಸ್ತ್ರೀಯನ್ನು ಕೆಟ್ಟ ಭಾವನೆಯಿಂದ ಪರಿಗಣಿಸಿರುವಂತೆ ಕಂಡರೆ ಆಶ್ಚರ್ಯವಿಲ್ಲ. ವೈರಾಗ್ಯದ ಪ್ರಸ್ತಾವ ಬಂದಾಕ್ಷಣ ಆದರ ಸಾಧನೆಗೆ ಸ್ತ್ರೀಯು ಮಹಾ ಬಾಧಕಳೆಂದು ಎಚ್ಚರಿಸಿ ಆಕೆಯನ್ನು ಆದಷ್ಟು ದೂರೀಕರಿಸಬೇಕೆಂದು ಶಾಸ್ತ್ರದಲ್ಲಿ ಅಲ್ಲಲ್ಲಿ ಪ್ರತಿಪಾದಿಸಿರುವಂತೆ ಕಂಡು ಬರುವುದು ಹಾಗೂ ಸ್ತ್ರೀಜನ್ಮ ಪಾಪಪ್ರಯುಕ್ತವಾಗಿ ಪ್ರಾಪ್ತವಾದುದು – ಎಂದು ಭಾವನೆ ಮೂಡುವಂತೆ ನಿರೂಪಿಸಿರುವುದು – ಈ ಎರಡು ಪ್ರಮುಖ ಕಾರಣಗಳಿಂದಾಗಿ ವೈದಿಕವಾಙ್ಮಯ ಸ್ತ್ರೀಯ ಬಗ್ಗೆ ತಾತ್ಸಾರ ಭಾವನೆ ತಾಳಿರುವಂತೆ ಅನಿಸುವುದು.

## ಶ್ರೀ ಮಧ್ವಾಚಾರ್ಯರಿಂದ ಸ್ಪಷ್ಟೀಕರಣ :

ಈ ಎರಡು ಕಾರಣಗಳನ್ನೂ ಪ್ರಬಲವಾಗಿ ಪ್ರಮಾಣಪೂರ್ವಕವಾಗಿ ಅಲ್ಲಗಳೆದು ಸ್ತ್ರೀಯ ಕುರಿತು ವೈದಿಕ ವಾಙ್ಮಯದ ಆಂತರ್ಯವನ್ನು ಸ್ಪಷ್ಟೀಕರಿಸಿರುವ ಕೀರ್ತಿ ಮುಖ್ಯವಾಗಿ ಶ್ರೀ ಮಧ್ವಾಚಾರ್ಯರಿಗೆ ಸಲ್ಲಬೇಕಾಗಿದೆ.

ಅವರು ತಮ್ಮ ಸರ್ವಮೂಲದ ಭಾಗವತ ತಾತ್ಪರ್ಯ ನಿರ್ಣಯ, ಮಹಾ ಭಾರತ ತಾತ್ಪರ್ಯ ನಿರ್ಣಯ, ಗೀತಾ ತಾತ್ಪರ್ಯ ಮುಂತಾದ ಗ್ರಂಥಗಳಲ್ಲಿ ಆಪಾತತಃ ಸ್ತ್ರೀಯ ಬಗ್ಗೆ ದೋಷಾರೋಪ ನಡೆಸುತ್ತಿರುವಂತೆ ಕಾಣುವ ವೈದಿಕ ವಾಙ್ಮಯದ ನಿಜವಾದ ಅಭಿಪ್ರಾಯವನ್ನು ಸಮರ್ಥಿಸಿರುವರು.

ಅಲ್ಲದೆ ಸ್ತ್ರೀಯ ವ್ಯಕ್ತಿತ್ವದ ಬಗ್ಗೆ, ಆಕೆಯ ಸಾಧನೆಯ ಬಗ್ಗೆ ಮಹತ್ವ ಪೂರ್ಣಗಳಾದ ವಿಚಾರಗಳನ್ನು ಮಂಡಿಸಿರುವರು.

## ವೈರಾಗ್ಯ ಸಾಧನೆಗೆ ಸ್ವಸ್ತ್ರೀ ಬಾಧಕಳಲ್ಲ :

ಸ್ತ್ರೀಯನ್ನು ವಿಷಯಪದಾರ್ಥಗಳಲ್ಲಿ ಪ್ರಮುಖಳನ್ನಾಗಿ ಪರಿಗಣಿಸಿ ಆಕೆಯ ಸಹವಾಸವನ್ನು ಮಾಡಬಾರದೆಂದು ಎಚ್ಚರಿಸಿರುವ ಶಾಸ್ತ್ರದ ಮಾತುಗಳಿಗೆ ಕೆಟ್ಟ ಸ್ತ್ರೀಯರ ಅಥವಾ ಪರಸ್ತ್ರೀಯರ ಸಹವಾಸಾದಿಗಳನ್ನು ಮಾಡಬಾರದೆಂಬುವುದರಲ್ಲಿ ತಾತ್ಪರ್ಯವೇ ಹೊರತು ತನ್ನ ಪತ್ನಿಯ ಜೊತೆಗೆ ಸಹವಾಸ ನಡೆಸಬಾರದೆಂಬುದರಲ್ಲಿ ಅಭಿಪ್ರಾಯವಿಲ್ಲ – ಎಂದು ಶ್ರೀ ಮಧ್ವಾಚಾರ್ಯರು ಅಲ್ಲಲ್ಲಿ ಪ್ರಮಾಣ ಪೂರ್ವಕವಾಗಿ ಪ್ರತಿಪಾದಿಸಿದ್ದಿದೆ. ಅಥವಾ ಭಗವಂತನ ವಿಷಯದಲ್ಲಿಯ ಅನ್ಯಥಾ

ಬುದ್ಧಿಯೇ ಸ್ತ್ರೀ, ಯೋಷಿತ್, ಪ್ರಮದಾ — ಮುಂತಾದ ಸ್ತ್ರೀವಾಚಕಶಬ್ದಗಳಿಂದ ಉಲ್ಲೇಖಿಸಲ್ಪಡುತ್ತಿದ್ದು ಅವರ ಸಂಗಾದಿಗಳನ್ನು ನಡೆಸಬಾರದೆಂದು ಎಚ್ಚರಿಸುವುದರಲ್ಲಿ ಶಾಸ್ತ್ರಕ್ಕೆ ತಾತ್ಪರ್ಯ ಎಂದು ಶ್ರೀ ಮಧ್ವರು ಸಮರ್ಥಿಸಿರುವರು.

**ಕಪಿಲೋಪದೇಶದ ಅಂತರ್ಯ :**

ಭಾಗವತದ ಕಪಿಲೋಪದೇಶದಲ್ಲಿ ಯೋಗಸಾಧಕನು ಎಂದೂ ಸ್ತ್ರೀಸಂಗವನ್ನೇ ಮಾಡಬಾರದು—'ಸಂಗಂ ನ ಕುರ್ಯಾತ್ ಪ್ರಮದಾಸು ಜಾತು ಯೋಗಸ್ಯ ಪಾರಂ ಪರಮಾರುರುಕ್ಷುಃ' (ಭಾಗ. 3-32-39) – ಎಂದು ಬಂದಿರುವ ಮಾತಿನ ಅಭಿಪ್ರಾಯ ದುಷ್ಟ ಸ್ತ್ರೀಯರ ಸಂಗ ಮಾಡಬಾರದೆಂಬುದಾಗಿಯೇ ಹೊರತು ಒಳ್ಳೆಯ ಸ್ತ್ರೀಯ ಸಂಗವನ್ನೂ ಮಾಡಬಾರದೆಂಬುದಾಗಿ ಅಲ್ಲ. ಯಾಕೆಂದರೆ ಸತ್ಪುರುಷರ ಸಂಗದಂತೆ ಸತ್‌ಸ್ತ್ರೀಯರ ಸಂಗವೂ ಸಾಧನೆಗೆ ಪೋಷಕವೇ ಆಗುವುದೆಂದು 'ವಾರಾಹ'ದ ಮೂಲಕ ನಿರ್ಣಯಿಸಲಾಗಿದೆ—

**"ಸತ್ಪುಂಸು ಚ ತಥಾ ಸ್ತ್ರೀಷು ನ ಸಂಗೋ ದೋಷವಾನ್ಭವೇತ್ ।**
**ಯಥಾಯೋಗ್ಯೋ ಗುಣಾಯೈವ ದೋಷಕೃದ್ ದುಷ್ಟಜಂತುಷು"**

**ಋಷಭೋಪದೇಶದ ಆಶಯ :**

ಭಾಗವತದ ಋಷಭೋಪದೇಶದಲ್ಲಿ ಸ್ತ್ರೀಪುರುಷರು ಒಟ್ಟಾಗಿರುವುದು ಅವರ ಪಾಲಿಗೆ ಹೃದಯಗ್ರಂಥಿಯಂತೆ – ಪುಂಸಃ ಸ್ತ್ರಿಯಾ ಮಿಥುನೀಭಾವ ಏಷ ತಯೋರ್ಮಿಥೋ ಹೃದಯಗ್ರಂಥಿಮಾಹುಃ – (ಭಾಗ. 5-5-8) ಎಂದು ಹೇಳಲಾದ ಮಾತು ಎಲ್ಲರ ಪಾಲಿಗೂ ಅನ್ವಯಿಸುವಂತಹದಲ್ಲ. ಬ್ರಹ್ಮಾದಿ ದೇವತೆಗಳೂ, ಯಾಜ್ಞವಲ್ಕ್ಯಾದಿ ಋಷಿಗಳೂ ಸ್ತ್ರೀಯರ ನೆರವಿನಿಂದ ಬಿಡುಗಡೆ ಹೊಂದುವುದೂ ಇದೆ. ಆದ್ದರಿಂದ ಸ್ತ್ರೀಸಂಗ ಬಂಧಕವೆನ್ನುವುದು ಕೆಲವರ ಪಾಲಿಗಷ್ಟೇ – ಎಂಬುದಾಗಿ 'ಸತ್ಯ ಸಂಹಿತೆ'ಯ ಮೂಲಕ ನಿರ್ಣಯಿಸಲಾಗಿದೆ—

**"ಬ್ರಹ್ಮಾದ್ಯಾ ಯಾಜ್ಞವಲ್ಕ್ಯಾದ್ಯಾ ಮುಚ್ಯಂತೇ ಸ್ತ್ರೀಸಹಾಯಿನಃ ।**
**ಬದ್ಧ್ಯಂತೇ ಕೇಚನ್ಯೈತೇಷಾಂ ವಿಶೇಷಂ ಚ ವಿದೋ ವಿದುಃ ।**

**ಶ್ರೀಕೃಷ್ಣನ ಅಭಿಪ್ರಾಯ :**

ಸೂರ್ಯಗ್ರಹಣದ ಸಂದರ್ಭದಲ್ಲಿ ಸಮಂತ ಪಂಚಕ ಕ್ಷೇತ್ರದಲ್ಲಿ ಸೇರಿದ್ದ ಜ್ಞಾನಿಗಳ ಎದುರು ಶ್ರೀಕೃಷ್ಣ ಪರಮಾತ್ಮನು ಪತ್ನ್ಯಾದಿಗಳಲ್ಲಿ ತನ್ನವರೆಂಬ ಭಾವನೆಯನ್ನು ತಾಳುವವನು ನರಪಶು '...ಸ್ವಧೀಃ ಕಳತ್ರಾದಿಷು...ಸ ಏವ ಗೋಖರಃ' (ಭಾಗ. 10-71-13) ಎಂದು ನಿಂದಿಸಿರುವುದರ ಅಭಿಪ್ರಾಯ ಕೆಟ್ಟ

ಪತ್ನ್ಯಾದಿಗಳಲ್ಲಿ ತನ್ನವರೆಂಬ ಭಾವನೆಯನ್ನು ತಾಳಬಾರದೆಂಬುದಾಗಿಯೇ ಹೊರತು ಪತ್ನ್ಯಾದಿಗಳಲ್ಲಿ ಆತ್ಮೀಯತೆಯನ್ನು ತಂದುಕೊಳ್ಳಬಾರದೆಂಬುದಾಗಿ ಅಲ್ಲ ಎಂದು 'ಸ್ಕಾಂದ'ದ ಮೂಲಕ ಸ್ಪಷ್ಟೀಕರಿಸಲಾಗಿದೆ—

**ಅಸದ್ಭಾರ್ಯಾದಿಷು ಸ್ವೀಯದರ್ಶನಂ ಚೈವಮಾದಿಕಮ್ ।**
**ಭೇದಜ್ಞಾನಮಿತಿ ಪ್ರೋಕ್ತಂ....."**

**ಉದ್ಧವ ಗೀತೆಯ ಸಂದೇಶ :**

ಭಾಗವತದ ಉದ್ಧವಗೀತೆಯಲ್ಲಿ (11-8-7) ಸ್ತ್ರೀಯನ್ನು 'ದೇವಮಾಯೆ' —ಎಂದು ಕರೆದು ಇಂದ್ರಿಯ ನಿಗ್ರಹವಿಲ್ಲದವನು ಅಂತಹ ಸ್ತ್ರೀಯ ಹಾವಭಾವ ಗಳಿಂದ ಪ್ರಲೋಭಿತನಾಗಿ ಪತಂಗ ಬೆಂಕಿಯಲ್ಲಿ ಬಿದ್ದು ಸಾಯುವಂತೆ ಅಂಧಂತಮ ಸ್ಸಲ್ಲಿ ಪತಿತನಾಗುವನು—

**"ದೃಷ್ಟ್ವಾ ಸ್ತ್ರಿಯಂ ದೇವಮಾಯಾಂ ತದ್ಭಾವೈರಜಿತೇಂದ್ರಿಯಃ ।**
**ಪ್ರಲೋಭಿತಃ ಪತತ್ಯಂಧೇ ತಮಸ್ಯಗ್ನೌ ಪತಂಗವತ್"**

—ಎಂಬ ಮಾತಿನ ಅಂತರ್ಯ ಪರಸ್ತ್ರೀಯನ್ನು ಬಯಸಬಾರದೆಂದು. ಪರ ಸ್ತ್ರೀಯನ್ನು ಕಾಮಿಸುವವನು ಆ ಸ್ತ್ರೀ ತನಗಿಂತ ಉತ್ತಮ ಯೋಗ್ಯತೆ ವ್ಯಕ್ತಿಗೆ ಸೇರಿದವಳಾದರೆ ಆಕೆಯ ಕಾಮನೆಯಿಂದ ಅವನು ಅಂಧಂತಮಸ್ಸಲ್ಲಿ ಬೀಳಬೇಕಾಗು ವುದು; ತನಗೆ ಸಮಾನ ಯೋಗ್ಯತೆಯ ವ್ಯಕ್ತಿಗೆ ಸೇರಿದವಳಾಗಿದ್ದರೆ ಆಕೆಯ ಕಾಮನೆಯಿಂದ ಅವನು ನರಕವನ್ನು ಅನುಭವಿಸಬೇಕಾಗುವುದು; ತನಗಿಂತ ಕನಿಷ್ಠ ಯೋಗ್ಯತೆಯ ವ್ಯಕ್ತಿಗೆ ಸೇರಿದವಳಾದರೆ ಅವಳ ಕಾಮನೆಯಿಂದ ಅವನು ಐಹಿಕ ವಾಗಿ ದುಃಖವನ್ನು ಅನುಭವಿಸಬೇಕಾಗುವುದು — ಎಂದು 'ಧರ್ಮಸಂಹಿತೆ'ಯ ಮೂಲಕ ವಿವರಿಸಿರುವರು.

**ಮಹತಾಂ ವನಿತಾಕಾಮಃ ಪತತ್ಯಂಧೇ ತಮಸ್ಯಲಮ್ ।**
**ಅನ್ಯತ್ರ ನಿರಯಂ ಯಾತಿ ದುಃಖವಾನ್ ಸ್ಯಾತ್ ವಿಪರ್ಯಯೇ ॥**

ಭಾಗವತದ ಉದ್ಧವಗೀತೆಯಲ್ಲಿಯೇ (11-14-29, 30) ಮತ್ತೊಂದು ಮಾತು ಬಂದಿದೆ —

**"ಸ್ತ್ರೀಸಂಗಸಂಗಿನಾಂ ಸಂಗಂ ತ್ಯಕ್ತ್ವಾ ದೂರತ ಆತ್ಮವಾನ್ ।**
**ಕ್ಷೇಮೇ ವಿವಿಕ್ತ ಆಸೀನಶ್ಚಿಂತಯೇನ್ಮಾಮತಂದ್ರಿತಃ ।**
**ನ ತಥಾಽಸ್ಯ ಭವೇತ್ ಕ್ಲೇಶೋ ಬಂಧಶ್ಚಾನ್ಯಪ್ರಸಂಗತಃ ।**
**ಯೋಷಿತ್ ಸಂಗಾತ್ ಯಥಾ ಪುಂಸೋ ಯಥಾ ತತ್ಸಂಗಿಸಂಗತಃ"**

ಇದಕ್ಕೆ ಮೇಲ್ನೋಟಕ್ಕೆ ಕಾಣುವ ಅರ್ಥ — ಪುರುಷನಿಗೆ ಸ್ತ್ರೀಯ ಸಂಗ ದಿಂದಾಗಲೀ, ಸ್ತ್ರೀಸಂಗಿಗಳ ಸಂಗದಿಂದಾಗಲೀ ಎಷ್ಟು ಕ್ಲೇಶ, ಬಂಧನಗಳು

ಉಂಟಾಗುವವೋ ಅಷ್ಟು ಇನ್ನಾವುದರ ಸಂಗದಿಂದಲೂ ಉಂಟಾಗಲಾರದು. ಆದ್ದರಿಂದ ಇಂದ್ರಿಯನಿಗ್ರಹವುಳ್ಳವನು ಸ್ತ್ರೀಸಂಗವನ್ನಷ್ಟೇ ಅಲ್ಲ, ಸ್ತ್ರೀ ಸಂಗಿಗಳ ಸಂಗವನ್ನೂ ದೂರದಿಂದಲೇ ತ್ಯಜಿಸಿ ಏಕಾಂತ ಪ್ರದೇಶದಲ್ಲಿ ನನ್ನನ್ನು ಚಿಂತಿಸುತ್ತಿರಬೇಕು—ಎಂದು ಕೃಷ್ಣನ ಮಾತು.

ಈ ಮಾತಿನ ಅಭಿಪ್ರಾಯ ಸ್ತ್ರೀಯರ ಸಂಗವನ್ನೇ ಮಾಡಬಾರದೆಂಬುದಾಗಿ ಅಲ್ಲ. ಪರಮಾತ್ಮನ ವಿಷಯದಲ್ಲಿ ಅನ್ಯಥಾ ಬುದ್ಧಿ ಅಂದರೆ ಅವನು ಅಲ್ಪಗುಣ ಉಳ್ಳವನು ಇತ್ಯಾದಿ ತಪ್ಪು ತಿಳುವಳಿಕೆ 'ಸ್ತ್ರೀ' – ಎನಿಸಿದ್ದು ಅದರ ಸಂಗವನ್ನೂ, ಸಂಗಿಗಳ ಸಂಗವನ್ನೂ ನಡೆಸಬಾರದೆಂದು ಈ ಮಾತಿನಲ್ಲಿ ತಿಳಿಸಲಾಗಿದೆ – ಎಂದು 'ಧರ್ಮವಿವೇಕ'ದ ಮೂಲಕ ವ್ಯಾಖ್ಯಾನಿಸಿದ್ದರೆ, ಪರಸ್ತ್ರೀ ಸಂಗವನ್ನು ನಡೆಸಬಾರದೆಂದು ಇಲ್ಲಿ ತಿಳಿಸಲಾಗಿದೆ – ಎಂದು 'ಧರ್ಮತತ್ತ್ವ'ದ ಮೂಲಕ ವ್ಯಾಖ್ಯಾನಿಸಲಾಗಿದೆ.

'ಧರ್ಮವಿವೇಕ' ಹೀಗಿದೆ –

**ಕೇಶವೇ ತ್ವನ್ಯಥಾಬುದ್ಧಿಃ ಸ್ಯೈವ ಸ್ತ್ರೀ ಸಂಪ್ರಕೀರ್ತಿತಾ ।**
**ತ್ರಿಕಾಲದುಃಖದತ್ವೇನ ಪುಂಸಾಂ ಸಹ ನಿವಾಸನಾತ್ ।**
**ಜುಷ್ಟತ್ವಾದ್ ಯೋಷಿದಿತ್ಯುಕ್ತಾ ವನನಾದ್ ವನಿತೇತಿ ಚ ।**
**ಪ್ರಮಾದಕರಣತ್ವಾತ್ತು ಪ್ರಮದೇತಿ ಚ ಗೀಯತೇ ।**
**ತ್ಯಜೇತ್ ತತ್ಸಂಗಿನಾಂ ಸಂಗಂ ಬುಭೂಷುಃ ಪುರುಷಃ ಸದಾ ।**
**ನ ತಾದೃಶಃ ಕ್ವಚಿದ್ ದೋಷಃ ಪುರುಷಸ್ಯಾಸುಖಾವಹಃ ॥**

ಶ್ರೀ ಕೇಶವನ ವಿಷಯದಲ್ಲಿ ಅನ್ಯಥಾಬುದ್ಧಿ ಸ್ತ್ರೀ ಎನಿಸಿದೆ. ಮೂರು ಕಾಲದಲ್ಲಿಯೂ ಪುರುಷರ ಸಹವಾಸಿವಾಗಿದ್ದು ದುಃಖಪ್ರದವಾಗಿರುವುದರಿಂದ ಅನ್ಯಥಾಜ್ಞಾನ 'ಯೋಷಿತ್' 'ವನಿತಾ' ಎನಿಸುವುದು. ಪ್ರಮಾದಕ್ಕೆ ಕಾರಣವಾಗಿರುವುದರಿಂದ 'ಪ್ರಮದಾ' ಎಂದೂ ಕರೆಯಲ್ಪಡುವುದು. ಹೀಗೆ 'ಸ್ತ್ರೀ' 'ಯೋಷಿತ್' 'ವನಿತಾ' 'ಪ್ರಮದಾ' – ಎಂಬ ಸ್ತ್ರೀವಾಚಕ ಶಬ್ದಗಳಿಂದ ಕರೆಸಿಕೊಳ್ಳಲ್ಪಡುವ ಅನ್ಯಥಾಜ್ಞಾನದ ಸಂಗವನ್ನು ಅದರ ಸಂಗಿಗಳ ಸಂಗವನ್ನೂ ಜಿಜ್ಞಾಸು ತ್ಯಜಿಸಬೇಕು. ಪುರುಷನಿಗೆ ಅನ್ಯಥಾಜ್ಞಾನದ ಸಂಗ, ಅದರ ಸಂಗಿಗಳ ಸಂಗ ಮಹಾದೋಷಕಾರಕ. ಅತಿದುಃಖಪ್ರದ.

ಆ ಸಂದರ್ಭದಲ್ಲಿ ಉಲ್ಲೇಖಿಸಲಾದ 'ಧರ್ಮತತ್ತ್ವ' ಹೀಗಿದೆ–

**ಪರದಾರದೃಶಿಃ ಪ್ರೋಕ್ತಾ ಕ್ಷುದ್ರಪಾತಕಸಂಜ್ಞಿತಾ ।**
**ಉಪಪಾತಕಂ ತದ್ಗತಿಶ್ಚ ವರ್ಣಬಾಹ್ಯೇಷು ಪಾತಕಮ್ ।**
**ಮಹಾಪಾತಕಸಂಜ್ಞಂ ತು ಪಿತ್ರಾದೇರ್ದಾರಧರ್ಷಣಮ್ ।**

ದಾರದೃಷ್ಟಿಃ ಸ್ವೋತ್ತಮಾನಾಂ ಮಾನುಷಾಣಾಂ ಸ್ವಭಾವತಃ
ಸುಮಹಾಪಾತಕಂ ಪ್ರೋಕ್ತಂ ತದ್ಗತಿಃ ಸುಮಹತ್ ತತಃ ।
ಋಷಿದಾರೇಷು ಮನಸೋ ಗತಿರೇವ ತತೋಽಧಿಕಾ ।
ದೇವದಾರಾಭಿಕಾಮಾನಾಂ ಸಂಗಿಸಂಗಸ್ತತೋಽಧಿಕಃ ।
ಕಿಮು ವಿಷ್ಣೋಸ್ತತೋ ಯೋಷಿತ್ಸಂಗಸ್ಯ ವ್ಯತ್ಯವಸ್ಥಿತೇಃ ।
ನ ಸಮಂ ಪಾತಕಂ ಕ್ವಾಪಿ ನಹಿ ಸ್ವಸ್ತ್ರ್ಯಭಿಕಾಮತಃ ।
ಅವಜ್ಞಾತಾ ಮಾಧವಾದೇಸ್ತಸ್ಮಾತ್ ತಂ ದೂರತಸ್ತ್ಯಜೇತ್ ।

ಪರಪತ್ನಿಯರನ್ನು ತನ್ನ ಭೋಗ್ಯರನ್ನಾಗಿ ಭಾವಿಸುವ ಮಾನಸಸಂಭೋಗ ಕ್ಷುದ್ರಪಾತಕ ಎನಿಸಿದರೆ, ಪರಪತ್ನಿಯರ ದೈಹಿಕಸಂಭೋಗ ಉಪಪಾತಕವೆನಿಸಿದೆ. ವರ್ಣಬಾಹ್ಯರಾದ ಪರಪತ್ನಿಯರ ಸಂಭೋಗ ಪಾತಕವೆನಿಸಿದೆ. ಪಿತೃ ಮುಂತಾದ ಉತ್ತಮರ ಸ್ತ್ರೀಯರ ಸಂಭೋಗ ಮಹಾಪಾತಕವೆನಿಸುವುದು. ಸ್ವಾಭಾವಿಕವಾಗಿ ಉತ್ತಮರಾದವರ ಪತ್ನಿಯರನ್ನು ಸ್ವಭೋಗ್ಯರನ್ನಾಗಿ ಚಿಂತಿಸುವುದು ಸುಮಹಾ ಪಾತಕವೆನಿಸುವುದು. ಅಂತಹ ಸ್ತ್ರೀಯರನ್ನು ದೈಹಿಕವಾಗಿ ಭೋಗಿಸುವುದು ಸ್ವತಿ ಮಹಾ ಪಾತಕವೆನಿಸುವುದು. ಋಷಿ ಪತ್ನಿಯರನ್ನು ಸ್ವಭೋಗ್ಯರನ್ನಾಗಿ ಚಿಂತಿಸು ವುದು ಸ್ವತಿಮಹತ್‌ಮಹಾಪಾತಕವೆನಿಸುವುದು. ದೇವತೆಗಳ ಪತ್ನಿಯರನ್ನು ಬಯಸುವುದು ಸ್ವತಿಮಹತ್ತರ ಮಹಾಪಾತಕ ಎನಿಸುವುದು. ಇನ್ನು ಶ್ರೀ ವಿಷ್ಣು ವಿನ ಪತ್ನಿಯರನ್ನು ಕೆಟ್ಟದೃಷ್ಟಿಯಿಂದ ಕಾಣುವುದು ಸ್ವತಿಮಹತ್ತಮಮಹಾ ಪಾತಕ ಎನಿಸುವುದು. ಹೀಗೆ ಸ್ತ್ರೀಸಂಗವು ಕ್ಷುದ್ರಪಾತಕದಿಂದ ಪ್ರಾರಂಭಿಸಿ ಸುಮಹತ್ತಮ ಪಾತಕದವರೆಗೆ ಬಹುವಿಧವಾಗಿ ಇದ್ದು ಪಾತಕಗಳ ಎಲ್ಲ ವಿಧಗಳೂ ಅದರಲ್ಲಿ ಸೇರಿಕೊಂಡಿರುವುದರಿಂದ ಅದಕ್ಕೆ ಸಮವಾದ ಪಾತಕ ಮತ್ತೊಂದಿಲ್ಲ.

ಹೀಗೆ ಭಾಗವತದಲ್ಲಿ ನಿಂದಿಸಲಾದ ಸ್ತ್ರೀಸಂಗ ಎಂದರೆ ಪರಸ್ತ್ರೀ ಸಂಗವೇ ಹೊರತು ತನ್ನ ಪತ್ನಿಯ ಸಂಗವಲ್ಲ. ತನ್ನ ಪತ್ನಿಯ ಸಂಗ ಎಂದೂ ಪಾತಕ ವೆನಿಸುವುದಿಲ್ಲ. ಪರಸ್ತ್ರೀಯರನ್ನು ಕಾಮಿಸುವವನು ಪರೋಕ್ಷವಾಗಿ ಭಗವಂತನನ್ನೇ ತಿರಸ್ಕರಿಸಿದಂತಾಗುವುದು. ಆದ್ದರಿಂದ ಅಂತಹ ಕಾಮಿಯನ್ನು ದೂರದಿಂದಲೇ ತ್ಯಜಿಸಬೇಕು.

ಈ ರೀತಿಯಾಗಿ 'ಸ್ತ್ರೀಸಂಗಸಂಗಿನಾಂ ಸಂಗಂ....' —ಎಂಬ ಶ್ರೀಕೃಷ್ಣನ ಮಾತಿಗೆ ಪರಮಾತ್ಮನ ವಿಷಯದಲ್ಲಿ ಅನ್ಯಥಾ ಬುದ್ಧಿಯನ್ನು ಹೊಂದಿರುವವರ ಸಹವಾಸ ಮಾಡಬಾರದೆಂಬುದಾಗಿಯಾಗಲೀ, ಪರಸ್ತ್ರೀಸಂಗ ಮಾಡುವವರ ಸಹ ವಾಸವನ್ನು ಮಾಡಬಾರದೆಂಬುದಾಗಲೀ ಅಭಿಪ್ರಾಯ.

**ಶಾಸ್ತ್ರವಿಧಿಗನುಗುಣವಾಗಿ ಸ್ವೀಕಾರಾರ್ಹಳು :**

ಪರೀಕ್ಷಿದ್ರಾಜ ಕಲಿಗೆ ದ್ಯೂತವೇ ಮುಂತಾದ ಸ್ತ್ರೀಸಹಿತವಾಗಿ ಐದು ಸ್ಥಳಗಳನ್ನು ನೀಡಿದನೆಂದು ತಿಳಿಸುತ್ತಿರುವ ಉಗ್ರಶ್ರವಸ್‌ಸೂತರು, ಆ ಐದು ಸ್ಥಾನಗಳನ್ನು ಜಿಜ್ಞಾಸು ಸೇವಿಸಲೇಬಾರದು—'ಅಥೈತಾನಿ ನ ಸೇವೇತ ಬುಭೂಷುಃ ಪುರುಷಃ ಕ್ವಚಿತ್' — (ಭಾಗ. 1-17-41) ಎಂದು ನೀಡಿರುವ ಸಂದೇಶಕ್ಕೆ ಶಾಸ್ತ್ರವಿಧಾನವನ್ನು ಉಲ್ಲಂಘಿಸಿ ಅವುಗಳನ್ನು ಸೇವಿಸಬಾರದು—ವಿಹಿತಾತಿರೇಕೇಣ ನ ಸೇವೇತ—ಎಂದು ನಿರ್ಣಯವನ್ನು ನೀಡಿರುವ ಶ್ರೀಮದಾಚಾರ್ಯರು ಆ ಐದು ಸ್ಥಾನಗಳಲ್ಲೊಂದಾಗಿ ಸೇರಿಕೊಂಡಿದ್ದ ಸ್ತ್ರೀಯನ್ನು ಶಾಸ್ತ್ರವಿಧಿಗನುಗುಣವಾಗಿ ಸೇವಿಸಬಹುದೆಂದು ಸೂಚಿಸಿರುವರು.

ಅಂತೂ ಸ್ತ್ರೀ ಶಾಸ್ತ್ರವಿಧಿಗನುಗುಣವಾಗಿ ಸ್ವೀಕೃತಳಾದಾಗ ಸಾಧಕನ ಸಾಧನೆಗೆ ಏನೂ ಬಾಧಕಳೆನಿಸಳು. ಆದ್ದರಿಂದ ಶಾಸ್ತ್ರ ಅಲ್ಲಲ್ಲಿ ನೀಡಿರುವ ಎಚ್ಚರಿಕೆ ಕೆಟ್ಟ ಸ್ತ್ರೀಯರ ಹಾಗೂ ಪರಸ್ತ್ರೀಯರ ಕುರಿತಾದದ್ದು—ಎಂದು ಶ್ರೀ ಮಧ್ವಾಚಾರ್ಯರು ಸಮರ್ಥವಾಗಿ ಪ್ರತಿಪಾದಿಸಿರುವರು.

**ಎಲ್ಲ ಸ್ತ್ರೀಜನ್ಮ ಪಾಪಪ್ರಯುಕ್ತವಾದುದಲ್ಲ :**

ಪಾಪಪುಣ್ಯಗಳೇ ಸ್ತ್ರೀ ಪುರುಷ ಪ್ರಭೇದಕ್ಕೆ ಕಾರಣ; ಪಾಪಪ್ರಯುಕ್ತ ಸ್ತ್ರೀಯಾಗಿ ಹುಟ್ಟಿದ್ದರೆ ಪುಣ್ಯಪ್ರಯುಕ್ತ ಪುರುಷರಾಗಿ ಹುಟ್ಟುವುದು—ಎಂದು ಎಂದು ಸಾಮಾನ್ಯವಾಗಿ ನಂಬಲಾಗುವುದು.

ಆದರೆ ಮಧ್ವಾಚಾರ್ಯರು ಇದನ್ನು ಒಪ್ಪುವುದಿಲ್ಲ. ಅವರ ಪ್ರಕಾರ ಸ್ತ್ರೀ ಪುರುಷ ಪ್ರಭೇದ ಜೀವಸ್ವರೂಪದಲ್ಲಿಯೇ ಇರುವಂತಹದ್ದು. ಪೈಂಗಿಶ್ರುತಿಯ ಮೂಲಕ ಮೋಕ್ಷದ ಚಿತ್ರಣವನ್ನು ನೀಡ ಹೊರಟ ಅವರು – ಯಾರು ಅನಾದಿ ಕಾಲದಿಂದ ಬ್ರಹ್ಮಾದಿಗಳ ಪತ್ನಿಯರಾಗಿರುವರೋ ಅಂತಹವರು ಮೋಕ್ಷದಲ್ಲಿಯೂ ಬ್ರಹ್ಮಾದಿಗಳ ಪತ್ನಿಯರೇ ಆಗಿರುವರು [1] –ಎಂದು ಪ್ರತಿಪಾದಿಸುವ ಮೂಲಕ ಅನಾದಿಕಾಲದಿಂದಲೂ ಇರುವಂತಹ, ಮೋಕ್ಷಾವಸ್ಥೆಯಲ್ಲಿಯೂ ಇರುವಂತಹ ಸ್ತ್ರೀತ್ವವು ಜೀವರ ಸ್ವರೂಪದಲ್ಲಿಯೇ ಇರುವ ಧರ್ಮವೆಂದು ಸೂಚಿಸಿರುವರು.

---

1. **ಅನಾದಿಕಾಲಾದಾರಭ್ಯ ಯಾ ಭಾರ್ಯಾಸ್ತಾಃ ಸದೈವ ತು ।**
   **ಬ್ರಹ್ಮಾದೀನಾಂ ವಿಮುಕ್ತೌ ಚ ಭಾರ್ಯಾಃ ಸ್ಯುರ್ನಿಯಮಾತ್ ಸದಾ ।**
   **—ಪೈಂಗಿಶ್ರುತಿ (ಬೃ. ಉ. ಭಾ. 3-5-4)**

ಪುರುಷರು ಕೆಲವೊಮ್ಮೆ ಶಾಪಪ್ರಯುಕ್ತವಾಗಿಯೋ, ಕಾಮಪ್ರಯುಕ್ತ ವಾಗಿಯೋ ಸ್ತ್ರೀತ್ವವನ್ನು ಹೊಂದುವಂತಹದ್ದಿದೆ. ಪುನಃ ತಮ್ಮ ನೈಜವಾದ ಪುರುಷ ರೂಪವನ್ನೇ ಹೊಂದುವರು. ಆದರೆ ಸ್ತ್ರೀಯರು ಎಂದೂ ಯಾವ ಕಾರಣದಿಂದಲೂ ಪುರುಷತ್ವವನ್ನು ಹೊಂದುವಂತಹದ್ದಿಲ್ಲ -- ಎಂಬ ಶ್ರೀ ಮಧ್ವಾ ಚಾರ್ಯರ ಮಾತಿನಿಂದಲೂ [1] ಸ್ತ್ರೀತ್ವ ಹಾಗೂ ಪುರುಷತ್ವ ಜೀವನ ಸ್ವರೂಪದ ಧರ್ಮ ಎಂದು ಸೂಚಿತವಾಗುವುದು.

**ಗೀತಾಚಾರ್ಯನ ಅಂತರ್ಯ :**

ಆದರೆ ಶ್ರೀಕೃಷ್ಣನ ಮಾತೊಂದರಲ್ಲಿ ಸ್ತ್ರೀಯರು ಪಾಪಪ್ರಯುಕ್ತವಾಗಿ ಜನ್ಮ ಪಡೆಯುವವರೆಂದು ತಿಳಿಸಿರುವಂತೆ ಮೇಲ್ನೋಟಕ್ಕೆ ಕಾಣಿಸುವುದು. ಆ ಮಾತು ಹೀಗಿದೆ–

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ।**
**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ॥** —ಗೀ. 9-33

ನನ್ನನ್ನು ಆಶ್ರಯಿಸಿ 'ಪಾಪಯೋನಿ'ಗಳಾದ ಸ್ತ್ರೀಯರು, ವೈಶ್ಯರು, ಶೂದ್ರರು ಕೂಡಾ ಸದ್ಗತಿಯನ್ನು ಪಡೆಯುವರೆಂದ ಮೇಲೆ ಪುಣ್ಯಶಾಲಿಗಳಾದ ಬ್ರಾಹ್ಮಣರು, ರಾಜರ್ಷಿಗಳು ನನ್ನನ್ನು ಆಶ್ರಯಿಸಿ ಸದ್ಗತಿಯನ್ನು ಹೊಂದುವ ರೆಂಬುದು ಸುತರಾಂ ಸಿದ್ಧವಾದುದು" – ಎಂಬ ಶ್ರೀಕೃಷ್ಣನ ಈ ಮಾತಿನಲ್ಲಿ ಸ್ತ್ರೀ ಯರೆಲ್ಲರೂ 'ಪಾಪಯೋನಿ'ಗಳೆಂದು ಪರಿಗಣಿಸಿರುವಂತೆ ಕಾಣಿಸುವುದು.

ಆದರೆ ಶ್ರೀ ಮಧ್ವಾಚಾರ್ಯರು 'ಭವಿಷ್ಯತ್ಪರ್ವ'ದ [2] ಮೂಲಕ ಈ ಮಾತಿನ ನೈಜ ಆಶಯವನ್ನು ಹೀಗೆ ಸ್ಪಷ್ಟೀಕರಿಸಿದ್ದಾರೆ -- ಯಾರು ಸ್ವಾಭಾವಿಕವಾಗಿ ಸ್ತ್ರೀ ಯರು ಅಥವಾ ಶೂದ್ರಾದಿಗಳು ಆಗಿರದೆ ಪಾಪಾದಿಪ್ರಯುಕ್ತವಾಗಿ ಸ್ತ್ರೀಯರೋ, ವೈಶ್ಯರೋ, ಶೂದ್ರರೋ, ಬ್ರಾಹ್ಮಣರೋ ಆಗಿರುವರೋ ಅಂತಹವರೂ ಪರಮಾತ್ಮನನ್ನು ಆಶ್ರಯಿಸಿ ಪರಗತಿಯನ್ನು ಪಡೆಯುವರು. ಹೀಗಿರುವಾಗ

---

1. **ಪುಂಸಾಂ ಸ್ತ್ರೀತ್ವಂ ಭವೇತ್ಕ್ವಾಪಿ ತಥಾಪ್ಯಂತೇ ಪುಮಾನ್ ಭವೇತ್ ।**
**ಸ್ತ್ರೀಣಾಂ ನೈವ ಹಿ ಪುಂಸ್ತ್ವಂ ಸ್ಯಾದ್ ಬಲವತ್ಕಾರಣೈರಪಿ ।**
**—ಮ.ಭಾರ.ತಾ.ನಿ. 11-113**

2. **ಯಾಂತಿ ಸ್ತ್ರೀತ್ವಂ ಪುಮಾಂಸೋಽಪಿ ಪಾಪತಃ ಕಾಮತೋಽಪಿ ವಾ ।**
**ನ ಸ್ತ್ರಿಯೋ ಯಾಂತಿ ಪುಂಸ್ತ್ವಂ ತು ಸ್ವಭಾವಾದೇವ ಯಾಃ ಸ್ತ್ರಿಯಃ ।**
**—ಭವಿಷತ್‌ಪರ್ವ (ಗೀ.ತಾ. 9–33)**

ಪುಣ್ಯಾತ್ಮರಾಗಿದ್ದು ಸ್ವಾಭಾವಿಕವಾಗಿ ಸ್ತ್ರೀಯರರೋ, ವೈಶ್ಯರೋ, ಬ್ರಾಹ್ಮಣರೋ ಆಗಿರುವವರೋ ಅಂತಹವರು ಪರಮಾತ್ಮನ ಆಶ್ರಯದಿಂದ ಪರಗತಿಯನ್ನು ಪಡೆಯುವವರೆಂಬುದು ಸುತರಾಂ ಸಿದ್ಧವಾಗುವುದು.

ಗೀತೆಯಲ್ಲಿ ಸ್ತ್ರೀಯಾದಿಗಳಿಗೆ 'ಪಾಪಯೋನಯಃ' ಎಂಬುದಾಗಿ, ಬ್ರಾಹ್ಮಣ, ರಾಜರ್ಷಿ ಮುಂತಾದವರಿಗೆ 'ಪುಣ್ಯಾಃ' ಎಂಬುದಾಗಿ ವಿಶೇಷಣವನ್ನು ನೀಡಿರುವುದೇ ಹೊರತು 'ಸ್ವರೂಪಸಂಕೀರ್ತನೆ' ಮಾಡಿರುವಂತಹದ್ದಲ್ಲ. [1] ಅಂದರೆ ಎಲ್ಲ ಸ್ತ್ರೀಯಾದಿಗಳು ಪಾಪಯೋನಿಗಳೆಂದೂ, ಬ್ರಾಹ್ಮಣಾದಿಗಳು ಪುಣ್ಯಶಾಲಿಗಳೆಂದೂ ಹೇಳಿರುವುದಲ್ಲ; ಮತ್ತೆ ಪಾಪ ಪ್ರಯುಕ್ತ ಜನ್ಮಪಡೆದ ಸ್ತ್ರೀಯಾದಿಗಳನ್ನು ಉಲ್ಲೇಖಿಸಿ ಅಂತಹವರಿಗೇ ಸದ್ಗತಿಯಾಗುತ್ತೆ ಅಂದ ಮೇಲೆ ಪುಣ್ಯಾತ್ಮರಾದ ಸ್ವಾಭಾವಿಕವಾಗಿ ಬ್ರಾಹ್ಮಣಾದಿಗಳಾಗಿದ್ದವರಿಗೆ ಸದ್ಗತಿ ಆಗಿಯೇ ತೀರುವುದೆಂದು ಹೇಳಿರುವುದು.

ಹೀಗೆ ಗೀತೆಯ ಆಶಯವನ್ನು ಸ್ಪಷ್ಟೀಕರಿಸಿರುವ ಶ್ರೀಮದಾಚಾರ್ಯರು ಈ ಸಂದರ್ಭದಲ್ಲಿ ಉಲ್ಲೇಖಿಸಿರುವ "ಭವಿಷ್ಯತ್ಪರ್ವ"ದಲ್ಲಿ ಜೀವಾತ್ಮರ ಸ್ವರೂಪದಲ್ಲಿಯೇ ಸ್ತ್ರೀ-ಪುರುಷ ಪ್ರಭೇದ ಸ್ವಾಭಾವಿಕವಾಗಿಯೇ ಇರುವುದೆಂದೂ ಸುದ್ಯುಮ್ನ ಮುಂತಾದ ಪುರುಷರು ಶಾಪಪ್ರಯುಕ್ತವಾಗಿ, ಅಗ್ನಿಪುತ್ರರು ಕಾಮಪ್ರಯುಕ್ತವಾಗಿ ಸ್ತ್ರೀತ್ವವನ್ನು ಹೊಂದಿರುವರೆಂದೂ, ಪಾಪ ಅಥವಾ ಕಾಮದಿಂದ ಹುಟ್ಟಿದ ಸ್ತ್ರೀಯರಿಗಿಂತಲೂ ಸ್ವಾಭಾವಿಕವಾಗಿ ಸ್ತ್ರೀಯರಾಗಿರುವವರೇ ಶ್ರೇಷ್ಠರೆಂದೂ ತಿಳಿಸಲಾಗಿದೆ. [2]

ಈ ರೀತಿಯಾಗಿ ಕೆಲವರಿಗೆ ಸ್ತ್ರೀಜನ್ಮ ಪಾಪಪ್ರಯುಕ್ತವಾಗಿ ಸಂಭವಿಸಿದ್ದಿರಬಹುದಾದರೂ ಎಲ್ಲ ಸ್ತ್ರೀಯರಿಗೂ ಸ್ತ್ರೀಜನ್ಮ ಪಾಪಪ್ರಯುಕ್ತವಾಗಿ ಸಂಭವಿಸುವಂತಹದ್ದೆಂದು ಶಾಸ್ತ್ರದ ಆಶಯವಲ್ಲ – ಎಂದು ಸ್ಪಷ್ಟೀಕರಿಸಿರುವುದರಲ್ಲಿ ಶ್ರೀಮಧ್ವಾಚಾರ್ಯರದ್ದು ಮಹತ್ತ್ವದ ಕೊಡುಗೆ.

**ಪುರುಷರ ವ್ಯಕ್ತಿತ್ವದಲ್ಲಿ, ಸಾಧನೆಯಲ್ಲಿ ಸ್ತ್ರೀಯರ ಪಾತ್ರ :**

ಹೀಗೆ ಶಾಸ್ತ್ರದಲ್ಲಿ ಸ್ತ್ರೀಯನ್ನು ತಿರಸ್ಕಾರಭಾವದಿಂದ ಪರಿಗಣಿಸಲಿಲ್ಲ--ಎಂದು ಪ್ರತಿಪಾದಿಸಿರುವ ಶ್ರೀಮದಾಚಾರ್ಯರು ಏಕಚಕ್ರಾ ನಗರದಲ್ಲಿ ಬಕಾಸುರನ ಪೀಡೆ

---

1. 'ಪಾಪಯೋನಯಃ' 'ಪುಣ್ಯಾಃ' ಇತಿ ವಿಶೇಷಣಮ್ ।
2. 'ಯಾಂತಿ ಸ್ತ್ರೀತ್ವಂ ಪುಮಾಂಸೋಽಪಿ ಪಾಪತಃ ಕಾಮತೋಽಪಿ ವಾ।........ವರಾಃ ಪಾಪಜಾತಾಭ್ಯೋ ನಿಜಸತ್ ಸ್ತ್ರಿಯಃ ॥

—ಭವಿಷ್ಯತ್ಪರ್ವ (ಗೀತಾ 9–33)

ಗೊಳಗಾಗಿದ್ದ ಬ್ರಾಹ್ಮಣನ ಮಾತಲ್ಲಿ ಕನ್ಯೆಯ ಮಹತ್ತ್ವವನ್ನು ಹೀಗೆ ಸಂಗ್ರಹಿಸಿರುವರು--

**"ಕನ್ಯೋದಿತಾ ಬಲ ಕುಲದ್ವಯತಾರಿಣೀತಿ ಜಾಯಾ**
**ಸಖೇತಿ ವಚನಂ ಶ್ರುತಿಗಂ...."** —**ಮ. ಭಾರ. ಶಾ. ನಿ. 19-76**

ಕನ್ಯೆಯು ತಾನು ಹುಟ್ಟಿದ ತಂದೆಯ ಕುಲಕ್ಕೂ, ಪತಿಯ ಕುಲಕ್ಕೂ ತಾರಕಳೆನಿಸಿರುವವಳು. ಪತ್ನಿಯಾಗಿ, ಆತ್ಮೀಯ ಗೆಳತಿಯಾಗಿ ಉಪಕಾರಕಳಾಗಿರುವವಳು. 'ಸಖಾ ಹ ಜಾಯಾ ಕೃಪಣಂ ಹ ದುಹಿತಾ ...' —ಎಂಬ ಶ್ರುತಿಯು ಕನ್ಯೆಯ ಈ ಬಗೆಯ ಮಹತ್ತ್ವವನ್ನು ಸಾರುತ್ತಿದೆ.

ದ್ರೌಪದಿಯ ವಸ್ತ್ರಾಪಹರಣಕ್ಕೆ ತೊಡಗಿದ ಸಂದರ್ಭದಲ್ಲಿ ಶ್ರೀ ಭೀಮಸೇನ ಅರ್ಜುನನಿಗೆ ಹೇಳುವ ಮಾತಲ್ಲಿ ಭಾರ್ಯೆಯ ವಿಚಾರವೊಂದನ್ನು ಹೀಗೆ ಪ್ರಸ್ತಾಪಿಸಲಾಗಿದೆ—

**'ದುಷ್ಟದಾರೋ ನ ಚಾಪ್ನೋತಿ ಲೋಕಾನರ್ಥೋ ಹಿ ದೂಷಿತಃ ॥'**
**—ಮ. ಭಾ. ಶಾ. ನಿ. 21-373**

ಪತ್ನಿಯು ಪತಿಯ ಅರ್ಧಾಂಗಿ ಎನಿಸುವವಳಾದುದರಿಂದ ಅಂತಹ ಪತ್ನಿಯು ದೂಷಿತಳಾದಳೆಂದರೆ ಅವಳ ಪತಿಯು ಉತ್ತಮ ಲೋಕಗಳನ್ನು ಪಡೆಯಲು ಸಾಧ್ಯವಿಲ್ಲ — ಎಂದು ತಿಳಿಸುವ ಈ ಮಾತಿನಿಂದ ಪತ್ನಿಯು ಪತಿಯ ಅರ್ಧಾಂಗ ಎನಿಸುವಷ್ಟು ಅವನ ಜೀವನದಲ್ಲಿ ಪ್ರಮುಖ ಪಾತ್ರ ವಹಿಸುವಳೆಂದು ಅವನ ಉತ್ತಮ ಲೋಕ ಪ್ರಾಪ್ತಿಯಲ್ಲಿ ಅವಳ ಪಾತ್ರವೂ ಇದೆ — ಎಂದು ಸೂಚಿಸಲ್ಪಡುವ ಮೂಲಕ ಪುರುಷರ ವ್ಯಕ್ತಿತ್ವದಲ್ಲಿ ಸಾಧನೆಯಲ್ಲಿ ಸ್ತ್ರೀಯ ಮಹತ್ವವನ್ನು ಸಾರಲಾಗಿದೆ.

## ಪತಿ ದೇವರ ಪ್ರತೀಕವಷ್ಟೇ:

ಪಾತಿವ್ರತ್ಯ ಸ್ತ್ರೀಯರ ಪ್ರಮುಖ ಧರ್ಮ. ಈ ಧರ್ಮದಲ್ಲಿ ಪತಿಯೇ ಕೇಂದ್ರಬಿಂದು. ಪತಿಯನ್ನು ಯಾವ ರೀತಿಯಾಗಿ ಪರಿಗಣಿಸಬೇಕು? ಸಾಮಾನ್ಯವಾಗಿ ಪತಿವ್ರತೆಯರಿಗೆ 'ಪತಿಯೇ ದೇವತೆ; ಪತಿಗಿಂತ ಬೇರೆ ದೇವರೇ ಇಲ್ಲ' -- ಮುಂತಾದ ಮಾತುಗಳು ಶಾಸ್ತ್ರದಲ್ಲಿ ಕಾಣಿಸುವವು. ಇವುಗಳ ಅಂತರ್ಯವನ್ನು ತಿಳಿಯದೆ, ಮೇಲ್ನೋಟಕ್ಕೆ ತಿಳಿದುಬರುವಂತೆ ಪತಿವ್ರತೆಯರು ತಮ್ಮ ಪಾಲಿಗೆ ತಮ್ಮ ಪತಿಯೇ ದೇವರು; ದೇವರಿಗೆ ಸಲ್ಲಿಸಬೇಕಾದ ಗೌರವವನ್ನೆಲ್ಲ ಪತಿಗೇ ಸಲ್ಲಿಸಿದರಾಯಿತು -- ಎಂಬ ಭ್ರಮೆಗೊಳಗಾದಲ್ಲಿ ನಾಸ್ತಿಕ್ಯಭಾವನೆಗೊಳಗಾದಂತಾದೀತು! ದೇವರು ಇಲ್ಲ ಎಂದಲ್ಲ; ಪತಿಯ ರೂಪದಲ್ಲಿ ದೇವರು ಇದ್ದಾನೆ —

ಎಂದು ಭ್ರಮಿಸಿದಲ್ಲಿ ದೋಷ ದೂಷಿತನಾದ ಪತಿಯನ್ನು ದೇವರೆಂದು ಭಾವಿಸಿದ ಪ್ರಯುಕ್ತ ಅದ್ವೈತಭಾವನೆಗೊಳಗಾದಂತಾದೀತು! ಹೀಗಾಗಬಾರದು. ಪತಿಯಾದವನು ಪತ್ನಿಯರ ಪಾಲಿಗೆ ದೇವರ ಪ್ರತಿಮೆಯಂತೆ ಇರುವವನೇ ಹೊರತು ಅವನೇ ದೇವರು ಅಲ್ಲ. ಇದನ್ನು ಶ್ರೀ ಮಧ್ವಾಚಾರ್ಯರು ಭಾಗವತದ ನಾರದರ ಮಾತೊಂದನ್ನು ವ್ಯಾಖ್ಯಾನಿಸುತ್ತ ಸ್ಪಷ್ಟೀಕರಿಸಿರುವರು.

ಭಾಗವತದ (7-11-29) ಮಾತು ಹೀಗಿದೆ—

**'ಯಾ ಪತಿಂ ಹರಿಭಾವೇನ ಭಜೇಚ್ಛ್ರೀರಿವ ತತ್ಪರಾ ।**
**ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ'**

ಪರಮಾತ್ಮನಲ್ಲಿಯೇ ಆಸಕ್ತಳಾಗಿರುವ ಶ್ರೀದೇವಿಯಂತೆ ಯಾವ ಸ್ತ್ರೀಯು ತನ್ನ ಪತಿಯನ್ನು 'ಹರಿಭಾವ'ದಿಂದ ಸೇವಿಸುವಳೋ, ಆಕೆ ಹರಿಯ ವಿಶೇಷ ಸನ್ನಿಧಾನಕ್ಕೆ ಪಾತ್ರನಾದ ತನ್ನ ಪತಿಯ ಜೊತೆ ವೈಕುಂಠ ಲೋಕದಲ್ಲಿ ಲಕ್ಷ್ಮೀದೇವಿ ಹರಿಯ ಜೊತೆಗೆ ಹೇಗೋ ಹಾಗೆ ಆನಂದಪಡುವಳು — ಎಂದು ತಿಳಿಸುವ ಈ ಮಾತಲ್ಲಿ ಸ್ತ್ರೀಯು ತನ್ನ ಪತಿಯಲ್ಲಿ 'ಹರಿಭಾವ'ವನ್ನು ತಾಳಬೇಕೆಂದು ಹೇಳಿರುವುದರ ಅಂತರ್ಯ ತನ್ನ ಪತಿಯಲ್ಲಿ ಶ್ರೀಹರಿಯು ಸನ್ನಿಹಿತನಾಗಿರುವನು; ಆದ್ದರಿಂದ ಶ್ರೀಹರಿಯ ಆರಾಧನೆಯಲ್ಲಿ ತನ್ನ ಪತಿ ತನಗೆ ಪ್ರತಿಮೆಯಂತೆ ಇರುವವನು-- ಎಂದು ಭಾವಿಸಬೇಕು.

**'ಹರಿರಸ್ಮಿನ್ ಸ್ಥಿತ ಇತಿ ಸ್ತ್ರೀಣಾಂ ಭರ್ತರಿ ಭಾವನಾ ।**
**.......ಹರಿಭಾವ ಉದೀರಿತಃ'**

ಶ್ರೀ ಮಧ್ವರ ಈ ನಿರ್ಣಯದಿಂದಾಗಿ ಸ್ತ್ರೀಯರ ಪಾತಿವ್ರತ್ಯ ಅನುಷ್ಠಾನದಲ್ಲಿ ಮಹತ್ತ್ವದ ಕೊಡುಗೆ ಸಂದಂತಾಗಿದೆ.

ಈ ರೀತಿಯಾಗಿ ಸ್ತ್ರೀಯರ ಸ್ಥಾನಮಾನಗಳನ್ನು ಗುರುತಿಸಿಕೊಡುವಿಕೆಯಲ್ಲಿ, ಪುರುಷರ ಸಾಧನೆಯಲ್ಲಿ ಅವರ ಪಾತ್ರವನ್ನು ನಿಷ್ಕರ್ಷಿಸಿರುವಲ್ಲಿ, ಅವರ ಪಾತಿವ್ರತ್ಯಾನುಷ್ಠಾನಕ್ಕೆ ಸರಿಯಾದ ಅನುಸಂಧಾನವನ್ನು ಒದಗಿಸಿಕೊಡುವುದರಲ್ಲಿ ಮಹತ್ತ್ವಪೂರ್ಣವಾದ ಕೊಡುಗೆಯನ್ನು ಸಲ್ಲಿಸಿರುವ ಶ್ರೀ ಮಧ್ವಾಚಾರ್ಯರ ಬಗ್ಗೆ ಸ್ತ್ರೀ ಸಮಾಜ ವಿಶೇಷವಾಗಿ ಕೃತಜ್ಞವಾಗಿರಬೇಕು.



**ಪರಿಶಿಷ್ಟ: ೯**

# ಸ್ತ್ರೀಯರ ಆಶೌಚವಿಚಾರ

'ಸಹಧರ್ಮಿಣೀ' ಎನಿಸುವ ಪತ್ನಿಗೆ ಅವಳ ಪತಿಯ ಪಾಲಿಗೆ ಪ್ರಾಪ್ತವಾಗುವ ಆಶೌಚಗಳೆಲ್ಲ ಇರುವವು.[1] ತನ್ನ ತವರಿನ ಗೋತ್ರವನ್ನು ತ್ಯಜಿಸಿ, ಪತಿಯ ಗೋತ್ರವನ್ನು ಪ್ರವೇಶಿಸುವ ಸ್ತ್ರೀ ತನ್ನ ತಂದೆಯ ಮನೆಯ ಪಾಲು, ಆಶೌಚ ಹಾಗೂ ಜ್ಞಾತಿತ್ವ — ಇವುಗಳನ್ನು ಕಳೆದುಕೊಂಡು ಪತಿಯ ಕುಲಕ್ಕೆ ಸಂಬಂಧಿಸುವ ಆಶೌಚಾದಿಗಳಿಗೆ ಒಳಗಾಗುವಳು.[2] ಪಿಂಡ, ಗೋತ್ರ ಹಾಗೂ ಆಶೌಚಗಳ ವಿಷಯದಲ್ಲಿ ಸ್ತ್ರೀ ತನ್ನ ಪತಿಯ ಸಮಾನತೆಯನ್ನು ಹೊಂದುವಳು.[3]

ಪ್ರೇತಕರ್ಮಗಳನ್ನು ಉಪದೇಶಿಸುವಿಕೆ, ಆ ಕರ್ಮಗಳನ್ನು ನಡೆಸುವವರ ಜೊತೆ ಕರ್ಮಗಳ ಅನುಷ್ಠಾನದಲ್ಲಿ ಸೇರುವಿಕೆ, ಆಶೌಚವುಳ್ಳವರ ಜೊತೆ ವಾಸ ಮಾಡುವುದು -- ಇವು ಆಶೌಚವುಳ್ಳವರ ಸಂಪರ್ಕ ಎನಿಸಿದ್ದು,[4] ಇಂತಹ ಸಂಪರ್ಕ ಕ್ಕೊಳಗಾದವರು ಆಶೌಚವುಳ್ಳವರಿಗೆ ಎಷ್ಟು ದಿನಗಳ ಅವಧಿ ಆಶೌಚ ಇರುವುದೋ ಅಷ್ಟು ದಿನಗಳಲ್ಲೂ ಆಶೌಚಕ್ಕೆ ಒಳಗಾಗುವರು.[5] ಹೀಗೆ ಆಶೌಚವುಳ್ಳವರ ಸಂಪರ್ಕದಿಂದಾಗಿ ಬರುವ ಆಶೌಚ ಅವರ ಪತ್ನಿಯರಿಗೆ ತಗಲುವುದಿಲ್ಲ.[6]

ಪುರುಷನು ತನ್ನ ಮಾವನನ್ನು ಅಥವಾ ಅತ್ತೆಯನ್ನು (ಪತ್ನಿಯ ತಂದೆ ಅಥವಾ ತಾಯಿ) ಕಳೆದುಕೊಂಡಾಗ ಮೂರು ದಿನಗಳ ಆಶೌಚಕ್ಕೆ ಒಳಗಾಗುವನು (ಅವನ ಪತ್ನಿ ಬದುಕಿದ್ದಳೆಂದರಷ್ಟೇ ಮೂರು ದಿನಗಳ ಆಶೌಚ. ಪತ್ನಿ ಮೃತ ಳಾಗಿದ್ದರೆ ಬರೇ ಒಂದು ದಿನದ ಆಶೌಚ [7]) ಇದಕ್ಕನುಗುಣವಾಗಿ ಅವನ ಪತ್ನಿಯೂ

---

1. "ಭರ್ತುರ್ಯದ್ಯದಘಂ ತತ್ತತ್ಪತ್ನ್ಯಾಃ ಸ್ಯಾತ್...." —ಶತಶ್ಲೋಕೀ-10
2. ಗೋತ್ರಾಂತರಪ್ರವಿಷ್ಟಾನಾಂ ದಾಯ ಆಶೌಚಮೇವ ಚ ।
   ಜ್ಞಾತಿತ್ವಂ ಚ ನಿವರ್ತಂತೇ ತತ್ಕುಲೇ ಸರ್ವಮಿಷ್ಯತೇ । —ಮರೀಚಿಃ
3. ಏಕತ್ವಂ ಸಾ ಗತಾ ಭರ್ತುಃ ಪಿಂಡೇ ಗೋತ್ರೇಽಥ ಸೂತಕೇ —ಸ್ಮೃತಿಚಂದ್ರಿಕಾ
4. ಪ್ರೇತಕರ್ಮೋಪದೇಶಿತ್ವಂ ತತ್ಕೃತಿಶ್ಲಾಘಿಭಿಃ ಸಹ ।
   ಸಹವಾಸಃ ಸಪೀತ್ಯಾದಿ ಸಂಪರ್ಕಾರ್ಥಂ ಪ್ರಚಕ್ಷತೇ
5. ಅಘಿ ಸಂಪರ್ಕತೋಽಶೌಚಂ ಭವೇತ್ತದ್ದಿನಸಂಖ್ಯಕಮ್ —ಶತಶ್ಲೋಕೀ-11
6. ನ ತದ್ದ್ರವ್ಯಕ್ರಿಯಾಸ್ತ್ರೀಣಾಂ ಸಾಂಪರ್ಕಿಕಮಘಂ ಭವೇತ್ । —ಶತಶ್ಲೋಕೀ-11
7. ಆಶೌಚಂ ತು ತ್ರಿರಾತ್ರಂ ಸ್ಯಾಚ್ಛ್ವಶ್ರೂಶ್ವಶುರಯೋರ್ಮೃತೌ ।
   ಜೀವಂತ್ಯಾಮೇವ ಭಾರ್ಯಾಯಾಂ ಮೃತಾಯಾಂ ದಿವಸಾಚ್ಛುಚಿಃ । —ವ್ಯಾಸಃ

ತನ್ನ ತಂದೆ ಅಥವಾ ತಾಯಿಯನ್ನು ಕಳೆದುಕೊಂಡಾಗ ಬರೇ ಮೂರು ದಿನಗಳ ಆಶೌಚಕ್ಕೆ ಒಳಗಾಗುವಳು.

ಆದರೆ ಸ್ತ್ರೀ ತನ್ನ ತಂದೆಯನ್ನೋ ತಾಯಿಯನ್ನೋ ಕಳಕೊಂಡಾಗ ಆ ಪ್ರಯುಕ್ತ ತನ್ನ ಸಹೋದರರು ನಡೆಸುವ ಪ್ರೇತ ಕರ್ಮಗಳಲ್ಲಿ ಪಾಲ್ಗೊಳ್ಳುವ ಳೆಂದರೆ, ಅಥವಾ ಆ ಅವಧಿಯಲ್ಲಿ ಅವರ ಮನೆಯಲ್ಲಿ ಜೊತೆಗೆ ವಾಸಿಸುವಳೆಂದರೆ ಅವರ ಸಂಪರ್ಕಪ್ರಯುಕ್ತವಾಗಿ ಅವರಿಗೆ ಎಷ್ಟು ದಿನಗಳ ಆಶೌಚವಿದೆಯೋ ಅಷ್ಟೇ ದಿನಗಳ ಆಶೌಚ ಆಕೆಯ ಪಾಲಿಗೂ ಸಂಭವಿಸುವುದು. [1]

ಸ್ತ್ರೀ ಹೆಣ್ಣುಮಗುವಿಗೆ ಜನ್ಮವಿತ್ತಾಗ ನಲ್ವತ್ತು ದಿನಗಳ ಆಶೌಚಕ್ಕೆ ಒಳ ಗಾದರೆ, ಗಂಡು ಮಗುವಿಗೆ ಜನ್ಮವಿತ್ತಾಗ ಮೂವತ್ತು ದಿನಗಳ ಆಶೌಚಕ್ಕೆ ಒಳ ಗಾಗುವಳು. [2] ಆಶೌಚದ ಹತ್ತು ದಿನಗಳ ಅವಧಿಯಲ್ಲಿ ಆಕೆಯ ದರ್ಶನ, ವಾಕ್ಯ ಶ್ರವಣಾದಿಗಳನ್ನೂ ನಡೆಸಬಾರದು. ಮುಂದಿನ ಆಶೌಚದ ದಿನಗಳಲ್ಲಿ ಆಕೆಯ ಸ್ಪರ್ಶವಷ್ಟೇ ನಿಷಿದ್ಧ. [3] ಆಕೆಯ ದರ್ಶನಾದಿಗಳನ್ನು ನಡೆಸಬಹುದು. ಈ ಅಭಿಪ್ರಾಯದಲ್ಲೇ ಹತ್ತು ದಿನಗಳಲ್ಲಿ ಆಕೆ ಆಶೌಚದಿಂದ ಪರಿಶುದ್ಧಳಾಗುವಳೆಂಬ ಮಾತುಗಳೂ ಬಂದಿವೆ. [4]

ನಾಲ್ಕು ಮಾಸಗಳೊಳಗೆ ಗರ್ಭನಾಶ ಸಂಭವಿಸಿದರೆ 'ಗರ್ಭಸ್ರಾವ' ಎನಿಸಿ ದರೆ, ಮುಂದೆ ಐದನೇ ಅಥವಾ ಆರನೇ ತಿಂಗಳಲ್ಲಿ ಗರ್ಭನಾಶವಾದರೆ ಅದು 'ಗರ್ಭಪಾತ' ಎನಿಸುವುದು. [5] ಮೂರು ಮಾಸಗಳೊಳಗೆ ಗರ್ಭಸ್ರಾವವಾದರೆ ಸ್ತ್ರೀಗೆ ಮೂರು ದಿನಗಳ ಆಶೌಚ, ಮೂರು ತಿಂಗಳ ಬಳಿಕ ಆರು ತಿಂಗಳ ಒಳಗೆ ಗರ್ಭನಾಶ ಸಂಭವಿಸಿದರೆ, ಗರ್ಭನಾಶ ಎಷ್ಟನೇ ತಿಂಗಳಲ್ಲಿ ನಡೆದಿದೆಯೋ ಅಷ್ಟು

---

1. ಅಭಿಸಂಪರ್ಕತೋಽಶೌಚಂ ಭವೇತ್ತದ್ದಿನ ಸಂಖ್ಯಕಮ್ । —ಶತಶ್ಲೋಕೀ-11

2. ಚತ್ವಾರಿಂಶದ್ದಿನಾನಿ ಸ್ಯುರ್ಜನನ್ಯಾಃ ಸ್ತ್ರೀ ಪ್ರಸೂತಕೇ ।
ತ್ರಿಂಶತ್ ಪುಂಪ್ರಸವೇ ಜ್ಞಾತೇರ್ದಶಾಹಮುಭಯೋರಪಿ ॥ —ಶತಶ್ಲೋಕೀ-27

3. ದಶಾಹಂ ದರ್ಶನಂ ವಾಕ್ಯಂ ಸೂತಿಕಾಯಾಸ್ತ್ಯಜೇತ್ತತಃ ।
ಅಥಾಂತಂ ಸ್ಪರ್ಶಮೇವೇತ್ಥಂ....' —ಶತಶ್ಲೋಕೀ-28

4. ದ್ವಿಜಾತಿಸೂತಿಕಾ ಯಾ ಸ್ಯಾತ್ ಸಾ ದಶಾಹೇತಿ ಶುದ್ಧ್ಯತಿ —ಪಾರಸ್ಕರಃ

○ ಅಜಾಗಾವೋ ಮಹಿಷ್ಯಶ್ಚ ಬ್ರಾಹ್ಮಣೀ ಚ ಪ್ರಸೂತಿಕಾ ।
ದಶರಾತ್ರೇಣ ಶುದ್ಧ್ಯಂತಿ......., —ಸಂವರ್ತಃ

5. ಗರ್ಭನಾಶಶ್ಚತುರ್ಮಾಸೇ ಸ್ರಾವಃ ಪಾತಸ್ತತೋ ದ್ವಯೋಃ —ಶತಶ್ಲೋಕೀ-24

ದಿನಗಳ ಕಾಲ ಆಶೌಚ ಸ್ತ್ರೀಯ ಪಾಲಿಗೆ. ಆರನೇ ತಿಂಗಳ ಬಳಿಕ ಗರ್ಭನಾಶವಾದರೆ ಮಗು ಹುಟ್ಟಿದಾಗ ಹೇಗೋ ಹಾಗೆ ಹತ್ತು ದಿನಗಳ ಆಶೌಚ. [1] ಗರ್ಭಸ್ರಾವಾದಿಗಳ ಪ್ರಸಂಗಗಗಳಲ್ಲಿ ತಂದೆಯಾದವನಿಗೆ ಸ್ನಾನದಿಂದಲೇ ಆಶೌಚದ ಪರಿಹಾರ. [2]

ಹೀಗೆ ಸ್ತ್ರೀಗೆ ತನ್ನ ತಂದೆ ಅಥವಾ ತಾಯಿಯ ಪ್ರೇತಕರ್ಮಗಳಲ್ಲಿ ಸೇರಿಕೊಂಡ ಪ್ರಯುಕ್ತ ಹತ್ತು ದಿನಗಳ ಆಶೌಚ ಬಂದಾಗ, ಮಗುವನ್ನು ಹೆತ್ತಾಗ ನಲ್ವತ್ತು ಅಥವಾ ಮೂವತ್ತು ದಿನಗಳ ಆಶೌಚ ಬಂದಾಗ, ಗರ್ಭಸ್ರಾವಾದಿಗಳ ಸಂದರ್ಭದಲ್ಲಿ ಮೂರು ನಾಲ್ಕು ದಿನಗಳ ಆಶೌಚ ಬಂದಾಗ—ಆ ಪ್ರಯುಕ್ತ ಅವಳ ಪತಿಗೇನೂ ಆಶೌಚದ ಲೇಪವಿಲ್ಲ. [3]

ಈ ರೀತಿಯಾಗಿ ಸ್ತ್ರೀಯರು ತಮಗೆ ವಿಶೇಷವಾಗಿ ಸಂಭವಿಸುವ ಆಶೌಚವನ್ನು ವಿವೇಚಿಸಿಕೊಂಡು ಅದಕ್ಕನುಗುಣವಾಗಿ ನಡೆದುಕೊಳ್ಳಬೇಕು.

**ಪರಿಶಿಷ್ಟ: ೧೦**

# ಪತಿವ್ರತೆ ತನ್ನ ಚಟುವಟಿಕೆಗಳಲ್ಲಿ ಅಳವಡಿಸಿಕೊಳ್ಳಬೇಕಾದ ಅನುಸಂಧಾನ

ಸಾಧಕನು ತನ್ನ ಬದುಕನ್ನು ಭಗವಂತನ ಆರಾಧನೆ ಎಂದು ಭಾವಿಸಬೇಕು. ಬದುಕಿನ ಪ್ರತಿನಿತ್ಯದ ಪ್ರತಿಯೊಂದು ಚಟುವಟಿಕೆಯೂ ಆ ಆರಾಧನೆಯ ಅಂಗವಾಗಿ ನಡೆಯುತ್ತಿದೆ ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು. ಈ ಅನುಸಂಧಾನಕ್ಕೆ ಪುಷ್ಟಿ ದೊರಕುವಂತೆ ಬೆಳಿಗ್ಗೆ ಎದ್ದಾಕ್ಷಣ ಭಗವಂತನಲ್ಲಿ ಹೀಗೆ ನಿವೇದಿಸಿಕೊಳ್ಳಬೇಕು—

**ಪ್ರಾತಃ ಪ್ರಭೃತಿ ಸಾಯಾಂತಂ ಸಾಯಾದಿ ಪ್ರಾತರಂತತಃ ।**
**ಯತ್ಕರೋಮಿ ಜಗನ್ನಾಥ ತದಸ್ತು ತವ ಪೂಜನಮ್ ॥**

---

1. **ತ್ರ್ಯಹಂ ಮಾಸತ್ರಯೇ ಮಾತುರ್ಗರ್ಭಸ್ರಾವೇ ತತಃ ಪರಮ್ ।**
**ಮಾಸತುಲ್ಯಾನ್ಯಹಾನ್ಯೂರ್ಧ್ವಂ ಷಣ್ಮಾಸಾತ್ ಸೂತಿಕಾವಿಧಿಃ । —ಶತಶ್ಲೋಕೀ-26**

2. **ಸ್ರಾವಾದ್ಯೇವ ಪಿತುಃ ಸ್ನಾನಂ....... —ಶತಶ್ಲೋಕೀ-24**

3. **........ನಾಸ್ಯ ಪತ್ಯ್ಯಘಮ್ —ಶತಶ್ಲೋಕೀ-10**

ಹೇ ಜಗನ್ನಾಥ! ಬೆಳಗ್ಗಿನಿಂದ ಸಾಯಂಕಾಲದವರೆಗೆ ಸಾಯಂಕಾಲದಿಂದ ಬೆಳಗ್ಗಿನವರೆಗೆ – ಹೀಗೆ ಸಮಗ್ರ ದಿನದಲ್ಲಿ ನಾನು ಏನೇನನ್ನು ಮಾಡುವೆನೋ ಅದೆಲ್ಲ ನಿನ್ನ ಆರಾಧನೆ ಆಗಲಿ!

ಸ್ನಾನ, ಭೋಜನ, ಶಯನ—ಮುಂತಾದ ದೈನಂದಿನ ಚಟುವಟಿಕೆಗಳನ್ನು ಭಗವದಾರಾಧನೆಯಾಗಿ ನಡೆಸಬೇಕೆಂದರೆ ಯಾವ ಬಗೆಯ ಅನುಸಂಧಾನವಿರಬೇಕೆಂಬುದನ್ನು ಶ್ರೀ ಜಗನ್ನಾಥದಾಸರು ಹೀಗೆ ಸಂಗ್ರಹಿಸಿರುವರು—

**ಗೋಳಕಗಳೇ ರಮಾರಮಣನ ನಿ । ಜಾಲಯಂಗಳನುದಿನದಿ ಸಂಪ್ರ ।**
**ಕ್ಷಾಲನೆಯೆ ಸಮ್ಮಾರ್ಜನವು ಕರಣಗಳೆ ದೀಪಗಳು ॥**
**ಸಾಲುತತ್ತದ್ವಿಷಯಗಳ ಸ।ಮ್ಮೇಳನವೆ ಪರಿಯಂಕ ತತ್ಸು**
**ಖಾಳಿಗೆಯೆ ಸುಪ್ಪತ್ತಿಗಾತ್ಮ ನಿವೇದನವೆ ವಸನ ।**

ಪಾಪಕರ್ಮವು ಪಾದುಕೆಗಳನು । ಲೇಪನವು ಶಾಸ್ತ್ರಾ ಲಾಪನವೆ ಶ್ರೀತುಲಸಿ ಸುಮನೋವೃತ್ತಿಗಳೆ ಸುಮನ ಕೋಪ ಧೂಪವು ಭಕ್ತಿ ಭೂಷಣ । ವ್ಯಾಪಿಸಿದ ಸದ್ಬುದ್ಧಿ ಛತ್ರವು ದೀಪವೇ ಸುಜ್ಞಾನ ಆರಾರ್ತಿಗಳೆ ಗುಣಕಥನ ॥

ಮನವಚನಕಾಯಕ ಪ್ರದಕ್ಷಿಣೆ । ಯನುದಿನದಿ ಸರ್ವತ್ರ ವ್ಯಾಪಕ ವನರುಹೇಕ್ಷಣಗರ್ಪಿಸುತ ಮೊದಸುತಲಿರು ಸತತ ॥ ಅನುಭವಕೆ ತಂದುಕೋ........".

—ವಿಭೂತಿ ಸಂಧಿ–೧೪, ೧೫, ೧೬

ಇಂದ್ರಿಯಗಳಿಗೆ ಆಶ್ರಯಗಳಾದ ಗೋಳಕಗಳೆಲ್ಲ ಇಂದ್ರಿಯಸ್ವಾಮಿಯಾಗಿದ್ದು ಹೃಷೀಕೇಶ ಎನಿಸುವ ಭಗವಂತನಿಗೆ ಆಲಯಗಳು—ನಿವಾಸಸ್ಥಾನಗಳು. ಇಂತಹ ಆಲಯಗಳನ್ನು ತೊಳೆದುಕೊಳ್ಳುವುದೇ ಆಲಯಗಳಲ್ಲಿರುವ ಭಗವಂತನ ಅಭಿಷೇಕ. ಆಲಯಗಳಲ್ಲಿರುವ ಇಂದ್ರಿಯಗಳೇ ಭಗವಂತನಿಗಾಗಿ ಇರುವ ದೀಪಗಳು. ಆ ಇಂದ್ರಿಯಗಳ ಮೂಲಕ ಮತ್ತೆ ಮತ್ತೆ ಸಾಲುಸಾಲಾಗಿ ಅನುಭವಿಸಲಾಗುವ ಆಯಾಯ ವಿಷಯಗಳ ಸಮುದಾಯವೇ ಭಗವಂತನಿಗಾಗಿರುವ ಪರ್ಯಂಕ. ಆ ವಿಷಯಗಳ ಭೋಗದಿಂದ ಉಂಟಾಗುವ ಸುಖದ ಏಳಿಗೆಯೇ ಭಗವಂತನಿಗಾಗಿ ಪರ್ಯಂಕದ ಮೇಲೆ ಹಾಸಲಾದ ಸುಪ್ಪತ್ತಿಗೆ. ಆತ್ಮನಿವೇದನವೇ ಅವನಿಗಾಗಿ ಸಮರ್ಪಿಸುವ ಉಡುಪು. ತಿಳಿದೋ ತಿಳಿಯದೆಯೋ ನಮ್ಮಿಂದ ನಡೆಯುವ ಪಾಪಕರ್ಮಗಳೆಲ್ಲ ಅವನ ಪಾದುಕೆಗಳು. ಸತ್ಪುಣ್ಯ ಅಂದರೆ ನಮ್ಮಿಂದ ನಡೆಯುವ ಒಳ್ಳೆಯ ಕೆಲಸಗಳು ಅವನಿಗಾಗಿ ಸಮರ್ಪಿತವಾಗುವ ಗಂಧಾದಿ ಅನುಲೇಪನ. ನಮ್ಮಿಂದ ನಡೆಯುವ ಶಾಸ್ತ್ರಾಲಾಪನ. ಅವನಿಗಾಗಿ ಸಲ್ಲುವ ಶ್ರೀತುಲಸಿ ನಮ್ಮಲ್ಲಿ ಮೂಡುವ ಒಳ್ಳೆಯ ಮನೋವೃತ್ತಿಗಳು ಅವನಿಗಾಗಿ ಸಲ್ಲುವ ಪುಷ್ಪಗಳು. ನಮ್ಮಲ್ಲಿ ಉಂಟಾಗುವ ಕೋಪ ಭಗವಂತನಿಗಾಗಿ ಸಮರ್ಪಿತವಾಗುವ

ಧೂಪ. ನಮ್ಮಲ್ಲಿ ಉದಯಿಸುವ ಭಗವದ್ಭಕ್ತಿ ಅವನಿಗೆ ಸಲ್ಲುವ ಭೂಷಣ ಅಂದರೆ ಬೇರೆ ಬೇರೆ ಆಭರಣಗಳು. ಬೇರೆ ಬೇರೆ ವಿಷಯಗಳನ್ನು ಗೋಚರಿಸುವ ನಮ್ಮ ಸದ್ಬುದ್ಧಿ ಭಗವಂತನಿಗಾಗಿ ಹಿಡಿದ ಛತ್ರ. ನಾವು ಪಡಕೊಳ್ಳುವ ಒಳ್ಳೆಯ ಜ್ಞಾನ ಅವನಿಗಾಗಿ ಹಚ್ಚಿದ ದೀಪ. ನಾವು ನಡೆಸುವ ಅವನ ಗುಣ ಕಥನ ಅವನಿಗಾಗಿ ಎತ್ತಿದ ಆರತಿಗಳು. ದೈಹಿಕವಾದ, ವಾಚಿಕವಾದ ಹಾಗೂ ಮಾನಸಿಕವಾದ ನಮ್ಮ ಸಂಚಾರ ಅವನಿಗಾಗಿ ತ್ರಿಕರಣಪೂರ್ವಕವಾಗಿ ಸಲ್ಲಿಸುವ ಪ್ರದಕ್ಷಿಣೆ.

ಹೀಗೆ ಪ್ರತಿನಿತ್ಯ ನಡೆಯುವ ನಮ್ಮ ಚಟುವಟಿಕೆಗಳನ್ನು ಭಗವಂತನ ಆರಾಧನೆಯ ಬೇರೆ ಬೇರೆ ಉಪಚಾರಗಳನ್ನಾಗಿ ಅನುಭವಕ್ಕೆ ತಂದುಕೊಂಡು ತಮ್ಮ ಬದುಕನ್ನು ಅವನ ಪೂಜೆಯಾಗಿ ಅವನಿಗೆ ಅರ್ಪಿಸಬೇಕು.

ಹೀಗೆ ದಿನನಿತ್ಯದ ಚಟುವಟಿಕೆಗಳನ್ನು ಭಗವಂತನ ಆರಾಧನೆಯಾಗಿ ಹೇಗೆ ಅನುಸಂಧಾನ ಮಾಡಿಕೊಳ್ಳಬೇಕೆಂಬುದನ್ನು ತೋರಿಸಲಾದ ಈ ಸೂತ್ರವನ್ನು ಸ್ತ್ರೀಯರೂ ತಮ್ಮ ಚಟುವಟಿಕೆಗಳಲ್ಲಿ ಅಳವಡಿಸಿಕೊಳ್ಳಬೇಕು.

### ವಿಶೇಷವಾಗಿ ಸಂಬಂಧಿಸುವ ಚಟುವಟಿಕೆಗಳು :

ಜೊತೆಗೆ ಸ್ತ್ರೀಯರಿಗೆ ವಿಶೇಷವಾಗಿ ಸಂಬಂಧಪಡುವ ಹಣದ ಸಂಗ್ರಹ ಹಾಗೂ ವ್ಯಯ ಮುಂತಾದ ಚಟುವಟಿಕೆಗಳಲ್ಲಿ ಭಗವಂತನ ಪಾತ್ರವನ್ನು ವಿಶ್ಲೇಷಿಸಿಕೊಂಡು ಅವನ ಪ್ರೀತಿಗಾಗಿ ನಡೆಸಲ್ಪಡುವ ಅವು ಅವನ ಆರಾಧನೆಯಾಗಿ ಪರ್ಯವಸಾನಗೊಳ್ಳುವಂತೆ ಮಾಡಬೇಕು.

### ೧. ಹಣದ ಸಂಗ್ರಹ ಹಾಗೂ ವ್ಯಯದಲ್ಲಿ :

'ಅರ್ಥಸ್ಯ ಸಂಗ್ರಹೇ ಚೈನಾಂ ವ್ಯಯೇ ಚೈವ ನಿಯೋಜಯೇತ್' ಎಂದು ಮನುಸ್ಮೃತಿಯಲ್ಲಿ (9–11) ಹೇಳಿರುವಂತೆ ಪತಿ ಸಂಪಾದಿಸಿ ತಂದಿರುವ ಹಣವನ್ನು ಸಂಗ್ರಹಿಸಿಡುವ ಹಾಗೂ ವಿನಿಯೋಗಿಸುವ ಹೊಣೆಗಾರಿಕೆ ಗೃಹಿಣಿಗೆ ಸೇರಿದ್ದು.

**ಸ್ತೇಯಂ ಹಿಂಸಾನೃತಂ ದಂಭಃ ಕಾಮಃ ಕ್ರೋಧಃ ಸ್ಮಯೋ ಮದಃ ।**
**ಭೇದೋ ವೈರಮವಿಶ್ವಾಸಃ ಸಂಸ್ಪರ್ಧಾ ವ್ಯಸನಾನಿ ಚ ।**
**ಏತೇ ತ್ರಯೋದಶಾನರ್ಥಾ ಹ್ಯರ್ಥಮೂಲಾ ಮತಾ ನೃಣಾಮ್ ।**

—ಎಂದು ಶ್ರೀಕೃಷ್ಣ ತಿಳಿಸಿರುವಂತೆ (ಭಾಗ. 11–23–18,19) ಕಳ್ಳತನ, ಹಿಂಸೆ, ಸುಳ್ಳು, ಹಮ್ಮು, ಕಾಮ, ಕ್ರೋಧ, ಅಹಂಕಾರ, ಗರ್ವ, ವೈಮನಸ್ಯ, ವೈರ, ಅವಿಶ್ವಾಸ, ಸ್ಪರ್ಧಾಭಾವ, ದುಶ್ಚಟಗಳು ಹೀಗೆ ಹದಿಮೂರು ಅನರ್ಥಗಳು ಹಣದ ಮೂಲಕವಾಗಿ ಸಂಭವಿಸುವವು ಎಂಬುದನ್ನು ವಿವೇಚಿಸಿಕೊಳ್ಳಬೇಕಾದ

ಅವಳು ಹಣದ ದುರುಪಯೋಗ ನಡೆಯದಂತೆ ಅದರ ಸಂಗ್ರಹವನ್ನೂ ಆದರ ಸದುಪಯೋಗ ಆಗುವಂತೆ ಅದರ ವಿನಿಯೋಗವನ್ನೂ ನಡೆಸಬೇಕು.

**'ಧರ್ಮಾಯ ಯಶಸೇಽರ್ಥಾಯ ಕಾಮಾಯ ಸ್ವಜನಾಯ ಚ ।**
**ಪಂಚಧಾ ವಿಭಜನ್ ವಿತ್ತಮಿಹಾಮುತ್ರ ಚ ಮೋದತೇ'** —ಭಾಗ.8-19-37

ಆಯವಾಗಿ ದೊರಕಿದ ಹಣವನ್ನು ಐದು ಪಾಲು ಮಾಡಬೇಕು. ಅವುಗಳಲ್ಲಿ ಒಂದು ಪಾಲು ಧರ್ಮಪುರುಷಾರ್ಥದ ಸಾಧನೆಗೆ ಮುಡಿಪು. ಮತ್ತೊಂದು ಪಾಲು ಯಶಸ್ಸಿನ ಸಂಪಾದನೆಗಾಗಿ. ಇನ್ನೊಂದು ಪಾಲು ಅರ್ಥಪುರುಷಾರ್ಥವನ್ನು ಅಭಿವೃದ್ಧಿಗೊಳಿಸಲು. ಮತ್ತೊಂದು ಪಾಲು ಕಾಮಪುರುಷಾರ್ಥದ ಭೋಗಕ್ಕಾಗಿ. ಇನ್ನೊಂದು ಪಾಲು ತನ್ನವರಿಗಾಗಿ ಅಂದರೆ ಅವರ ಯೋಗಕ್ಷೇಮದ ನಿರ್ವಹಣೆಗಾಗಿ. ಹೀಗೆ ಐದು ವಿಂಗಡನೆ ಮಾಡಿ ತನ್ನ ಆಯದ ಸಂಪತ್ತನ್ನು ವಿನಿಯೋಗಿಸುವವನು ಇಲ್ಲಿ ಹಾಗೂ ಬೇರೆ ಲೋಕಗಳಲ್ಲೂ ಆನಂದ ಪಡುವನು.

ಶುಕ್ರಾಚಾರ್ಯರು ಬಲಿಯ ಎದುರು ಹೇಳಿಕೊಂಡಿರುವ ಧನದ ವಿತರಣೆಯ ಈ ಸೂತ್ರವನ್ನು ಮನೆಯ ಯಜಮಾನನು ಅಳವಡಿಸಿಕೊಳ್ಳುವಂತೆ ಬೇಕಾದ ಸ್ಫೂರ್ತಿಯನ್ನು, ಪ್ರೇರಣೆಯನ್ನು ಗೃಹಿಣಿ ಉಂಟುಮಾಡುತ್ತಿರಬೇಕು.

ಹಣ ಲಕ್ಷ್ಮೀದೇವಿಯಿಂದ ಅಭಿಮನ್ಯಮಾನವಾದುದು. ಲಕ್ಷ್ಮೀದೇವಿಯ ಸನ್ನಿಧಾನಕ್ಕೆ ಪಾತ್ರವಾಗಿದ್ದು ಅವಳ ಜಡಪ್ರತೀಕದಂತೆ ಇರುವಂತಹದ್ದು. ಕ್ಷೀರ ಸಮುದ್ರದಿಂದ ಪ್ರಾದುರ್ಭೂತಳಾದ ಲಕ್ಷ್ಮೀದೇವಿ ತನ್ನನ್ನು ವರಿಸಿಕೊಳ್ಳಬೇಕೆಂದು ಅಸುರರು, ದೈತ್ಯರು ಆಸೆ ಪಡುತ್ತಿದ್ದರೂ ಅವರನ್ನೆಲ್ಲ ಧಿಕ್ಕರಿಸಿ ತನ್ನ ನಿಯತಪತಿಯಾದ ನಾರಾಯಣನನ ಕೊರಳಿಗೇ ಮಾಲೆಯನ್ನು ಹಾಕಿ ಅವನನ್ನೇ ಪತಿಯನ್ನಾಗಿ ವರಿಸಿಕೊಂಡಳು. ಲಕ್ಷ್ಮೀನಾರಾಯಣರ ವಿವಾಹದಿಂದ ಲೋಕ ಕಲ್ಯಾಣವಾಯಿತು. ಅಂತೆಯೇ ಲಕ್ಷ್ಮೀದೇವಿಯ ಪ್ರತಿಮೆಯಂತಿರುವ ಸಂಪತ್ತು ಶ್ರೀಮನ್ನಾರಾಯಣನಿಗೇ ತಲುಪುವಂತೆ ಅವನ ಪ್ರೀತಿಗೆ ಪಾತ್ರವಾಗಿರುವ ಚಟುವಟಿಕೆಗಳಿಗಾಗಿಯೇ, ವ್ಯಕ್ತಿಗಳಿಗಾಗಿಯೇ ಅದನ್ನು ವಿನಿಯೋಗಿಸಬೇಕು. ಅವನ ಆಜ್ಞೆಯಂತಿರುವ ಶ್ರುತಿ–ಸ್ಮೃತಿಗಳು ವಿಧಿಸುವ ಸತ್ಪಾತ್ರದಾನ ಮುಂತಾದ ಚಟುವಟಿಕೆಗಳೇ ಅವನಿಗೆ ಪ್ರಿಯವಾದವು. ಭಗವದ್ಭಕ್ತರು, ಭಗವದ್‌ಜ್ಞಾನಿಗಳು ಅವನಿಗೆ ಹೆಚ್ಚು ಪ್ರಿಯರಾದವರು. ಸಂಪತ್ತು ಅಂತಹ ಚಟುವಟಿಕೆಗಳಿಗಾಗಿ, ಅಂತಹ ವ್ಯಕ್ತಿಗಳಿಗೆ ತಲುಪುವಂತೆ ವಿನಿಯೋಗವಾದಾಗ ಅದು ಶ್ರೀಮನ್ನಾರಾಯಣನಿಗೆ ತಲುಪಿದಂತಾಗುವುದು. ಇದರಿಂದ ಲಕ್ಷ್ಮೀನಾರಾಯಣರ ಸಮಾಗಮವಾದಂತಾಗುವುದು. ಶಾಸ್ತ್ರ ನಿಷಿದ್ಧಗಳಾದ ಚಟುವಟಿಕೆಗಳು, ಕೆಟ್ಟ ಚಟಗಳು ದೈತ್ಯರ, ಅಸುರರ ಪ್ರೇರಣೆಗೊಳಗಾಗಿದ್ದು, ಅವರನ್ನು ಸಂಕೇತಿಸುವಂತಹವು.

ಸಂಪತ್ತು ಅಂತಹವುಗಳಿಗಾಗಿ ವಿನಿಯೋಗವಾದಾಗ ದೈತ್ಯರ ಅಸುರರ ಬಳಿಗೆ ಲಕ್ಷ್ಮೀದೇವಿಯನ್ನು ಕಳುಹಿಸಿದಂತಾದೀತು! ಇದನ್ನು ಲಕ್ಷ್ಮೀದೇವಿ ಹೇಗೆ ತಾನೇ ಸಹಿಸಿಯಾಳು? ಲಕ್ಷ್ಮೀದೇವಿ ಕ್ಷೀರಸಾಗರದಿಂದಲೇ ಸಮುದ್ಭೂತಳಾಗಿರುವಂತೆ, ಶಾಸ್ತ್ರವಿಹಿತವಾದ ಶುದ್ಧವಾದ ಮಾರ್ಗದಿಂದ ಸಂಪಾದಿತ ಧನವೇ ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನಕ್ಕೆ ಪಾತ್ರವಾಗಿದ್ದು ಅವಳ ಪ್ರತಿಮೆಯಂತೆ ಇರುವಂತಹದ್ದು. ಮೋಸ, ಲಂಚ ಮುಂತಾದ ಕೆಟ್ಟ ಮಾರ್ಗದಿಂದ ಸಂಪಾದಿತ ಐಶ್ವರ್ಯದಲ್ಲಿ ಲಕ್ಷ್ಮೀದೇವಿಯ ಸನ್ನಿಧಾನ ಕಡಿಮೆ. ಇಂತಹ ಸಂಪತ್ತನ್ನು ಆದಷ್ಟು ದೂರೀಕರಿಸಿ, ಲಕ್ಷ್ಮೀದೇವಿಯ ಪ್ರತಿಮೆಯಾಗಿರುವ ಸಾತ್ತ್ವಿಕಸಂಪತ್ತನ್ನಷ್ಟೇ ಬಯಸಿ, ಅದರ ಸಾತ್ತ್ವಿಕ ವಿನಿಯೋಗ ನಡೆಯುವುದರ ಮೂಲಕ ಲಕ್ಷ್ಮೀನಾರಾಯಣರ ಸಮಾಗಮ ನಡೆದು ಲಕ್ಷ್ಮೀನಾರಾಯಣರ ವಿವಾಹದ ಮಂಗಲ ವಾತಾವರಣ ಮನೆಯಲ್ಲಿ ಹರಡುವಂತೆ ಮಾಡಬೇಕಾಗಿದೆ.

ಇದಕ್ಕೆ ಬೇಕಾದ ಸತ್ಪ್ರೇರಣೆ ಪತಿಯಲ್ಲಿ, ಮಕ್ಕಳಲ್ಲಿ ಉಂಟುಮಾಡಬೇಕಾದವಳು ಗೃಹಿಣಿ. ಮನೆಯ ಆರ್ಥಿಕ ವ್ಯವಸ್ಥೆಗೆ ಕೇಂದ್ರಬಿಂದುವಾಗಿರುವ ಆಕೆಯಿಂದ ಮನೆಯ ಯಜಮಾನ ಹಾಗೂ ಮಕ್ಕಳು ಯದೃಚ್ಛಾಲಾಭಸಂತುಷ್ಟರಾಗಿರುವುದಕ್ಕೆ ಹಾಗೂ ಸನ್ಮಾರ್ಗದಿಂದ ಧನವನ್ನು ಗಳಿಸಿ ಅದರ ಸರಿಯಾದ ವಿನಿಯೋಗ ನಡೆಯುವುದಕ್ಕೆ ಬೇಕಾದ ಪ್ರಭಾವಕಾರಿ ಸ್ಫೂರ್ತಿ ದೊರಕಬೇಕಾಗಿದೆ.

**೨. ಶೌಚವಿಧಿಯಲ್ಲಿ:**

ಗೃಹಿಣಿಯಾದವಳು ಮನೆಯ ಪರಿಸರವನ್ನೂ, ಮನೆಯನ್ನೂ, ಮನೆಯ ಪಾತ್ರೆಗಳನ್ನೂ ಶುದ್ಧವಾಗಿ, ಒಪ್ಪವಾಗಿ ಇಟ್ಟುಕೊಳ್ಳಬೇಕು. '...ನಿಯೋಜಯೇತ್.... ಶೌಚೇ.... ಪಾರಿಣಾಹ್ಯಸ್ಯ ಬೇಕ್ಷಣೇ' —ಮ. ಸ್ಮೃ. 9-11 ಯಾವ ಸ್ತ್ರೀ ಮನೆಯನ್ನೂ, ಅದರ ಪಾತ್ರೆಗಳನ್ನೂ ಶುದ್ಧಗೊಳಿಸುವಳೋ ಅಂತಹ ಸ್ತ್ರೀಯಲ್ಲಿ ತಾನು ನಿತ್ಯ ನೆಲೆಸುವೆನೆಂದಿರುವ ಲಕ್ಷ್ಮೀದೇವಿ, ಯಾವ ಸ್ತ್ರೀ ತನ್ನ ಮನೆಯ ಪಾತ್ರೆಗಳನ್ನು ಒತ್ತಟ್ಟಿಗೆ, ಒತ್ತಂದವಾಗಿ ಇಡದೆ, ಚೆಲ್ಲಾಪಿಲ್ಲಿಯಾಗಿ ಚೆಲ್ಲಿರುವಳೋ ಅಂತಹವಳನ್ನು ತಾನು ಕೈಬಿಟ್ಟು ಬಿಡುವುದಾಗಿ ತಿಳಿಸಿರುವಳು—'ವಸಾಮಿ ಸ್ತ್ರೀಷು.... ವಿಶುದ್ಧಗೃಹಭಾಂಡಾಸು....' 'ಪ್ರಕೀರ್ಣಭಾಂಡಾಂ........ಏವಂ ವಿಧಾಂ ತಾಂ ಪರಿವರ್ಜಯಾಮಿ'

—ಮ. ಭಾರ. ಅನುಶಾಸನ 11-12

ಆದ್ದರಿಂದ ಗೃಹಿಣಿಯರು ಮನೆಯನ್ನು, ಮನೆಯ ಪಾತ್ರೆಗಳನ್ನು ಶುದ್ಧವಾಗಿ, ಒಪ್ಪವಾಗಿ ಇಟ್ಟುಕೊಂಡು ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನಕ್ಕೆ ಪಾತ್ರ

ರಾಗಬೇಕು. ತಮ್ಮ ಮನೆ ಭಗವಂತನ ಮಂದಿರವಾಗಿದ್ದು, ಮನೆಯ ಶೌಚ ವೆಂದರೆ ಭಗವಂತನ ಮಂದಿರದ ಶೌಚವೆಂದು ಭಾವಿಸಬೇಕು. ಮನೆಯ ಪಾತ್ರೆಗಳೆಲ್ಲ ಭಗವಂತನ ಆರಾಧನೆಗೆ, ನೈವೇದ್ಯಕ್ಕೆ ಉಪಯುಕ್ತಗಳಾಗುವ ಪ್ರಯುಕ್ತ ಅವುಗಳ ಶುದ್ಧೀಕರಣ ಪರೋಕ್ಷವಾಗಿ ಭಗವಂತನ ಆರಾಧನೆಗೆ ಸಹಕಾರಿಯಾಗುವಂತಹುದೆಂಬ ಅನುಸಂಧಾನವಿರಬೇಕು.

ಮನೆಯನ್ನು, ಅಂಗಳವನ್ನು ಶುದ್ಧೀಕರಿಸುವಲ್ಲಿ ಅವಶ್ಯ ಗೋಮಯವನ್ನು ಬಳಸಿಕೊಳ್ಳಬೇಕು. ಗೋಮಯದಲ್ಲಿ ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನ. ಗೋವುಗಳ ಯಾವುದಾದರೊಂದು ಅವಯವದಲ್ಲಿ ವಾಸವನ್ನು ಬಯಸಿದ ಲಕ್ಷ್ಮೀ ದೇವಿಗೆ 'ಶಕೃನ್ಮೂತ್ರೇ ನಿವಸ ತ್ವಂ ಪುಣ್ಯಮೇತದ್ಧಿ ನಃ ಶುಭೇ'—ಮ. ಭಾರ. ಅನು. 82–24. ತಮ್ಮ ಗೋಮಯ ಹಾಗೂ ಗೋಮೂತ್ರದಲ್ಲಿ ನೆಲೆಸಲು ಹಸುಗಳು ಅವಕಾಶ ಕೊಟ್ಟವೆಂದು ಮಹಾಭಾರತದಲ್ಲಿ ತಿಳಿಸಲಾಗಿದೆ. ಆದ್ದರಿಂದ ಅಂತಹ ಗೋಮಯದಿಂದ ಮನೆಯನ್ನು ಸಾರಿಸಿದಲ್ಲಿ ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನ ಮನೆಯಲ್ಲಿ ಸಿದ್ಧಿಸುವುದೆಂಬ ಅನುಸಂಧಾನವಿರಬೇಕು.

**೩. ಅಡುಗೆಯ ಸಿದ್ಧತೆಯಲ್ಲಿ:**

ಅಡುಗೆಯನ್ನು ತಯಾರಿಸುವುದೂ ಗೃಹಿಣಿಯ ಪಾಲಿಗೆ ಸೇರಿರುವ ಕರ್ತವ್ಯ. ಮನೆಯ ಪತಿ, ಅತ್ತೆ, ಮಾವ, ಮಕ್ಕಳು ಬಂದ ಅತಿಥಿಗಳು — ಇವರೆಲ್ಲ ತಾನು ಮಾಡಿದ ಅಡುಗೆಯಿಂದ ಒಳ್ಳೆಯ ಮಾನಸಿಕ ಸಂಸ್ಕಾರ ಪಡೆಯುವಂತಾಗಬೇಕೆಂದು ಉತ್ತಮ ಅನುಸಂಧಾನಪೂರ್ವಕವಾಗಿ ಅಡುಗೆಯನ್ನು ನಡೆಸಬೇಕಾದದ್ದು. ತನ್ನ ಅಡುಗೆಯ ಮುಖ್ಯ ಉದ್ದೇಶ ಪ್ರತಿಮಾ ಮಾಧ್ಯಮದಲ್ಲಿ ಹಾಗೂ ತನ್ನ ಪತಿಯೇ ಮುಂತಾದವರ ಮಾಧ್ಯಮದಲ್ಲಿ ದೇವರಿಗೆ ನೈವೇದ್ಯವನ್ನು ಸಮರ್ಪಿಸುವಂತಹದ್ದೆಂಬ ಭಾವನೆ ಇರಬೇಕು.

ಹೀಗೆ ಮುಖ್ಯವಾಗಿ ಭಗವಂತನ ನೈವೇದ್ಯರೂಪದಲ್ಲಿ ನಡೆಯುತ್ತಿರುವ ಈ ಅಡುಗೆಯನ್ನು ನಡೆಸುವುದರಲ್ಲಿ ತಾನು ನಿಮಿತ್ತಮಾತ್ರಳು. ಪುಷ್ಕರನೇ ಮುಂತಾದ ದೇವತೆಗಳೆಲ್ಲ ಅಡುಗೆಗೆ ಸಂಬಂಧಿಸುವ ಬೇರೆ ಬೇರೆ ಚಟುವಟಿಕೆಗಳನ್ನು ನಿರ್ವಹಿಸುತ್ತಿರುವರು—

**ಸಾಧುಕರ್ಮವ ಪುಷ್ಕರನು ಸುನಿ । ವೇದಿತ ಪದಾರ್ಥಗಳ ಶುದ್ಧಿಯ ।**
**ಗೈದಗೋಸುಗ ಹಂಸನಾಮಕಗರ್ಪಿಸುತಲಿಪ್ಪ ।**

**ರತಿ ಸಕಲ ಸುಸ್ವಾದುರಸಗಳ ಪತಿ ಎನಿಸುವಳು ಅಲ್ಲಿ ಹುತವಹನ ಚುಲ್ಲಿಗಳೊಳಗೆ**
**ಭಾರ್ಗವನ ಚಿಂತಿಪುದು ಋಷಭದೇವನ । ಕ್ಷಿತಿಜ ಗೋಮಯ ಜಾದಿ**

ಯೊಳು ಸಂ। ಸ್ಥಿತ ವಸಂತನ ತುತಿಸುತಿರು ಸಂತತ ಸದಾ ಸದ್ಭಕ್ತಿ ಪೂರ್ವಕದಿ ॥
ಪಾಕಕರ್ತೃಗಳೊಳು ಚತುರ್ದಶ ಲೋಕಮಾತೆ ಮಹಾಲಕುಮಿ ಗತ ।
ಶೋಕ ವಿಶ್ವಂಭರನ ಚಿಂತಿಪುದೆಲ್ಲ ಕಾಲದಲಿ ॥

ಪಾಕಶುದ್ಧ ಸುಮಂಡಲದಿ ಭೂ। ಸೂಕರಾಹ್ವಯ ಉಪರಿ ಚೈಲಪ
ಏಕದಂತ ಸನತ್ಕುಮಾರನ ಧ್ಯಾನಿಪುದು। ಬುಧರು ಶ್ರೀನಿವಾಸನ ಭೋಗ್ಯವಸ್ತುವ।
ಕಾಣಗೊಡದಂದದಲಿ ವಿಶ್ವ । ಕ್ಸೇನ ಪರಿಚಾರರೂಪನಾಗಿಹನಲ್ಲಿ ಪುರುಷಾಖ್ಯ ॥

—ಎಂಬುದಾಗಿ ಶ್ರೀ ಜಗನ್ನಾಥದಾಸರು ತಮ್ಮ ಹರಿಕಥಾಮೃತ ಸಾರದ ನೈವೇದ್ಯ ಪ್ರಕರಣದಲ್ಲಿ ತಿಳಿಸಿರುವಂತೆ ನೈವೇದ್ಯ ಸಿದ್ಧತೆಯ ಕರ್ಮ ಪರಿಶುದ್ಧವಾಗಿರುವಂತೆ ಕರ್ಮಾಭಿಮಾನಿ ಪುಷ್ಕರನು ನೋಡುತ್ತಿರುತ್ತಾನೆ. ಹಂಸನಾಮಕ ಭಗವಂತ ಅವನಿಗೆ ನಿಯಾಮಕನಾಗಿರುತ್ತಾನೆ. ಅಡುಗೆಯಲ್ಲಿ ಸುಸ್ವಾದುರಸ ಉತ್ಪತ್ತಿಯಾಗುವಂತೆ ರತಿದೇವಿ ನಿಯಮಿಸುತ್ತಿರುತ್ತಾಳೆ. ಅವಳಿಗೆ ವಿಶ್ವನಾಮಕ ಭಗವಂತನು ನಿಯಾಮಕನಾಗಿರುವನು. ಒಲೆಯಲ್ಲಿ ಅಗ್ನಿ ನಿಯಾಮಕನಾಗಿರುವನು. ಅವನಿಗೆ ಪರಶುರಾಮ ಪ್ರೇರಕ. ಕಟ್ಟಿಗೆ, ಬೆರಣಿ ಇಂಧನಗಳಲ್ಲಿ ವಸಂತ ಋತುವಿಗೆ ಅಭಿಮಾನಿ ದೇವತೆ ನಿಯಾಮಕನಾಗಿ ಇರುವನು. ಋಷಭರೂಪಿ ಭಗವಂತನು ಅವನನ್ನೂ ನಿಯಂತ್ರಿಸುತ್ತಿರುವನು. ಅಡುಗೆ ಮಾಡುತ್ತಿರುವ ತನ್ನೊಳಗೆ ಲಕ್ಷ್ಮೀದೇವಿ ನಿಯಾಮಕಳಾಗಿರುವಳು. ಅವಳಿಗೆ ವಿಶ್ವಂಭರ ರೂಪಿ ಪರಮಾತ್ಮ ಪ್ರೇರಕನಾಗಿರುವನು. ನೈವೇದ್ಯ ಮಂಡಲಕ್ಕೆ ಭೂದೇವಿ ನಿಯಾಮಕಳು. ವರಾಹ ಅವಳಿಗೆ ಪ್ರೇರಕ. ಪಾತ್ರೆ ಇಳಿಸಲು ಬಳಸುವ ಮೇಲಿನ ಬಟ್ಟೆಗೆ ಗಣಪತಿ ನಿಯಾಮಕ. ಅವನಿಗೆ ಸನತ್ಕುಮಾರ ರೂಪಿ ಭಗವಂತ ಪ್ರೇರಕ. ಭಗವಂತನ ನೈವೇದ್ಯವನ್ನು ಎಲ್ಲರೂ ಕಾಣದಂತೆ ಆವರಣ ರೂಪದಲ್ಲಿ ವಿಶ್ವಕ್ಸೇನನಿದ್ದರೆ ಅವನಿಗೆ ನಿಯಾಮಕ ಪುರುಷನಾಮಕ ಭಗವಂತ. ಭೋಜನ ಪಾತ್ರೆಗಳಿಗೆ ದುರ್ಗಾದೇವಿ ನಿಯಾಮಕಳಾಗಿದ್ದರೆ, ಸತ್ಯನಾಮಕ ಭಗವಂತ ಅವಳಿಗೂ ಪ್ರೇರಕ. ಇತರ ಪಾತ್ರೆಗಳಿಗೆ ವಾರುಣೀ ನಿಯಾಮಕಳು; ಅವಳಿಗೆ ಆನಂದನಾಮಕ ಭಗವಂತನು ಪ್ರೇರಕನು. ವ್ಯಂಜನಗಳಿಗೆ ಸೌಪರ್ಣಿ ನಿಯಾಮಕಳಾದರೆ, ಆಕೆಗೆ ದತ್ತನಾಮಕ ಭಗವಂತನು ಪ್ರೇರಕ. [1]

---

1. ದುರ್ಗಾಭೋಜನಪಾತ್ರೇಶಾ ಸತ್ಯಾಖ್ಯಸ್ತತ್ರ ದೇವತಾ ।
ಪಾತ್ರಪಾ ವಾರುಣೀ ದೇವೀ ಚಾನಂದಸ್ತತ್ರದೇವತಾ ।
ವ್ಯಂಜಸ್ಥಾತು ಸೌಪರ್ಣೀ ದತ್ತಾಖ್ಯಸ್ತತ್ರ ದೇವತಾ ॥ —ಪಂಚರಾತ್ರ

(ಶ್ರೀ ಪ್ರಭಂಜನಾಚಾರ್ಯ ಸಂಪಾದಿತ 'ಪದ್ಯಮಾಲಾ'ದಲ್ಲಿ ಉದ್ಧೃತ)

ಪ್ರತಿಯೊಂದು ಭಕ್ಷ್ಯಭೋಜ್ಯದಲ್ಲಿಯೂ ಒಬ್ಬೊಬ್ಬ ಅಭಿಮಾನಿದೇವತೆ ಹಾಗೂ ಅವನಿಗೆ ನಿಯಾಮಕ ಕೇಶವಾದಿ ಭಗವದ್ರೂಪಗಳ ಮಾಹಿತಿಯನ್ನೂ ಹರಿಕಥಾಮೃತ ಸಾರದ ನೈವೇದ್ಯ ಪ್ರಕರಣದಲ್ಲಿ (14–21) ನೀಡಲಾಗಿದೆ. ಅಷ್ಟು ಸೂಕ್ಷ್ಮ ವಿಚಾರವನ್ನು ಅನುಸಂಧಾನ ಮಾಡುವುದು ಕಷ್ಟಸಾಧ್ಯವೆನಿಸಿದರೆ ಸ್ಥೂಲ ವಾಗಿ ಹೀಗೆ ಚಿಂತಿಸಬೇಕು—

'ವಾಸುದೇವನು ಅನ್ನದೊಳು ನಾನಾಸುಭಕ್ಷ್ಯದಿ ಸಂಕರುಷಣ ಕೃತೀಶ ಪರಮಾನ್ನದೊಳು ಘೃತದೊಳಗಿಪ್ಪನನಿರುದ್ಧ । ಆ ಸುಪರ್ಣಾಂಸಗನು ಸೂಪದಿ ವಾಸವಾನುಜ ಶಾಕದೊಳು ಮೂಲೇಶ ನಾರಾಯಣನು ಸರ್ವತ್ರದಲ್ಲಿ ನೆಲೆಸಿಹನು. ಎಂದು ಹರಿಕಥಾಮೃತ ಸಾರದ ಭೋಜನಸಂಧಿಯಲ್ಲಿ (10) ಹೇಳಿರುವಂತೆ ಅನ್ನ ದಲ್ಲಿ ವಾಸುದೇವರೂಪಿಯೂ ಬೇರೆ ಬೇರೆ ಬಗೆಯ ಭಕ್ಷ್ಯಗಳಲ್ಲಿ ಸಂಕರ್ಷಣ ರೂಪಿಯೂ, ಕೃತೀಶನಾದ ಪ್ರದ್ಯುಮ್ನ ಪರಮಾನ್ನದಲ್ಲಿಯೂ ಅನಿರುದ್ಧನು ತುಪ್ಪದಲ್ಲಿಯೂ, ಗರುಡಾರೂಢನಾದ ಭಗವಂತನು ತೋವೆಯಲ್ಲಿಯೂ, ವಾಮನನು ತರಕಾರಿಯ ಪಲ್ಯ ಮುಂತಾದವುಗಳಲ್ಲಿಯೂ, ಮೂಲೇಶನಾಮಕ ನಾರಾಯಣನು ಉಳಿದೆಲ್ಲವುಗಳಲ್ಲೂ—ಇರುವರೆಂದು ಅನುಸಂಧಾನ ಮಾಡಿಕೊಳ್ಳ ಬೇಕು.

ದೇವರ ಎದುರುಗಡೆ ನೀರಿನಿಂದ ಚೌಕ ಆಕಾರ ಬರೆದು ಅದರ ಮೇಲೆ ರಂಗ ವಲ್ಲಿಯಿಂದ ಶ್ರೀಕಾರ ಹಾಕಿ ಅದರ ಮೇಲೆ ತಯಾರಾದ ಅಡುಗೆ ಪದಾರ್ಥಗಳನ್ನು ಇಡಬೇಕು. ಯಾವ ಪದಾರ್ಥವನ್ನು ಯಾವ ಪಾರ್ಶ್ವದಲ್ಲಿ ಇಡಬೇಕೆಂಬುದನ್ನು ಶ್ರೀ ವಾದಿರಾಜರು 'ನೈವೇದ್ಯ ಪ್ರಕರಣ'ದಲ್ಲಿ ತಿಳಿಸಿರುವರು—

'ಮಧ್ಯೆ ಚರುಪಾತ್ರೆ ಇಡಬೇಕು । ವಾಯುದಿಕ್ಕಿನಲ್ಲಿ ಸೂಪ ಇಡಬೇಕು ।
ಅಗ್ನಿ ದಿಕ್ಕಿನಲಿ ಭಕ್ಷ್ಯ ಇಡಬೇಕು ।
ನೈಋತ್ಯ ದಿಕ್ಕಿನಲ್ಲಿ ಲೇಹ್ಯಪೇಯಾದಿಗಳನ್ನು ಇಡಬೇಕು ।
ಮುಂಭಾಗದಲ್ಲಿ ದಧಿ ಕ್ಷೀರ ಜಲ ತಾಂಬೂಲ ಸಕಲ ಪದಾರ್ಥಗಳನ್ನು ಇಡಬೇಕು'

ಈ ಪದಾರ್ಥಗಳನ್ನು ದೇವರಿಗೆ ಸಮರ್ಪಿಸುವಾಗ, ಅಡುಗೆ ಮಾಡಿದ ಗೃಹಿಣಿ ನೈವೇದ್ಯ ಸಮರ್ಪಣೆಗೆ ಸಂಬಂಧಪಟ್ಟ ಶ್ರೀ ವಾದಿರಾಜರ 'ಆವ ಕಡೆ ಯಿಂದ ಬಂದೆ....' ಮುಂತಾದ ಹಾಡನ್ನು ಹಾಡುತ್ತ ಪರಮಾತ್ಮನು ಹಯಗ್ರೀವ ರೂಪದಿಂದ ಬಂದು ಶ್ರೀ ವಾದಿರಾಜರು ಸಮರ್ಪಿಸಿದ ಹಯಗ್ರೀವ ಭಕ್ಷ್ಯವನ್ನು ಮೆದ್ದಂತೆ ಪ್ರಕೃತ ತನ್ನ ಪತಿ ಸಮರ್ಪಿಸುವ ಭಕ್ಷ್ಯ, ಭೋಜ್ಯಗಳನ್ನೂ ಸ್ವೀಕರಿಸು ವನೆಂದು ಅನುಸಂಧಾನಕ್ಕೆ ತಂದುಕೊಳ್ಳಬೇಕು.

ಭಗವಂತನ ಪ್ರತಿಮೆಯ ಎದುರು ಬೇರೆ ಬೇರೆ ಭಕ್ಷ್ಯಭೋಜ್ಯಗಳನ್ನಿಟ್ಟು,

ಆ ಎಲ್ಲ ಪದಾರ್ಥಗಳನ್ನು ಮನಸ್ಸಲ್ಲಿ ನೆನೆಸಿಕೊಂಡಾಗ, ನಮ್ಮ ಮನಸ್ಸಲ್ಲಿ ಸಂಸ್ಕಾರರೂಪ ತಾಳಿರುವ ಆಯಾ ಪದಾರ್ಥಗಳಲ್ಲಿ ಆಯಾ ಆಕಾರದಲ್ಲಿರುವ ತನ್ನ ಆನಂದಾತ್ಮಕಗಳಾದ ಸ್ವರೂಪಗಳನ್ನು ಭಗವಂತನು ಭೋಗಿಸುವನು.[1] ನಮ್ಮ ಇಂದ್ರಿಯಭೋಗ್ಯಗಳಾದ ಪದಾರ್ಥಗಳನ್ನು ತನ್ನ ದರ್ಶನಮಾತ್ರದಿಂದ ಸ್ವೀಕರಿಸುವನು—ಎಂದು ನಾವು ಸಮರ್ಪಿಸುವ ನೈವೇದ್ಯವನ್ನು ಭಗವಂತನು ಹೇಗೆ ಸ್ವೀಕರಿಸುವನೆಂದು ಶ್ರೀ ನಾರಾಯಣ ಪಂಡಿತರು ತಿಳಿಸಿರುವ ಸೂಕ್ಷ್ಮಪ್ರಮೇಯ ವನ್ನು ಅನುಸಂಧಾನಕ್ಕೆ ತಂದುಕೊಳ್ಳಬೇಕು. [2]

ಪತಿ, ಪುತ್ರಾದಿಗಳಿಗೆ ಭೋಜನವನ್ನು ಬಡಿಸುವಾಗಲೂ ಭಗವಂತನು ಸಂಕರ್ಷಣ ಮತ್ತು ಪ್ರದ್ಯುಮ್ನ ರೂಪಗಳಿಂದ ಭೋಕ್ತೃಗಳಲ್ಲಿದ್ದುಕೊಂಡು ಅವರಿಗೆ ತಿನ್ನುವ ಸಾಮರ್ಥ್ಯವನ್ನು ಅನುಗ್ರಹಿಸುತ್ತಿರುವನು. ಅಲ್ಲದೆ, ತಾನು ಆ ರೂಪಗಳಿಂದ ಶುಭರಸವನ್ನು ಸ್ವೀಕರಿಸುತ್ತಿರುವನು. ನಾರಾಯಣ ಮತ್ತು ಅನಿರುದ್ಧ ರೂಪಗಳಿಂದ ಭೋಜ್ಯ ಪದಾರ್ಥಗಳಲ್ಲಿ ಇದ್ದುಕೊಂಡು ತಿನ್ನುವವರಿಗೆ ಆ ಪದಾರ್ಥಗಳು ತೃಪ್ತಿ ನೀಡುವಂತೆ ಮಾಡುತ್ತಿರುವನು. ವಾಸುದೇವ ರೂಪ ದಿಂದ ಭೋಕ್ತೃಗಳ ಉದರಾಕಾಶದಲ್ಲಿದ್ದುಕೊಂಡು ಅವರಿಗೆ ಆಹಾರವನ್ನು ಒಳಗೆ ಸ್ವೀಕರಿಸಲು ಬೇಕಾದ ಅವಕಾಶವನ್ನು ಒದಗಿಸಿಕೊಡುವನೆಂದು ಅನುಸಂಧಾನ ಮಾಡುತ್ತಿರಬೇಕು.

ಐತರೇಯ ಸಂಹಿತೆಯ (ಐ. ಉ. ಭಾ. 2-2-1-5) ಮೂಲಕ ಶ್ರೀ ಮಧ್ವಾಚಾರ್ಯರು ಪ್ರಸ್ತುತಪಡಿಸಿರುವ ಈ ಪ್ರಮೇಯವನ್ನು ಶ್ರೀ ಜಗನ್ನಾಥ ದಾಸರು ಹೀಗೆ ಸಂಗ್ರಹಿಸಿರುವರು—

ನಿರುಪಮಾನಂದಾತ್ಮ ಹರಿ ಸಂ । ಕರುಷಣ ಪ್ರದ್ಯುಮ್ನರೂಪದಿ ।
ಯಿರುತಿಹನು ಭೋಕ್ತೃಗಳೊಳಗೆ ತಚ್ಛಕ್ತಿದಯೆನಿಸಿ [3] ।
ಕರೆಸುವನು ನಾರಾಯಣನಿರು । ದ್ಧರಡು ನಾಮದಿ ಭೋಜ್ಯವಸ್ತುಗ ।
ನಿರುತ ತರ್ಪಕನಾಗಿ ತೃಪ್ತಿಯನೀವ ಚೇತನಕೆ ॥
ವಾಸುದೇವನು ಒಳಹೊರಗೆ ಅವ । ಕಾಶಕೊಡುವ ನಭಸ್ಥನಾಗಿರ ।
ಮಾಸಮೇತ ವಿಹಾರಮಾಳ್ಪನು ಪಂಚರೂಪದಲಿ ॥ —ಹರಿ.ಕ.ಭೋಜನ8,9

---

1. ವಾಸನಾರೂಪಕೇಷ್ವದ್ಧಾ ಪದಾರ್ಥೇಷು ಪೃಥಕ್ ಪೃಥಕ್ ।
ತತ್ತದಾಕಾರಸಂಯುಕ್ತಾನ್ ಸ್ವರೂಪಾನ್ ಸ್ವೀಕರೋತ್ಯಜಃ ।
—ಯೋಗದೀಪಿಕಾ 10-55

2. ಮಾನುಷೇಂದ್ರಿಯಭೋಗ್ಯಾಂಸ್ತು ಸ್ವದೃಷ್ಟ್ಯಾ ಸ್ವೀಕರೋತ್ಯಜಃ ।
—ಯೋಗದೀಪಿಕಾ 10-74

3. ...ಭೋಕ್ತಾರೌ ಚ ವಿಶೇಷತಃ —ಎಂಬುದಾಗಿಯೂ ಐತರೇಯ ಸಂಹಿತೆ ತಿಳಿಸಿದೆ.

—ಹೀಗೆ ಈ ಅನುಸಂಧಾನಕ್ಕೆ ಪುಷ್ಟಿಕೊಡುವಂತಹ ಹಾಡುಗಳನ್ನು ಹಾಡುತ್ತ ಭಗವಂತನ ಲೀಲೆಗಳನ್ನು ಹೊಗಳುತ್ತ ಭೋಜನ ಮಾಡುತ್ತಿರುವವರೂ ಇಂತಹ ವಿಚಾರಗಳಲ್ಲಿ ಮಗ್ನರಾಗುವಂತೆ ನಡೆದುಕೊಳ್ಳಬೇಕು. ಒಂದು ವೇಳೆ ಪತಿ, ಪುತ್ರಾದಿಗಳು ಹಾಳು ಹರಟೆಯಲ್ಲಿ ತೊಡಗಿದರೆಂದರೆ ಉಪಾಯದಿಂದ ಅದನ್ನು ನಿಲ್ಲಿಸಿ, ಒಳ್ಳೆಯ ವಿಚಾರಗಳಲ್ಲಿ ತೊಡಗುವಂತೆ ಮಾಡಬೇಕು ಹೊರತು ತಾನೂ ಅದಕ್ಕೆ ಪುಷ್ಟಿ ನೀಡಿ ಕೆಟ್ಟ ಹರಟೆಯಲ್ಲಿ ತೊಡಗಬಾರದು.

ಇದಕ್ಕೆ ವಿಪರೀತವಾಗಿ ಗೃಹಿಣಿಯಾದವಳು ಕೆಟ್ಟ ವಿಚಾರಗಳೊಂದಿಗೆ, ಕೆಟ್ಟ ಭಾವನೆಗಳೊಂದಿಗೆ ಅಡುಗೆ ಮಾಡುವುದರಲ್ಲಿ, ಬಡಿಸುವುದರಲ್ಲಿ ತೊಡಗಿದಳೆಂದರೆ ಅದರ ಕೆಟ್ಟ ಪ್ರಭಾವ ಆ ಅಡುಗೆಯನ್ನು ಊಟ ಮಾಡುವವರ ಮೇಲೂ ಬೀರ ಬಲ್ಲದು—ಎಂಬುದನ್ನು ನೆನಪಿಡಬೇಕು.

**೪. ವೇಷಭೂಷ ತೊಡುವಲ್ಲಿ :**

ಸ್ತ್ರೀ ಚೆನ್ನಾಗಿ ವೇಷಭೂಷಣಗಳನ್ನು ತೊಟ್ಟುಕೊಂಡು ಅಲಂಕೃತಳಾಗಿ ಇರ ಬೇಕು. ಹೀಗೆ ಭೂಷಿತಳಾದವಳಲ್ಲಿ ತಾನು ನೆಲೆಸುವುದಾಗಿ ಲಕ್ಷ್ಮೀದೇವಿ ಸಂದೇಶಿಸಿರುವಳು —

**ವಸಾಮಿ ನಾರೀಷು ಪತಿವ್ರತಾಸು**
**ಕಲ್ಯಾಣಶೀಲಾಸು ವಿಭೂಷಿತಾಸು** **—ಮ. ಭಾರ. ಅನು. 11-14**

ಈ ವೇಷಭೂಷಗಳ ಅಲಂಕಾರದಿಂದ ಅಭಿವ್ಯಕ್ತವಾಗುವ ತನ್ನ ಸೌಂದರ್ಯ ದ ಅನುಭವ ತನ್ನ ಪತಿಗೆ, ಪತಿಯ ಅಂತರ್ಯಾಮಿಗೆ ಸಮರ್ಪಿತವಾಗಲಿ–ಎಂಬ ಅನುಸಂಧಾನವಿರಬೇಕೇ ಹೊರತು ಇತರ ಗಂಡಸರೂ ತನ್ನ ಸೌಂದರ್ಯದಿಂದ ಮೋಹಗೊಳ್ಳುವಂತಾಗಲಿ—ಎಂಬ ಚಾಪಲ ಇರಬಾರದು.

ಹಾಗೆಯೇ 'ಭೂಷಣಕೆ ಭೂಷಣ....'—ಎನಿಸಿರುವ ಭಗವಂತನೇ ಅಲಂಕಾರ ಸಾಮಗ್ರಿಗಳಲ್ಲಿದ್ದು, ಅವುಗಳ ಮೂಲಕ ಆಕರ್ಷಣೆ ಸಿದ್ಧಿಸುವಂತೆ ಅನುಗ್ರಹಿಸು ತ್ತಿದ್ದಾನೆ. ಚಿನ್ನ ಕಲಿಯ ಆವಾಸಸ್ಥಾನವಾಗಿ ಪರೀಕ್ಷಿದ್ರಾಜನಿಂದ ಅಧಿಕೃತವಾಗಿ ಪರಿಗಣಿಸಲ್ಪಟ್ಟಿದ್ದಾದರೂ, '....ಧಾತೂನಾಮಸ್ಮಿ ಕಾಂಚನಮ್' — ಎಂದು ಶ್ರೀಕೃಷ್ಣ ಸಂದೇಶಿಸಿರುವಂತೆ (ಭಾಗ. 11-16-18) 'ಕಾಂಚನ' ಹೆಸರಿನ ವಿಭೂತಿ ರೂಪದಿಂದ ಅವನು ಚಿನ್ನದಲ್ಲಿ ಇರುವುದರಿಂದಾಗಿ ಅಂತಹ ಚಿನ್ನದ ಆಭರಣಗಳನ್ನು ಧರಿಸಿರುವುದರಿಂದ ತನಗೆ ಮಂಗಳಮಯ ವ್ಯಕ್ತಿತ್ವ ಬರುವಂತಾಗಿದೆ–ಎಂದು ವಿಶ್ಲೇಷಿಸಿಕೊಳ್ಳಬೇಕು.

ಅಲಂಕಾರಕ್ಕಾಗಿ ಸ್ತ್ರೀಯರು ಹೂವನ್ನೂ ಧರಿಸಿಕೊಳ್ಳುವುದಿದೆ. ಭಗವಂತ

ನಿಗೆ ಸಮರ್ಪಿತವಾಗಿದ್ದು, ಲಕ್ಷ್ಮೀದೇವಿಯ ವಿಶೇಷ ಸನ್ನಿಧಾನಕ್ಕೆ ಪಾತ್ರವಾದ ನಿರ್ಮಾಲ್ಯ ಹೂವನ್ನೇ ಧರಿಸಿಕೊಳ್ಳಬೇಕು. ಅಲ್ಲದೆ ಆಯಾ ಹೂಗಳಲ್ಲಿ ಅಭಿಮಾನಿ ದೇವತೆಗಳಿರುವುದನ್ನೂ ಗುರುತಿಸಿಕೊಳ್ಳಬೇಕು.
ಜೊತೆಗೆ,

"ವಾಸುದೇವನು ಕರೆಸುವನು ಕಾ। ರ್ಪಾಸನಾಮದಿ ಸಂಕರುಷನು ।
ವಾಸವಾಗಿಹ ತೂಲದೊಳು ತಂತುಗನು ಪ್ರದ್ಯುಮ್ನ ॥
ವಾಸರೂಪ ನಿರುದ್ಧದೇವನು । ಭೂಷಣನು ತಾನಾಗಿ ತೋರ್ಪ ಪ ।
ರೇಶ ನಾರಾಯಣನು ಸರ್ವದ ಮಾನದನು ಮಾಧವನು"
ಲಲನೆಯಿಂದೊಡಗೂಡಿ ಚೈಲಗ। ಳೊಳಗೆ ಓತಪ್ರೋತರೂಪದಿ ।
ನೆಲೆಸಿಹನು ಚತುರಾತ್ಮಕ ಜಗನ್ನಾಥ ವಿಠ್ಠಲನು"

—ಎಂದು ಶ್ರೀ ಜಗನ್ನಾಥದಾಸರು ಸಂದೇಶಿಸಿರುವಂತೆ (ಹರಿಕಥಾ 16-28,29) ಶ್ರೀ ನಾರಾಯಣನು ತನ್ನ ಉಡುಪಿನ ಹತ್ತಿ, ನೂಲುಗಳಲ್ಲೆಲ್ಲ ವಾಸುದೇವಾದಿ ನಾಲ್ಕು ರೂಪಗಳಿಂದ ಲಕ್ಷ್ಮೀಸಹಿತನಾಗಿ ಇದ್ದುಕೊಂಡು ಹಾಗೆಯೇ ಮಾನದನು ಎಂದೆನಿಪ ವಾಸನದಿ (ಹರಿಕಥಾ 22–23) ಎಂದು ಸಂದೇಶಿಸಿರುವಂತೆ 'ಮಾನದ' ನಾಮಕನಾಗಿಯೂ ಇದ್ದುಕೊಂಡು, ಆ ಉಡುಪಿನ ಮೂಲಕ ತನಗೆ ಮರ್ಯಾದೆ ದೊರಕುವಂತೆ ಅನುಗ್ರಹಿಸುವನು. ಅಂತೆಯೇ 'ಚಳಿ ಬಿಸಿಲು ಮಳೆಗಾಳಿದಿಂದರೆ। ಘಳಿಗೆ ಬಿಡದಲೆ ಕಾವನು" ಎಂದೂ ಅನುಸಂಧಾನ ಮಾಡುತ್ತಿರುವನು.

ಪಾರಿಜಾತ ಹೂವಿನಲ್ಲಿ ಆಂಜನೇಯನಿರುವನು. ಕಲ್ಹಾರದಲ್ಲಿ ಭೀಮಸೇನನಿರುವನು. ಪುನ್ನಾಗದಲ್ಲಿ ಗರುಡನಿರುವನು. ಬಿಳಿಯ ಹೂಗಳಲ್ಲೆಲ್ಲ ರುದ್ರನಿರುವನು—

**'ಪಾರಿಜಾತಸ್ಯ ಪುಷ್ಪೇಷು ಆಂಜನೇಯಸ್ತದಾಜ್ಞಯಾ ।**
**ಸೌಗಂಧಿಕೇ ಭೀಮಸೇನಃ ಶ್ವೇತಪುಷ್ಪೇಷು ಶಂಕರಃ ।**
**ಪುನ್ನಾಗಪುಷ್ಪೇ ಗರುಡಃ......'**

ದೇವಪೂಜೆಗಾಗಿ ಹೂಗಳನ್ನು ಬಿಡಿಸುವಾಗಲೂ ಆಯಾ ತತ್ವಾಭಿಮಾನಿ ದೇವತೆಗಳನ್ನು ಗುರುತಿಸಿಕೊಳ್ಳಬೇಕು.

**೫. ಹಾಡುವಲ್ಲಿ:** ಸಾಮಾನ್ಯವಾಗಿ ಹಾಡುವುದು ಸ್ತ್ರೀಯರ ಮುಖ್ಯ ಹವ್ಯಾಸವಾಗಿರುವುದು. ಅಪರೋಕ್ಷ ಜ್ಞಾನಿಗಳೆಂದು ಪ್ರಸಿದ್ಧರಾಗಿರುವ ದಾಸರುಗಳ ಹಾಡುಗಳು ಅವರ ದರ್ಶನ ಮೂಲಕಗಳಾಗಿದ್ದು ಮಂತ್ರತುಲ್ಯಗಳೆನಿಸಿವೆ.

ಅಂತಹ ಹಾಡುಗಳನ್ನೇ ಹಾಡುವ ದೀಕ್ಷೆ ತೊಡಬೇಕಲ್ಲದೆ, ಹಾಡುವಾಗ ತಾನು ವೀಣೆ, ತನ್ನ ಮೂಲಕ ಹಾಡನ್ನು ಹೊರಡಿಸುವ ಭಗವಂತನೇ ವೈಣಿಕ ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

ಐತರೇಯೋಪನಿಷತ್ತು (2–8–6–1,2) ಈ ಅನುಸಂಧಾನವನ್ನು ಪರಿಚಯಿಸಿಕೊಟ್ಟಿದೆ[1] — ಈ ದೇಹವೊಂದು ದೈವೀವೀಣೆ. ದೇವರು ನಿರ್ಮಿಸಿದ ವೀಣೆ. ಮನುಷ್ಯರು ನಿರ್ಮಿಸುವ ಮರದ ವೀಣೆ ಇದರದ್ದೇ ಅನುಕರಣೆ. ಈ ವೀಣೆಗೆ ತಲೆ ಇದ್ದಂತೆ ಅದಕ್ಕೆ ಮರದ ಬುರುಡೆ ಇದೆ. ' ಇದಕ್ಕೆ ಹೊಟ್ಟೆ ಇದ್ದಂತೆ ಅದಕ್ಕೆ ಕೆಳಗಿನ ಸೋರೆಬುರುಡೆ ಇದೆ. ಇದಕ್ಕೆ ನುಡಿಯುವ ನಾಲಗೆ ಇದ್ದರೆ ಅದಕ್ಕೆ ನುಡಿಸುವ ವಾದನದಂಡ....... ಹೀಗೆ ಸರ್ವವಾಗೀಶ್ವರ ಎನಿಸಿರುವ ಭಗವಂತನ ವೀಣೆಯಾಗಿದ್ದುಕೊಂಡು ಹಾಡುತ್ತಿರುವವರು ನಾವು ಎಂಬ ಅನುಸಂಧಾನವನ್ನು ತಂದುಕೊಳ್ಳಬೇಕು.

**೬. ಪತಿಯ ಜೊತೆ ಸಮಾಗಮದ ಸಂದರ್ಭದಲ್ಲಿ:**

ಸಾಮಾನ್ಯವಾಗಿ ತುಂಬ ಅಶ್ಲೀಲ ಚಟುವಟಿಕೆ ಎಂದು ಭಾವಿಸಲಾಗುವ ಸ್ತ್ರೀ ಪುರುಷ ಸಮಾಗಮವನ್ನು ಯಜ್ಞವನ್ನಾಗಿ ಪರಿಗಣಿಸಲಾಗಿದೆ. ಆದರೆ ಪಂಚಾಗ್ನಿವಿದ್ಯೆಯಿಂದ ಪಡಕೊಳ್ಳಬಹುದಾದ ಅನುಸಂಧಾನಪೂರ್ವಕವಾಗಿ ನಡೆಸಿದಾಗಷ್ಟೇ ಅದು ಯಜ್ಞ ಎನಿಸಬಲ್ಲದು. ಈ ಅನುಸಂಧಾನ ಪುರುಷರಿಗೆ ಹೇಗೋ ಹಾಗೆಯೇ ಸ್ತ್ರೀಯರಿಗೂ ಇರಬೇಕಾದದ್ದು. ಅವರು ಪಂಚಾಗ್ನಿಗಳಲ್ಲಿ ತಮ್ಮ ಹಾಗೂ ತಮ್ಮ ಪತಿಯ ಪಾತ್ರವನ್ನು ವಿಶೇಷವಾಗಿ ತಿಳಿದುಕೊಂಡು ಅನುಸಂಧಾನಕ್ಕೆ ತಂದುಕೊಳ್ಳಬೇಕಾದದ್ದು. ಪಂಚಾಗ್ನಿವಿದ್ಯೆಯ ವಿಚಾರ ಬೃಹದಾರಣ್ಯಕೋಪನಿಷತ್ತಿನಲ್ಲೂ (8-2) ಛಾಂದೋಗ್ಯೋಪನಿಷತ್ತಿನಲ್ಲೂ (5–2) ವಿವರಿಸಲ್ಪಟ್ಟಿದ್ದು, ಅದು ಹರಿಕಥಾಮೃತಸಾರದ ಪಂಚಾಗ್ನಿ ಹೋತ್ರಿ ಸಂಧಿಯಲ್ಲಿ ಸಂಗ್ರಹಿಸಲ್ಪಟ್ಟಿದೆ. ಯಜ್ಞ ಮಾಡಿ ಮೃತನಾದ ವ್ಯಕ್ತಿ ಕ್ರಮವಾಗಿ ಸ್ವರ್ಗಲೋಕ, ಮೇಘಮಂಡಲ, ಪೃಥಿವೀ, ಪುರುಷ ಹಾಗೂ ಸ್ತ್ರೀ—ಈ ಐದು ತಾಣಗಳನ್ನು ಹಾದು ಜನ್ಮ ಪಡೆಯುತ್ತಾನೆ. ಈ ಐದು ತಾಣಗಳನ್ನು ಐದು ಅಗ್ನಿಗಳೆಂದು ಭಾವಿಸಿ, ದೇವತೆಗಳು ಅವುಗಳಲ್ಲಿ ಆ ಜೀವಾತ್ಮನನ್ನು ಕ್ರಮವಾಗಿ ಹೋಮಿಸುವರು. ಈ ಐದರಲ್ಲಿ ಪರಮಾತ್ಮನು ಕ್ರಮವಾಗಿ ನಾರಾಯಣ,

---

**1. ಅಥ ಖಲ್ವಿಯಂ ದೈವೀ ವೀಣಾ ಭವತಿ ತದನುಕೃತಿರಸೌ ಮಾನುಷೀ ವೀಣಾ ಭವತಿ । ಯಥಾಽಸ್ಯಾಃ ಶಿರ ಏವಮಮುಷ್ಯಾಃ ಶಿರೋ ಯಥಾಽಸ್ಯಾ ಉದರಮೇವಮಮುಷ್ಯಾ ಅಂಭಣಂ ಯಥಾಽಸ್ಯೈ ಜಿಹ್ವೈವಮಮುಷ್ಯೈ ವಾದನಮ್.**

ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ರೂಪಗಳಿಂದ ಇರುವನು — ಈ ಐದು ರೂಪಗಳಲ್ಲಿ ಪ್ರತಿಯೊಂದು' ರೂಪವೂ ಆಯಾ ಅಗ್ನಿಯಲ್ಲಿ ನಾರಾಯಣ ನಾರಾಯಣ, ನಾರಾಯಣ ವಾಸುದೇವ, ನಾರಾಯಣ ಸಂಕರ್ಷಣ, ನಾರಾಯಣ ಪ್ರದ್ಯುಮ್ನ ಹಾಗೂ ನಾರಾಯಣ ಅನಿರುದ್ಧ–ಎಂಬುದಾಗಿ ಐದೈದು ರೂಪಗಳಿಂದ ಇರುವುದು.

ಹೀಗೆ ದ್ಯುಲೋಕ, ಮೇಘಮಂಡಲ, ಪೃಥಿವೀ ಈ ಮೂರು ಅಗ್ನಿಗಳಲ್ಲಿ ಜೀವಾತ್ಮನ ಹೋಮವಾದ ನಂತರ ಪುರುಷಾಗ್ನಿಯಲ್ಲಿ, ಬಳಿಕ ಯೋಷಿದಗ್ನಿಯಲ್ಲಿ ಅವನ ಹೋಮ ನಡೆಯುವುದು. ಈ ಕೊನೆಯ ಎರಡು ಅಗ್ನಿಗಳಲ್ಲಿ ನಡೆಯುವ ಹೋಮದ ವಿವರಣೆಯನ್ನು ತಿಳಿದುಕೊಂಡು ಅನುಸಂಧಾನ ಮಾಡಿಕೊಳ್ಳಬೇಕು. ಹರಿಕಥಾಮೃತ ಸಾರದಲ್ಲಿ 'ಪುರುಷಾಗ್ನಿ'ಯಲ್ಲಿ ನಡೆಸಲಾಗವ ಜೀವಾತ್ಮನ ಹೋಮವನ್ನು ಹೀಗೆ ಸಂಗ್ರಹಿಸಲಾಗಿದೆ—

"ಪುರುಷ ಶಿಖಿ ವಾಕ್ಸಮಿಧೆ ಧೂಮವು ।
ಪರಣರ್ಜಿಯು ಜಿಹ್ವೆ ಶ್ರೋತ್ರಗಳೆರಡು ಕಿಡಿಗಳು
ಲೋಚನಗಳಂಗಾರವೆನಿಸುವವು ॥
ನಿರುತ ಭುಂಜಿಸುವನ್ನ ಯದುಕುಲ ।
ವರನಿಗವದಾನಗಳು ಎಂದೀ।ಪರಿಸಮರ್ಪಣೆಗೈಯೆ ಕೈಕೊಂಡನು ದಿನದಿಪೊರೆವ [1]

ಮೇಲ್ನೋಟಕ್ಕೆ ತೋರುವಂತೆ ಪುರುಷನೇ ಅಗ್ನಿ ಎಂದು ಭಾವಿಸಿದರೆ ಸಾಲದು. ಶ್ರೀ ಮಧ್ವಾಚಾರ್ಯರು 'ಸಾಮ ಸಂಹಿತೆ'ಯ ಮೂಲಕ ಪ್ರದ್ಯುಮ್ನ ನಾಮಕ ಭಗವಂತನು ಪುರುಷನಾಮಕನಾಗಿ ಪ್ರದ್ಯುಮ್ನ ನಾರಾಯಣನೇ ಮುಂತಾದ ಐದು ರೂಪಗಳಿಂದ ಪುರುಷನಲ್ಲಿ ಇರುವನೆಂದು ತಿಳಿಯಬೇಕೆಂದು ಸಂದೇಶಿಸಿದ್ದಾರೆ.

ಪ್ರದ್ಯುಮ್ನ ನಾರಾಯಣ ಎಂಬ ರೂಪ ಪುರುಷನ ವಾಗಿಂದ್ರಿಯದಲ್ಲಿದ್ದು ವಾಕ್ ಎನಿಸಿ ಪುರುಷಾಗ್ನಿಯ,ಸಮಿಧೆ ಎನಿಸಿದೆ. ಪ್ರದ್ಯುಮ್ನ ವಾಸುದೇವ ಎಂಬ ರೂಪ ಪುರುಷನ ಪ್ರಾಣನಲ್ಲಿದ್ದು ಪ್ರಾಣ ಎಂದೆನಿಸಿ ಪುರುಷಾಗ್ನಿಯ ಧೂಮ ಎನಿಸಿದೆ. ಪ್ರದ್ಯುಮ್ನ ಸಂಕರ್ಷಣ ರೂಪ ಪುರುಷನ ನಾಲಗೆಯಲ್ಲಿದ್ದು ಜಿಹ್ವಾ

---

1. 'ಪುರುಷೋ ವಾವ ಗೌತಮಾಗ್ನಿಃ । ತಸ್ಯ ವಾಗೇವ ಸಮಿತ್ ।
ಪ್ರಾಣೋ ಧೂಮಃ । ಜಿಹ್ವಾರ್ಚಿಃ । ಚಕ್ಷುರಂಗಾರಾಃ ।
ಶ್ರೋತ್ರಂ ವಿಸ್ಫುಲಿಂಗಾಸ್ತಸ್ಮಿನ್ನಾಗ್ನೌ ದೇವಾ ಅನ್ನಂ ಜುಹ್ವತಿ ತಸ್ಯಾ
ಆಹುತೇಃ ರೇತಃ ಸಂಭವತಿ' —ಛಾಂ. ಉ. 5-2-9

ಎಂದೆನಿಸಿ ಪುರುಷಾಗ್ನಿಯ ಕಿರಣವೆನಿಸಿದೆ. ಪ್ರದ್ಯುಮ್ನಪ್ರದ್ಯುಮ್ನ ರೂಪವು ಪುರುಷನ ಚಕ್ಷುರಿಂದ್ರಿಯದಲ್ಲಿದ್ದು 'ಚಕ್ಷುಃ' – ಎಂದೆನಿಸಿ ಪುರುಷಾಗ್ನಿಯ ಕೆಂಡ ಎನಿಸಿದೆ. ಪ್ರದ್ಯುಮ್ನ ಅನಿರುದ್ಧ ರೂಪವು ಪುರುಷನ ಶ್ರೋತ್ರದಲ್ಲಿದ್ದು ಶ್ರೋತ್ರ ಎಂದೆನಿಸಿ ಪುರುಷಾಗ್ನಿಯ ಕಿಡಿಗಳೆನಿಸಿವೆ. ಹೀಗೆ ಪುರುಷಾಗ್ನಿಯನ್ನು ನಿರೂಪಿಸಿದ ಉಪನಿಷತ್ತು, ಅಂತಹ ಪುರುಷಾಗ್ನಿಯಲ್ಲಿ ದೇವತೆಗಳು ಜೀವಾತ್ಮನನ್ನು ಅನ್ನದ ಜೊತೆಗೆ ಹೋಮಿಸುತ್ತಾರೆ. ಆ ಅನ್ನದ ಆಹುತಿಯಿಂದಾಗಿ ರೇತಸ್ಸು ಹುಟ್ಟಿಕೊಳ್ಳುವುದೆಂದು ತಿಳಿಸಿದೆ.

ಹರಿಕಥಾಮೃತ ಸಾರದಲ್ಲಿ ಯೋಷಿದಗ್ನಿಯಲ್ಲಿ ನಡೆಸಲಾಗುವ ಜೀವಾತ್ಮನ ಹೋಮವನ್ನು ಹೀಗೆ ಸಂಗ್ರಹಿಸಲಾಗಿದೆ—

"ಮತ್ತೆ ಯೋಷಾಗ್ನಿಯಲಿ ತಿಳಿವುದು । ಪಸ್ಥತತ್ತ್ವವೆ ಸಮಿಧಿಕಾವೋ ।
ತ್ಪತ್ತಿಪರ ಮಾತುಗಳೆ ಧೂಮವು ಯೋನಿ ಮಹದರ್ಚಿ ॥
ತತ್ಪ್ರವೇಶಾಂಗಾರ ಕಿಡಿಗಳು । ಉತ್ಸಹಗಳುತ್ಸರ್ಜನವೆ ಪುರು ।
ಷೋತ್ತಮನಿಗವದಾನವೆನೆ ಕೈಕೊಂಡು ಮನ್ನಿಸುವ" [1]

ಸ್ತ್ರೀಯನ್ನು ಅಗ್ನಿ ಎಂಬುದಾಗಿಯಷ್ಟೇ ಭಾವಿಸಿದರೆ ಸಾಲದು; ಅನಿರುದ್ಧ ನಾಮಕ ಭಗವಂತನು 'ಯೋಷಾ' ನಾಮಕನಾಗಿ ಅನಿರುದ್ಧನಾರಾಯಣನೇ ಮುಂತಾದ ಐದು ರೂಪಗಳಿಂದ ಸ್ತ್ರೀಯಲ್ಲಿ ಇರುವನೆಂದು ತಿಳಿಯಬೇಕೆಂದು 'ಸಾಮಸಂಹಿತೆ'ಯ ಮೂಲಕ ವಿವರಿಸಿರುವರು.

ಅನಿರುದ್ಧನಾರಾಯಣ ಎಂಬ ಭಗವದ್ರೂಪವು ಸ್ತ್ರೀಯ ಉಪಸ್ಥದಲ್ಲಿದ್ದು, ಉಪಸ್ಥನಾಮಕನಾಗಿ ಯೋಷಿದಗ್ನಿಯ ಸಮಿಧೆ ಎನಿಸಿದೆ. ಅನಿರುದ್ಧ ವಾಸುದೇವ ಎಂಬ ರೂಪವು ಸಂಭೋಗಕ್ಕಾಗಿ ಸ್ತ್ರೀಪುರುಷರಲ್ಲಿ ನಡೆಯುತಕ್ಕ ಸಂಭಾಷಣೆಯಲ್ಲಿದ್ದು ಉಪಮಂತ್ರಣ ಎನಿಸಿ ಯೋಷಿದಗ್ನಿಯ ಹೊಗೆ ಎನಿಸಿದೆ. ಅನಿರುದ್ಧಸಂಕರ್ಷಣ ಎಂಬ ರೂಪವು ಸ್ತ್ರೀಯ ಯೋನಿಯಲ್ಲಿದ್ದು ಯೋನಿ ನಾಮಕನಾಗಿ ಯೋಷಿದಗ್ನಿಯ ಕಿರಣ ಎನಿಸಿದೆ. ಅನಿರುದ್ಧಪ್ರದ್ಯುಮ್ನ

---

1. ಯೋಷಾ ವಾವ ಗೌತಮಾಗ್ನಿಸ್ತಸ್ಯಾ ಉಪಸ್ಥ ಏವ ಸಮಿದ್
ಯದುಪಮಂತ್ರಯತೇ ಸ ಧೂಮೋ ಯೋನಿರರ್ಚಿರ್ಯದಂತಂಕರೋತಿ
ತೇಽಂಗಾರಾ ಅಭಿನಂದಾ ವಿಸ್ಫುಲಿಂಗಾಸ್ತಸ್ಮಿನ್ನೇ—
ವಾಸ್ಮಿನ್ನಾಗ್ನೌ ದೇವಾ ರೇತೋ ಜುಹ್ವತಿ ತಸ್ಯಾ ಆಹುತೇರ್ಗರ್ಭಃ
ಸಂಭವತಿ" —ಛಾಂ. ಉ. 5-2-10.

ರೂಪವು ಸ್ತ್ರೀಯ ಯೋನಿಯ ಒಳಗೆ ನಡೆಯುವ ಸುರತ ವ್ಯಾಪಾರದಲ್ಲಿದ್ದು ಅಂತಃಕರಣನಾಮಕನಾಗಿ ಯೋಷಿದಗ್ನಿಯ ಕೆಂಡ ಎನಿಸಿದೆ. ಅನಿರುದ್ಧ ಅನಿರುದ್ಧ ಎಂಬ ಭಗವದ್ರೂಪವು ಸುರತದಿಂದ ಉಂಟಾಗುವ ಸಂತೋಷದಲ್ಲಿದ್ದು ಅಭಿನಂದ ನ್ನಾಮಕವಾಗಿ ಯೋಷಿದಗ್ನಿಯ ಕಿಡಿಗಳೆನಿಸಿವೆ.

ಅನಿರುದ್ಧ ಎಂಬ ಈ ಯೋಷಾಗ್ನಿಯಲ್ಲಿ ದೇವತೆಗಳು ರೇತಸ್ಸಿನಲ್ಲಿರುವ ಜೀವನನ್ನು ಹೋಮಿಸುವರು. ಈ ರೇತಸ್ಸಿನ ಆಹುತಿಯಿಂದಾಗಿ ಗರ್ಭವು ಹುಟ್ಟಿಕೊಳ್ಳುವುದು.

ಈ ರೀತಿಯಾಗಿ ಸ್ತ್ರೀಯು ತನ್ನ ಪತಿಯ ಸಮಾಗಮದ ಸಂದರ್ಭದಲ್ಲಿ ಪ್ರದ್ಯುಮ್ನನಾಮಕ ಭಗವದ್ರೂಪಕ್ಕೆ ಆಶ್ರಯನಾಗಿದ್ದು ತನ್ನ ಪತಿ ಹಿಂದೆ ಅನ್ನ ದಲ್ಲಿದ್ದ ಜೀವನ ಆಹುತಿಗೆ ಹೇಗೆ ಅಗ್ನಿ ಎನಿಸಿದ್ದ ಎಂಬುದನ್ನು, ಪ್ರಕೃತ ಅನಿರುದ್ಧರೂಪಿ ಭಗವಂತನು ತನ್ನಲ್ಲಿದ್ದು ತಾನು ರೇತಸ್ಸಿನಲ್ಲಿರುವ ಜೀವನ ಆಹುತಿಗೆ ಹೇಗೆ ಅಗ್ನಿ ಎನಿಸಿರುವನೆಂಬುದನ್ನು ಅನುಸಂಧಾನ ಮಾಡುತ್ತಿರಬೇಕು.

ಸ್ತ್ರೀಯು ತನ್ನ ಶೋಣಿತದಲ್ಲಿ ಅಗ್ನ್ಯಂತರ್ಗತನಾದ ಸ್ತ್ರೀರೂಪಿ ಜನಾರ್ದನನ ಸನ್ನಿಧಾನವಿರುವುದರಿಂದ ಪುರುಷನು ಶೋಣಿತದ ವಿಷಯದಲ್ಲಿ ಜುಗುಪ್ಸೆ ಪಡುವು ದಿಲ್ಲ. ಹಾಗೆಯೇ ಪುರುಷನ ರೇತಸ್ಸಿನಲ್ಲಿ ಆದಿತ್ಯಾಂತರ್ಗತನಾದ ವಿಷ್ಣು ಇದ್ದಾನೆ– ಆದ್ದರಿಂದ ಆ ರೇತಸ್ಸಿನ ವಿಷಯದಲ್ಲಿ ಜುಗುಪ್ಸೆ ತಾಳಬಾರದೆಂದು ವಿವೇಚಿಸಿ ಕೊಳ್ಳಬೇಕು.[1]

ಪ್ರಜಾಪತಿ ನಾಮಕ ಭಗವಂತನು ಪ್ರಜಾಸೃಷ್ಟಿ ನಡೆಸಲು ಮಾಧ್ಯಮ ರನ್ನಾಗಿ ಪ್ರಾಣದೇವನನ್ನೂ, ಭಾರತೀದೇವಿಯನ್ನೂ ಸೃಷ್ಟಿಸಿದ್ದು, ಹಗಲು ರಾತ್ರಿಗಳನ್ನೊಳಗೊಂಡ ಸಮಗ್ರ ದಿನದಲ್ಲಿ ಅಂತಹ ಭಗವಂತನಿದ್ದರೆ, ಹಗಲಲ್ಲಿ ಪ್ರಾಣನೂ, ರಾತ್ರಿಯಲ್ಲಿ ಭಾರತೀದೇವಿಯೂ, ಹಾಗೆಯೇ ದಂಪತಿಯರಲ್ಲಿ ಭಗವಂತನಿದ್ದರೆ, ಪತಿಯಲ್ಲಿ /ಪ್ರಾಣನೂ, ಪತ್ನಿಯಲ್ಲಿ ಭಾರತಿಯೂ ಇದ್ದು ಕೊಂಡು — ಪ್ರಜಾಪತಿನಾಮಕ ಭಗವಂತನು ರಾತ್ರಿಯಲ್ಲಿ ಪ್ರಾಣಭಾರತಿಯರ ಸನ್ನಿಧಾನಕ್ಕೆ ಪಾತ್ರರಾದ ದಂಪತಿಗಳ ಮೂಲಕ ಸೃಷ್ಟಿಕಾರ್ಯವನ್ನು ನಡೆಸುವನು.

---

1. "....ಯದೇತದ್ ಸ್ತ್ರಿಯಾಂ ಲೋಹಿತಂ ಭವತ್ಯಗ್ನೇಸ್ತದ್ ರೂಪಮ್
ತಸ್ಮಾದ್ ತಸ್ಮಾನ್ನ ಬೀಭತ್ಸೇತಾಥ ಯದೇತದ್ ಪುರುಷೇ ರೇತೋ
ಭವತ್ಯಾದಿತ್ಯಸ್ಯ ತದ್ರೂಪಂ ತಸ್ಮಾತ್‌ತಸ್ಮಾನ್ನ ಬೀಭತ್ಸೇತ...."
— ಐತರೇಯೋಪನಿಷತ್ತು (2-2-6-15)

ಷಟ್‌ಪ್ರಶ್ನೋಪನಿಷತ್ತು ಪ್ರಸ್ತುತಪಡಿಸಿರುವ ಈ ಪ್ರಮೇಯವನ್ನು ಶ್ರೀ ಮಧ್ವಾಚಾರ್ಯರು 'ಪ್ರಜಾಪತಿಸಂಹಿತೆ'ಯ [1] ಮೂಲಕ ಸ್ಪಷ್ಟಪಡಿಸಿರುವರು.

ಹೀಗೆ ಹಗಲಲ್ಲಿ ಪತಿಯಲ್ಲಿ ಸನ್ನಿಧಾನಾತಿಶಯವನ್ನೂ, ರಾತ್ರಿಯಲ್ಲಿ ಪತ್ನಿಯಲ್ಲಿ ಭಾರತೀದೇವಿಯ ಸನ್ನಿಧಾನಾತಿಶಯವನ್ನೂ ಗುರುತಿಸಿಕೊಟ್ಟ ಉಪನಿಷತ್ತು, ಹಗಲಲ್ಲಿ ಪತ್ನಿಯಲ್ಲಿ ಭಾರತೀದೇವಿಯ ಸನ್ನಿಧಾನ ಇಲ್ಲದಿರುವುದರಿಂದ ಆಗ ಪ್ರಾಣದೇವನ ಸನ್ನಿಧಾನಾತಿಶಯಕ್ಕೆ ಒಳಗಾಗಿರುವ ಪತಿಯು ಪತ್ನಿಯ ಜೊತೆ ಸಮಾಗಮ ನಡೆಸಿದಲ್ಲಿ ತನ್ನ ವೀರ್ಯದ ಮೂಲಕ ಪ್ರಾಣನನ್ನು ಭಾರತೀದೇವಿಯ ಜೊತೆಗೆ ಸಂಯೋಜಿಸದೆ ಬೇರೆಲ್ಲಿಗೋ ಹಾಕಿದಂತಾದೀತು! ರಾತ್ರಿಯಲ್ಲಾದರೆ ಪತ್ನಿಯಲ್ಲಿ ಭಾರತೀದೇವಿಯ ಸನ್ನಿಧಾನ ಇರುವುದು; ಪತಿಯಲ್ಲೂ ಪ್ರಾಣನ ಸನ್ನಿಧಾನವಿರುವುದು. ಆದ್ದರಿಂದ ಪತಿ ಪತ್ನಿಯಲ್ಲಿ ವೀರ್ಯಾಧಾನ ನಡೆಸಿದರೆ ಭಾರತೀ ಪ್ರಾಣರ ಸಮಾಗಮ ನಡೆಸಿದಂತಾಗುವುದು. ಆದ್ದರಿಂದ ರಾತ್ರಿಯಲ್ಲಿ ಸಮಾಗಮ ನಡೆಸುವುದು ಬ್ರಹ್ಮಚರ್ಯಕ್ಕೆ ಸಮಾನವಾದುದೆಂದು ರಾತ್ರಿ ಕಾಲದಲ್ಲಿಯೇ ಸ್ತ್ರೀ ಪುರುಷರ ಸಮಾಗಮ ನಡೆಯಬೇಕೆಂಬುದಕ್ಕೆ ಕಾರಣ ತೋರಿಸಿ ಒತ್ತು ಕೊಟ್ಟಿರುವುದನ್ನು ಗಮನಿಸಬೇಕು. [2]

ಒಬ್ಬಳೇ ಪತ್ನಿಯ ಋತುಕಾಲದಲ್ಲಷ್ಟೇ ಸಮಗಮ ನಡೆಸುವುದು ಪ್ರಾಜಾಪತ್ಯ ಬ್ರಹ್ಮಚರ್ಯವೆನಿಸುವುದೆಂದು ತಿಳಿಸಿರುವ 'ವ್ಯಾಸಸ್ಮೃತಿ' [3] ಯಿಂದ ಸ್ತ್ರೀ ಪುರುಷ ಸಮಾಗಮ ಋತುಕಾಲದಲ್ಲಷ್ಟೇ ನಡೆಯಬೇಕಾದದ್ದೆಂಬುದು ಸೂಚಿತ.

ಗೃಹಿಣಿ ಸಮಾಗಮದ ವಿಷಯದಲ್ಲಿ ಶಾಸ್ತ್ರದಲ್ಲಿ ಬಂದಿರುವ ಮೇಲಿನ ವಿಷಯಗಳನ್ನೆಲ್ಲ ಅರಿತು ಆ ವಿಷಯಗಳ ಹಿನ್ನೆಲೆಯಲ್ಲಿ ಸರಿಯಾದ ಅನುಸಂಧಾನವನ್ನು ತಂದುಕೊಳ್ಳಬೇಕು. ಅಲ್ಲದೆ, ಪತಿ ಆದಷ್ಟು ಈ ಅನುಸಂಧಾನಪೂರ್ವಕವಾಗಿ ನಡೆದುಕೊಳ್ಳುವಂತೆ ಸೂಕ್ತವಾದ ನೆರವು ಹಾಗೂ ಸ್ಫೂರ್ತಿಯನ್ನು ನೀಡಬೇಕು.

---

1. ಅಹೋರಾತ್ರೇ ತು ಭಗವಾನ್ ಪ್ರಾಣೋ ಹ್ಯಹನಿ ವಾಙ್‌ನಿಶಿ ।
ದಂಪತ್ಯೋರ್ಭಗವಾನ್ ವಿಷ್ಣುಃ ಭಾರ್ಯಾಸ್ಥಾ ತು ಸರಸ್ವತೀ ।
ಭರ್ತೃಸ್ಥಃ ನ ಸ್ವಯಂ ವಾಯುಃ ಏವಂ ಜಾನನ್ ವಿಮುಚ್ಯತೇ ।
—ಪ್ರಜಾಪತಿಸಂಹಿತಾ (ಷಟ್ 1-3-3)

2. ಪ್ರಾಣಂ ವಾ ಏತೇ ಪ್ರಸ್ಕಂದಂತಿ ಯೇ ದಿವಾ ರತ್ಯಾ
ಸಂಯುಜ್ಯಂತೇ । ಬ್ರಹ್ಮಚರ್ಯಮೇವ ತದ್ಯದ್ರಾತ್ರೌ ರತ್ಯಾ ಸಂಯುಜ್ಯಂತೇ ।
—ಷಟ್. ಪ್ರ. (1-3-2)

3. ಪ್ರಾಜಾಪತ್ಯಬ್ರಹ್ಮಚಯಮೇಕಭಾರ್ಯರ್ತುಗಾಮಿತಾ
—ವ್ಯಾಸಸ್ಮೃತಿ (ಭಾಗ. ತಾ. ನಿ. 3-13-42)

**ಪರಿಶಿಷ್ಟ: ೧೧**

# ರಜಸ್ವಲೆಯರು ತಂದುಕೊಳ್ಳಬೇಕಾದ ಅನುಸಂಧಾನ

ಶಾರೀರಿಕ ಪರಿವರ್ತನೆಯೊಂದಕ್ಕಾಗಿ ಅಷ್ಟೊಂದು ಅಸ್ಪೃಶ್ಯತಾ ಭಾವನೆಯನ್ನು ಯಾಕೆ ತಾಳಬೇಕು? ಎಂದು ಕೆಲವು ಸ್ತ್ರೀಯರು ರಜಸ್ವಲಾಧರ್ಮದ ಬಗ್ಗೆ ಆಕ್ಷೇಪ ಎತ್ತಿದರೆ, ಮತ್ತೆ ಕೆಲವರು 'ಈ ದಂಡನೆ ನಮಗೆ ಯಾಕೆ ದೊರಕಿತೋ? ದೇವೇಂದ್ರನಿಗೆ ಬಂದ ಬ್ರಹ್ಮಹತ್ಯೆಗೆ ಪಾಲುದಾರರಾಗಿ ನಿರಪರಾಧಿನಿಯರಾದ ನಾವು ಈ ಅಸ್ಪೃಶ್ಯತೆಯ ದಂಡನೆಯನ್ನು ಅನುಭವಿಸುವುದರಲ್ಲಿ ಏನು ಔಚಿತ್ಯವಿದೆ? —ಎಂದು ರಜಸ್ವಲಾಧರ್ಮಾನುಷ್ಠಾನಕ್ಕಾಗಿ ಅಸಮಾಧಾನ ತಾಳುವುದುಂಟು.

**ರಜಸ್ವಲಾ ಧರ್ಮಾನುಷ್ಠಾನದ ಹಿನ್ನೆಲೆ:**

ಆ ಮೂರು ದಿನಗಳಲ್ಲಿ ದೇಹ ದೋಷಪ್ರಯುಕ್ತ ಸಾಂದ್ರತೆಗೊಳಗಾಗಿ ಅಸ್ಪೃಶ್ಯವೆನಿಸುವುದೆಂದು ವೈಜ್ಞಾನಿಕವಾಗಿ ವೈದ್ಯಕೀಯವಾಗಿ ಸಿದ್ಧವಾಗಿರುವುದು.

ಅಲ್ಲದೆ, ರಜಸ್ವಲಾಧರ್ಮಾನುಷ್ಠಾನದ ಹಿನ್ನೆಲೆಯನ್ನು ಆಧ್ಯಾತ್ಮಿಕವಾಗಿ ಚೆನ್ನಾಗಿ ಪರಿಶೀಲಿಸಿದಲ್ಲಿ ಮೇಲಿನ ಎರಡು ಬಗೆಯ ಪ್ರತಿಕ್ರಿಯೆಗಳೂ ಅರ್ಥಹೀನವಾದವೆಂಬುದು ಸ್ಪಷ್ಟವಾಗಬಲ್ಲದು.

ರಜಸ್ವಲೆಯನ್ನು ಅಸ್ಪೃಶ್ಯಳನ್ನಾಗಿ ಪರಿಗಣಿಸುವುದು ರಜಸ್ಸಿನ ಸ್ರಾವರೂಪವಾದ ದೈಹಿಕ ಪರಿವರ್ತನೆಗಾಗಿಯಷ್ಟೇ ಅಲ್ಲ. ರಜಸ್ಸಿನ ಸ್ರಾವ ಆ ಸಂದರ್ಭದ ಆಕೆಯ ಅಸ್ಪೃಶ್ಯತೆಯನ್ನು ಜ್ಞಾಪಿಸಿಕೊಡುವಂತಹದ್ದಷ್ಟೇ. ಅಸ್ಪೃಶ್ಯತೆಗೆ ಜ್ಞಾಪಕವಾಗಿ ಪರಿಗಣಿತವಾಗಿರುವ ರಜಸ್ಸಿನ ಸ್ರಾವವನ್ನು ಅಸ್ಪೃಶ್ಯತೆಗೆ ಅದೇ ನಿಮಿತ್ತ ಎಂದು ಭ್ರಮಿಸಿರುವುದಷ್ಟೇ. ರಜಸ್ಸಿನ ಸ್ರಾವವೇ ಅಸ್ಪೃಶ್ಯತೆಗೆ ಕಾರಣ ಎಂದು ಶಾಸ್ತ್ರಕಾರರ ಅಭಿಪ್ರಾಯವಾಗಿದ್ದಲ್ಲಿ ಮೂರು ದಿನಗಳ ಬಳಿಕವೂ ರಜಸ್ಸಿನ ಸ್ರಾವ ನಡೆಯುತ್ತಿದೆ ಎಂದರೆ ಆಗ ಅಸ್ಪೃಶ್ಯತೆ ಇಲ್ಲ—ಎಂಬ ನಿರ್ಣಯವನ್ನು ನೀಡಬಾರದಿತ್ತು, ತಾನೇ? ರಜಸ್ಸಿನ ಸ್ರಾವ ಆಗುತ್ತಿರುವ ಮೂರು ದಿನಗಳ ಅವಧಿಯಲ್ಲಷ್ಟೇ ಮೈಲಿಗೆ; ಮುಂದೆಯೂ ರಜಸ್ಸಿನ ಸ್ರಾವ ನಡೆಯುತ್ತಿದೆ ಎಂದರೆ ಆ ಪ್ರಯುಕ್ತ ರಜಸ್ವಲಾ ಧರ್ಮವನ್ನು ಪಾಲಿಸಬೇಕಾಗಿಲ್ಲ ಎಂದು ತೀರ್ಮಾನಿಸಿರುವ ಶಾಸ್ತ್ರಕಾರರ ಪ್ರಕಾರ ಅಸ್ಪೃಶ್ಯತೆಗೆ ಬರೇ ರಜಸ್ಸಿನ ಸ್ರಾವ ಕಾರಣವೆನಿಸದೆ ಮತ್ತೊಂದು ಕಾರಣವಿದೆ ಎಂಬುದು ಸ್ಪಷ್ಟ.

ವೇದ, ಭಾಗವತಾದಿಗಳಲ್ಲಿ ಪ್ರಸ್ತುತಪಡಿಸಲ್ಪಟ್ಟಿರುವಂತೆ ವಿಶ್ವರೂಪಾಚಾರ್ಯರನ್ನು ಸಂಹರಿಸಿದ ದೇವೇಂದ್ರನಿಗೆ ಆ ಪ್ರಯುಕ್ತ ಬಂದ ಬ್ರಹ್ಮಹತ್ಯೆಯ ನಾಲ್ಕನೇ ಒಂದು ಪಾಲು ಸ್ತ್ರೀಯರಿಂದ ಸ್ವೀಕೃತವಾಗಿದ್ದು ಅಂತಹ ಬ್ರಹ್ಮಹತ್ಯೆಯ ಪರಿಣಾಮವಾಗಿಯೇ ಸ್ತ್ರೀಯರು ಪ್ರತಿ ತಿಂಗಳು ಮೂರು ದಿನಗಳ ಕಾಲ ಅಸ್ಪೃಶ್ಯರೆನಿಸುವರು.

ಬ್ರಹ್ಮಹತ್ಯೆಯೇ ರಜಸ್ಸಾಗಿ ಪ್ರತಿತಿಂಗಳು ಕಾಣಿಸಿಕೊಳ್ಳುವುದೆಂದು ಭಾಗವತಾದಿಗಳಲ್ಲಿ ಹೇಳಲಾಗಿದೆಯಾದರೂ [1] ದೇಹದ ಕಾಲುಷ್ಯರೂಪದಲ್ಲಿರುವ ರಜಸ್ಸು ಬ್ರಹ್ಮಹತ್ಯಾಪಾಪರೂಪದಲ್ಲಿ ಇರುವಂತಹದ್ದೆಂಬುದು ಒಪ್ಪಲಾಗದು. ದೇವೇಂದ್ರನ ವಿತರಣೆಯಿಂದಾಗಿ ಪ್ರತಿ ತಿಂಗಳ ಮೂರು ದಿನಗಳಲ್ಲಿ ಆಕ್ರಮಿಸುವ ಬ್ರಹ್ಮಹತ್ಯಾ ಪಾಪಕ್ಕೆ ದೈಹಿಕ ಪರಿವರ್ತನೆಯಾಗಿ ಸ್ರವಿಸುವ ರಜಸ್ಸು ಜ್ಞಾಪಕವಾಗುವುದೆಂದಷ್ಟೇ ಅಭಿಪ್ರಾಯ. ದೇವೇಂದ್ರ ಎಸಗಿದ ಅಪರಾಧಕ್ಕೆ ನಿರಪರಾಧಿಗಳಾದ ಸ್ತ್ರೀಯರೇಕೆ ಹೀಗೆ ಶಿಕ್ಷೆಯನ್ನು ಅನುಭವಿಸಬೇಕು ? ಎಂದರೆ—ಇದೇನೂ ದೇವೇಂದ್ರ ಬಲಾತ್ಕಾರದಿಂದ ಅಪರಾಧವನ್ನು ಸ್ತ್ರೀಯರ ತಲೆಯ ಮೇಲೆ ಹೊರಿಸಿದ್ದಲ್ಲ. ಲೋಕ ಹಿತಕ್ಕಾಗಿ ತಾನು ಎಸಗಿದ ಬ್ರಹ್ಮಹತ್ಯೆಯನ್ನು ಸ್ತ್ರೀಯರ ಅನುಮತಿ ಪಡೆದು ಅವರಿಗೆ ವಿತರಿಸಿರುವನು. ಸ್ತ್ರೀಯರ ಈ ಉಪಕಾರಕ್ಕಾಗಿ ಅವರಿಗೆ ಒಂದು ವರವನ್ನೂ ನೀಡಿರುವನು. ಗರ್ಭಧಾರಣೆಯ ಬಳಿಕವೂ ಪತಿಯ ಜೊತೆಗೆ ಸುಖ ಪಡೆಯಲು ಬೇಕಾದ ದೈಹಿಕ ವ್ಯವಸ್ಥೆ ದೇವೇಂದ್ರನ ವರದಿಂದಲೇ ದೊರಕಿರವಂತಹದ್ದು. ಈ ವರದ ಮಹಾಲಾಭವನ್ನು ಸ್ತ್ರೀಯರು ಈಗಲೂ ಪಡೆದುಕೊಳ್ಳುತ್ತಿದ್ದಾರೆ. ಒಂದು ವೇಳೆ ಅಂತಹ ವರ ತಮ್ಮ ಪಾಲಿಗೆ ದೊರಕದಿದ್ದರೆ ತಾವು ಜೀವನದಲ್ಲಿ ಎಷ್ಟೊಂದು ನಷ್ಟಕ್ಕೆ ಗುರಿಯಾಗುತ್ತಿದ್ದೆವೆಂಬುದನ್ನು ವಿಶ್ಲೇಷಿಸಿಕೊಂಡರೆಂದರೆ, ದೇವೇಂದ್ರ ನೀಡಿದ ವರದ ಒಳಿತಿನ ಮುಂದೆ ಬ್ರಹ್ಮಹತ್ಯೆಯ ವಿತರಣೆಯಿಂದ ಆಕ್ರಮಿಸುವ ಮೂರು ದಿನಗಳ ಅಸ್ಪೃಶ್ಯತೆ ಏನೂ ಅಲ್ಲ—ಎಂದು ಅನಿಸದಿರದು.

## ಭಗವಂತನ ಸಂಕಲ್ಪವೇ ಮುಖ್ಯ ಕಾರಣ :

ಇನ್ನೂ ಸ್ವಾರಸ್ಯ ಎಂದರೆ ಜಗತ್ತಿನಲ್ಲಿ ಏನೇನು ಆಗುಹೋಗುಗಳಿವೆಯೋ ಅವೆಲ್ಲ ಭಗವಂತನ ಸಂಕಲ್ಪಾನುಸಾರವಾಗಿಯೇ ನಡೆಯುವಂತಹದ್ದು. 'ಪ್ರಕಾಶ ಸಂಹಿತೆ' (ಭಾಗ. ತಾ. 7-6-17-29) ಹೀಗೆಯೇ ತಿಳಿಸುತ್ತಿದೆ—

---

1. **ರಜೋರೂಪೇಣ ತಾಸ್ವಂಹೋ ಮಾಸಿ ಮಾಸಿ ಪ್ರದೃಶ್ಯತೇ । —ಭಾಗ. 6-9-9**

'ಯತ್ತ್ರದ್ ಭಗವತಾ ಕ್ಲೃಪ್ತಂ ತದೇವ ನಿಯತಂ ಭವೇತ್ ।
ಅತೋಽನ್ಯೇಷಾಂ ವರಃ ಶಾಪೋ ಗುಣದೋಷಪ್ರಕರ್ತೃತಾ ।
ಸ್ಮೃತಃ ಪ್ರಾಪ್ತಾದ್ ಭೇದಕೃತಿರ್ವಾಸನಾಽರೂಪಿಣೋ ಯಥಾ'

ಯಾವುದೆಲ್ಲ ಭಗವಂತನಿಂದ ಸಂಕಲ್ಪಿತವಾಗಿದೆಯೋ ಅದೇ ನಿಯತವಾಗಿ ನಡೆಯುವುದು. ಆದುದರಿಂದ ಉಳಿದವರ ವರ, ಶಾಪ, ಒಳ್ಳೆಯದನ್ನು ಮಾಡುವುದು, ಕೆಟ್ಟದನ್ನು ಮಾಡುವುದು — ಇವೆಲ್ಲ ಭಗವಂತನ ಸಂಕಲ್ಪಾನುಸಾರವಾಗಿ ನಡೆಯಬೇಕಾದುದಕ್ಕೆ ಬರೇ ವ್ಯಂಜಕಗಳಷ್ಟೇ.

'ಪ್ರಕಾಶಸಂಹಿತೆ'ಯ ಈ ಸಿದ್ಧಾಂತದ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ದೇವೇಂದ್ರ ಬ್ರಹ್ಮಹತ್ಯೆಯನ್ನು ಸ್ತ್ರೀಯರಿಗೆ ವಿತರಿಸಿದುದು; ಅದಕ್ಕೆ ಪ್ರತಿಯಾಗಿ ವರ ಕೊಟ್ಟುದುದು — ಇವು ಬರೇ ವ್ಯಂಜಕಗಳು. ಸ್ತ್ರೀಯರಿಗೆ ಪ್ರತಿ ತಿಂಗಳ ಮೂರು ದಿನಗಳ ಕಾಲ ಅಸ್ಪೃಶ್ಯತೆ ಉಂಟಾಗಬೇಕೆಂದೂ, ಇಂದ್ರ ನೀಡಿರುವ ವರದಂತೆ ಅವರಿಗೆ ಸುಖದ ಸೌಲಭ್ಯ ಸಿದ್ಧಿಸಬೇಕೆಂದೂ ಮೊದಲೇ ಭಗವಂತನು ಸಂಕಲ್ಪಿಸಿದ್ದ. ಆ ಸಂಕಲ್ಪಾನುಸಾರವಾಗಿಯೇ ಅವು ನಡೆಯುತ್ತಿರುವಂತಹದ್ದು.

ಹೀಗೆ ತಮಗೆ ಬಂದಿರುವ ಮೈಲಿಗೆ ಸ್ಥಿತಿಗೆ ಬರೇ ದೇವೇಂದ್ರ ಕಾರಣನಲ್ಲ. ಸೃಷ್ಟಿಕರ್ತನಾದ ಭಗವಂತನೇ ಅದಕ್ಕೆ ಮುಖ್ಯ ಕಾರಣ—ಎಂದು ವಿವೇಚಿಸಿಕೊಂಡು, ಅದರ ಬಗ್ಗೆ ಸ್ವಲ್ಪವೂ ಅಸಮಾಧಾನಗೊಳ್ಳದೆ ಭಗವಂತನ ಆಜ್ಞಾರೂಪದಲ್ಲಿ ಅದಕ್ಕೆ ಸಂಬಂಧಿಸುವ ನಿಷೇಧಗಳನ್ನು ನಡೆಸಬೇಕು. ಈ ನಿಷೇಧಗಳ ಅನುಸರಣೆಯೂ ಅವನಿಗೆ ಪ್ರಿಯವಾದವುಗಳೆಂದು ಅನುಸಂಧಾನ ಮಾಡಿಕೊಳ್ಳಬೇಕು.

ರಜಸ್ಸಿನ ಸ್ರಾವದ ಆ ಅವಧಿಯಲ್ಲಿ ಯಾವುದೇ ವಿಶಿಷ್ಟವಾದ ಧರ್ಮಾಚರಣೆಗೆ ಅಧಿಕಾರವಿಲ್ಲ. ಆದರೆ ಮನಸ್ಸನ್ನು ಬರಿದಾಗಿ ಇರಿಸಿದರೆ ಕೆಟ್ಟ ಕೆಟ್ಟ ವಿಚಾರಗಳು ಆಕ್ರಮಿಸುವ ಅಪಾಯವಿದೆ. ಆದ್ದರಿಂದ ವಿಶೇಷವಾಗಿ ನಾಮಗಳನ್ನು ಉಲ್ಲೇಖಿಸದೆ ಸಾಮಾನ್ಯವಾಗಿ ಹರಿಸ್ಮರಣೆಯನ್ನು ನಡೆಸುತ್ತಿರಬೇಕು. 'ಪಾಪನಾಶನಃ' 'ಅನಘಃ' ಎಂದೆಲ್ಲ ಎನಿಸುವ ಭಗವಂತನು ತಮಗೆ ದೇವೇಂದ್ರನಿಂದ ಬಂದ ಬ್ರಹ್ಮಹತ್ಯಾ ಪಾಪವನ್ನು ಪರಿಹರಿಸಿ, ತಮ್ಮನ್ನು ಶುದ್ಧಗೊಳಿಸಬೇಕು—ಎಂದು ಚಿಂತಿಸುತ್ತಿರಬೇಕು.

**ದ್ರೌಪದಿಯ ನಿದರ್ಶನ :**

ದ್ರೌಪದೀ ದೇವಿಯ ವಸ್ತ್ರಾಪಹರಣ ನಡೆಸಲು ಹೊರಟಾಗ, ಆಕೆ ರಜಸ್ವಲೆಯಾಗಿದ್ದರೂ ಭಗವಂತನ ಸ್ಮರಣೆಯನ್ನು ನಡೆಸುತ್ತಿದ್ದಳು. ಆಪತ್ತಿನ ಪರಿಹಾರ

ಕ್ಕಾಗಿ ವಿಶೇಷವಾಗಿ ಭಗವಂತನ ಸ್ಮರಣೆಯನ್ನು ನಡೆಸಿದಳೆಂದು ನಿರ್ಣಯಿಸಿರುವ [1] ಶ್ರೀ ಮಧ್ವಾಚಾರ್ಯರು ಆಪತ್ತು ಇಲ್ಲದ ಅವಧಿಯಲ್ಲೂ ಅವಳು ಹರಿಸ್ಮರಣೆಯನ್ನು ನಡೆಸುತ್ತಲೇ ಇದ್ದಳೆಂದು ಸೂಚಿಸಿರುವರು.

ರಜಸ್ವಲೆಯರಾದ ಸ್ತ್ರೀಯರೂ ಹರಿಸ್ಮರಣೆಯನ್ನು ನಡೆಸಬಹುದೆಂಬುದಕ್ಕೆ ಇದೊಂದು ಉತ್ತಮ ನಿದರ್ಶನವಾಗಬಲ್ಲದು.

ಆದ್ದರಿಂದ ರಜಸ್ವಲೆಯರಾದ ಸ್ತ್ರೀಯರು ತಮ್ಮ ಆ ಸ್ಥಿತಿ ಭಗವಂತನ ಸಂಕಲ್ಪಾನುಸಾರವಾಗಿಯೇ ಬಂದಿರುವಂತಹದ್ದೆಂದು ಭಾವಿಸಿ, ಅದರ ಬಗ್ಗೆ ಅಸಮಾಧಾನಗೊಳ್ಳದೆ, ಅದಕ್ಕೆ ಸಂಬಂಧಿಸುವ ನಿಷೇಧಗಳನ್ನು ಭಗವದಾದೇಶರೂಪದಲ್ಲಿ ಅನುಸರಿಸುತ್ತ ಭಗವಂತನ ಸ್ಮರಣೆ ಮಾಡುತ್ತ ಇರಬೇಕು.

## ರಜಸ್ವಲೆ—ವೈಜ್ಞಾನಿಕ ದೃಷ್ಟಿಕೋನ

**—ವಿದ್ಯಾಭೂಷಣ ರಾ. ಅ. ಭಟ್ಟ,**
**ಕಾಶೀಕರ, ಹೊನ್ನಾವರ**

ಬಹುಸಂಖ್ಯ ಅವಿಚಾರಿ–ಬೇಜವಾಬದಾರಿ ಜನರಿಗೆ ಮಾಸಿಕ ಧರ್ಮದಲ್ಲಿ ಅಸ್ಪೃಶ್ಯತೆಯನ್ನು ಪಾಲಿಸುವುದು ಮೂರ್ಖತನದ್ದೆಂದು ತೋರುತ್ತದೆ. ದಿನ ಹೋದಂತೆ ಈ ಮಾಸಿಕ ಅಸ್ಪೃಶ್ಯತೆಯನ್ನು ಪಾಲಿಸದ ಸ್ತ್ರೀಯರ ಸಂಖ್ಯೆ ವೇಗದಿಂದ ಬೆಳೆಯುತ್ತಿದೆ. ನಗರ-ಪಟ್ಟಣದೊಳಗಿನ ಸುಶಿಕ್ಷಿತರೆನಿಸಿಕೊಳ್ಳುವ ಮಹಿಳೆಯರು ಬಹುಸಂಖ್ಯೆಯಲ್ಲಿರುವರು. ಆಂಗ್ಲ ವಿದ್ಯೆಯ ಶಿಕ್ಷಣ ಪಡೆದವರು ಈ ನಿಯಮದ ಬಗ್ಗೆ ತಾತ್ಸಾರ ತೋರಿಸುವರು.

ಈ ವಿಷಯದ ಪಾಶ್ಚಾತ್ಯರ ಸಂಶೋಧನವನ್ನು ಪರಿಶೀಲಿಸುವಾ-ಕಲಕತ್ತೆಯಿಂದ ಹೊರಡುವ "ಟ್ರೂಥ್" ಎಂಬ ಇಂಗ್ಲೀಷ್ ಪಾಕ್ಷಿಕ ಒಂದರ ತಾ॥೧೮-೧-೧೯೫೭ರ ಸಂಚಿಕೆಯಲ್ಲಿ ಪ್ರಕಟವಾದ ಈ ಕೆಳಗಿನ ಲೇಖನವನ್ನು ಇದ್ದಕ್ಕಿದ್ದಂತೆ ಕೊಟ್ಟು ಅದರ ಸಾರಾಂಶವನ್ನು ಕೆಳಗೆ ಕೊಡುತ್ತೇನೆ.

---

1. ವಿಕೃಷ್ಯಮಾಣೇ ವಸನೇ ತು ಕೃಷ್ಣಾ ಸಸ್ಮಾರ ಕೃಷ್ಣಂ ಸುವಿಶೇಷತೋಽಪಿ —ಮ. ಭಾ. ತಾ. ನಿ. 21-364

Abstracts from an article, "Wienklinwock May 20-1920 —In which Prof Schik expresses the opinion that a menstruating woman my be a veritable upastree. (A tree in East India which omits powerfull posion fatal to all who approch it) His attention was first attracted to the subject on the occasion of receiving the fresh, long stemed roses which he had requested a female servent to place in water On the very next day morning the roses had largely withered, the petals having dropped on the table. Greatly surprised he summoned the servent to illuminate the mystery. She said that she had known that the roses would wither, for when she was unwell this phenomenon was always in evidence.

ಸಾರಾಂಶ—"೨೦ ಮೇ ೧೯೨೦ರ ವೀನಕ್ಲಿನವೊಕನ ಲೇಖನದಲ್ಲಿ ಪ್ರೊ॥ಶೇಕನು ಸ್ವಾನುಭವದ ಆಧಾರದಿಂದ ತನ್ನ ವಿಚಾರಗಳನ್ನು ವ್ಯಕ್ತಪಡಿಸಿದ್ದಾನೆ ಅವು ಹೀಗಿರುವುವು-ಅವನು ಹೇಳುತ್ತಾನೆ, ರಜಸ್ವಲಾ ಸ್ತ್ರೀಯು ನಿಶ್ಚಯವಾಗಿ "ಆಪಸ" ಎಂಬ ಹೆಸರಿನ ಗಿಡದ ಹಾಗೆ ವಿಷಯುಕ್ತ ಇರುವಳು. (ಆಪಸ ಎಂಬ ಹೆಸರುಳ್ಳ ಗಿಡ ಈಸ್ಟ ಇಂಡಿಯಾದಲ್ಲಿರುತ್ತದೆ. ಆ ಗಿಡದ ಸಹವಾಸದಿಂದ ಸಾವು ಬರುವಷ್ಟು ವಿಷದ ಪರಿಣಾಮವಾಗುತ್ತದೆ.) ಒಂದು ಸಾರೆ ಅವನು ತನ್ನ ಸೇವಿಕೆಗೆ ಗುಲಾಬಿ ಹೂಗಳನ್ನು ನೀರಲ್ಲಿ ಇಡಲು ಹೇಳಿದನು. ಅವಳು ಹಾಗೆ ಮಾಡಿದಳು. ಆದರೆ ನೀರಲ್ಲಿಟ್ಟಿದ್ದರೂ ಮಾರನೆದಿನ ಆ ಹೂಗಳ ಎಸಳುಗಳು ಒಣಗಿ ಟೇಬಲಿನ ಮೇಲೆ ಉದರಿ ಬಿದ್ದದ್ದು ಅವನು ಕಂಡನು, ಆಶ್ಚರ್ಯಪಟ್ಟು ಅವನು ಆ ಸೇವಿಕೆಗೆ ಕಾರಣ ಕೇಳಲಾಗಿ ಅವಳು ತನ್ನ ಮಾಸಿಕ ಋತುಕಾಲದ ಅವಸ್ಥೆಯಲ್ಲಿ ಯಾವಾಗಲೂ ಹೀಗೆಯೇ ಹೂವು ಒಣಗಿ ಹೋಗುತ್ತದ" ಎಂದಳು.

ಆ ಮಹಿಳೆಯ ಅನುಭವದ ಮೇಲಿಂದ ಆಶ್ಚರ್ಯಪಟ್ಟು ಪ್ರೊ॥ ಶೇಕನು ಸಂಶೋಧನೆಗೆ ಪ್ರಾರಂಭಮಾಡಿದನು. ಮತ್ತು ಈ ಅವಸ್ಥೆಯಲ್ಲಿ ಹೂವು ಅಥವಾ ವನಸ್ಪತಿಗಳ ಮೇಲೆ ಈ ವಿಷದ ಪರಿಣಾಮವು ಯಾವಾಗಲೂ ಆಗುತ್ತದೆ ಎಂದು ಅವನಿಗೆ ಕಂಡು ಬಂತು. ಹಾಗೂ ಈ ಪರಿಣಾಮ ಮೂರು-ನಾಲ್ಕು ದಿನದವರೆಗೆ ಬಾಳಿರುವುದಾಗಿಯೂ ಅವನಿಗೆ ಕಂಡುಬಂತು.

"On the following day, the tests Were repeated, and the flowers held in the hands of menstruating woman showed some alterations in three minutes after she had taken them On the third day of manstruation, the pernicious effect were but slight."

ಸಾರಾಂಶ—"ಋತುವಾದ ಎರಡನೆ ದಿನವಂತೂ ಹೀಗೆ ಕಂಡುಬಂತು. ಅವಳ ಕೈಯಲ್ಲಿದ್ದ ಹೂವು ಮೂರೇ ನಿಮಿಷಗಳಲ್ಲಿ ಒಣಗಹತ್ತಿದವು. ಮೂರನೆ ದಿವಸವೂ ಅವಳು ವಿಷದ ಪರಿಣಾಮವುಳ್ಳವಳಿದ್ದಳು. ಆದರೆ ಅದರ ತೀವ್ರತೆ ಸ್ವಲ್ಪ ಕಡಿಮೆಯಾಗಿತ್ತು."

ಕೊನೆಯಲ್ಲಿ ಪ್ರೊ॥ಶೇಕನು ನಿರ್ಣಯಿಸಿದ್ದೇನೆಂದರೆ ಮಾಸಿಕ ಅವಸ್ಥೆಯಲ್ಲಿ ಸ್ತ್ರೀಯ ರೋಮರಂಧ್ರಗಳಿಂದ ಒಂದು ಪ್ರಕಾರದ ವಿಷಾರಿ ಕೀಟಾಣುಗಳು ಹೊರ ಬೀಳುತ್ತಿರುವವು. ಹಾಗೂ ಅದರ ಪರಿಣಾಮ ಹೂಗಳ ಮೇಲೆ ಮತ್ತು ವನಸ್ಪತಿಗಳ ಮೇಲೆ ಆಗುತ್ತದೆ. ಮತ್ತು ಆ ಸ್ತ್ರೀಯ ಹತ್ತಿರದ ಆಚೀಚಿನ ವಾತಾವರಣ ಕೂಡ ಅಶುದ್ಧವಾಗುತ್ತದೆ. ಇದೇ ವಿಷಯದ ತಪಾಸು ಮಾಡುವಾಗ ಅವನಿಗೆ ಹೀಗೆ ಕಂಡುಬಂತು, ಅಮೇರಿಕೆಯ ಅನೇಕ ಹಳ್ಳಿಪಳ್ಳಿಯಲ್ಲಿ ರಜಸ್ವಲಾ ಹೆಂಗಸರಿಗೆ ಹೂ–ಹಣ್ಣಿನ ತೋಟಗಳಲ್ಲಿ ಪ್ರವೇಶವನ್ನು ನಿಷೇಧಿಸಲಾಗುತ್ತದೆ. ಹಾಗೂ ಹಣ್ಣು ಕಾಯಿ ಗಿಡಗಳಿಗೆ ಅವರ ಸ್ಪರ್ಶವಾದಲ್ಲಿ ಕಾಯಿ ಉದುರುತ್ತವೆ.

"For these women are not allowed to climb upon fruii trees when in bloom and even later lest the fruit crop should spoil.

ಸಾರಾಂಶ—"ಅನೇಕ ಹಳ್ಳಿಯಲ್ಲಿ ರಜಸ್ವಲಾ ಹೆಂಗಸರನ್ನು ಗಿಡ-ಮರಗಳ ಮೇಲೆ ಹತ್ತಲಿಕ್ಕೆ ಕೊಡುವುದಿಲ್ಲ. ಕಾರಣ ಗಿಡ-ಮರದಲ್ಲಿದ್ದ ಹಣ್ಣು-ಕಾಯಿ ಉದುರಿಬೀಳುತ್ತವೆ."

ಈ ವಿಷಯದ ಅನುಭವ ನಮ್ಮಲ್ಲೂ ಯಾವಾಗಲೂ ಬರುತ್ತದೆ. ತುಲಸಿಯ ಗಿಡಗಳ ಮೇಲೆ ರಜಸ್ವಲೆಯ ನೆರಳು ಬಿದ್ದರೆ ತುಳಸಿ ಗಿಡಗಳು ಬಾಡಿ ಸಾಯುತ್ತವೆ. ಲಿಂಬೆ, ದಾಳಿಂಬ, ಕಿತ್ತಲೆ, ಮೊಸಂಬಿ, ವೀಳ್ಯದ ಎಲೆಬಳ್ಳಿ ಮುಂತಾದ ಕೆಲವು ವಿಶಿಷ್ಟ ಗಿಡಗಳ ಮೇಲೆಯೂ ಬರೆ ಅವರ ನೆರಳು ಬಿದ್ದರೂ ಕೂಡ ಅದರ ಕಾಯಿ ಹುಳಗೆಟ್ಟು ಕಳಚಿ ಬೀಳುತ್ತವೆ. ಹಾಗೂ ಗಿಡಗಳು ಬಾಡಿಹೋಗುತ್ತವೆ, ಹೀಗೆ ಅನುಭವವುಂಟು.

ಇಷ್ಟೇ ಅಲ್ಲ ಸಜೀವ ಪ್ರಾಣಿಗಳ ಮೇಲೂ ಈ ವಿಷಾರೀ ಪರಿಣಾಮವು ಪ್ರೊ॥ ಶೇಕನಿಗೆ ಕಂಡುಬಂತು.

"The menstruating woman in an orchard can cause the insects to drop from the trees and those women were used for expelling the cantharis bettle from the trees."

ಸಾರಾಂಶ—"ರಜಸ್ವಲೆಯ ಸ್ಪರ್ಶ ಗಿಡಕ್ಕೆ ಆದರೆ ಕೆಲವು ಜಾತಿಯ ಸಜೀವ ಹುಳಗಳು ಪಟಪಟನೆ ಸತ್ತು ಕೆಳಗೆ ಬೀಳುತ್ತವೆ. ಕೆಲವು ಕಡೆಯಲ್ಲಿಂತೂ ಒಂದೊಂದು

ಜಾತಿಯ ಹುಳಗಳು ತೋಟದಲ್ಲಿ ಅವಳು ಬಂತೆಂದರೆ ಗಿಡಗಳ ಮೇಲಿಂದ ಹಾರಿ ಹೋಗುತ್ತವಾದ್ದರಿಂದ ಆ ಹುಳಹುಪ್ಪಟ್ಟಿಗಳನ್ನು ನಿವಾರಿಸಿಕೊಳ್ಳಲು ಈ ಹೆಂಗಸರ ಉಪಯೋಗವನ್ನು ಮಾಡಿಕೊಳ್ಳುತ್ತಾರೆ."

ಪ್ರೊ॥ ಶೇಕನ ಸಂಶೋಧನದ ಅನುಭವ ಓದುಗರಿಗೂ ಬರಬಹುದು. ಮನುಷ್ಯನ ಶರೀರಕ್ಕೆ ಮೂರುವರೆ ಕೋಟಿ ರೋಮರಂಧ್ರಗಳಿರುತ್ತವೆ, ಮಾನವನ ಶರೀರದೊಳಗಿನ ಅನಂತ ಅಶುದ್ಧ ವಿಷಾರಿದ್ರವ್ಯಗಳು ಈ ರೋಮ ರಂಧ್ರದೊಳಗಿಂದ ಹೊರಗೆ ಬಿದ್ದು ಹೊರಗಿನ ವಾತಾವರಣದಲ್ಲಿ ಬಿತ್ತರಿಸುತ್ತವೆ. ಹಾಗೂ ಅವುಗಳ ಪರಿಣಾಮ ಸಹವಾಸದಲ್ಲಿದ್ದ ಹೂಗಳು, ಫಲಗಳು, ಗಿಡ-ಮರ, ಹುಳ-ಹುಪ್ಪಟಿ ಮಕ್ಕಳು—ಮಾನವರು ಇವುಗಳ ಮೇಲೆ ಆಗುತ್ತಿರುತ್ತದೆ. ರೋಗಗ್ರಸ್ತರ ಸಹವಾಸದಿಂದ ರೋಗ ಅಂಟುವ ಕಾರಣವು ಇದೇ. ಅಶುದ್ಧ ಅವಸ್ಥೆಯಲ್ಲಿರುವ ಮನುಷ್ಯನ ಬೆವರು, ಅವರ ವಸ್ತ್ರಗಳು, ಅವರ ಉಗುಳು-ಮೂತ್ರ-ಮಲ, ಅವರು ಕೂತುಕೊಂಡ ಜಾಗ, ಹಾಗೂ ಅವನು ವಾಸವಾಗಿರುವ ಜಾಗದ ಸುತ್ತ-ಮುತ್ತಲಿನ ವಾತಾವರಣವೂ ಅಶುದ್ಧವಾಗುತ್ತದೆ, ಈ ಪರಿಣಾಮವು ಆ ಅಶುದ್ಧ ವ್ಯಕ್ತಿಯ ನೆರಳು ಎಲ್ಲಿಯವರೆಗೆ ಬೀಳುವುದೋ ಅಷ್ಟು ಪರಿಸರದಲ್ಲಿಯಂತು ಖಾತ್ರಿಯಿಂದ ಹಾಗೂ ಅಧಿಕಾಧಿಕವಾಗುತ್ತದೆ. ಇದರ ಪ್ರತ್ಯಕ್ಷ ಅನುಭವ ಅನೇಕ ಪ್ರಸಂಗದಲ್ಲಿ ಬರುತ್ತದೆ. ಯಾವದಾದರೊಂದು ದಷ್ಟಪುಷ್ಟ ಬಾಲಕನ ಮೇಲೆ ರಜಸ್ವಲೆಯ ನೆರಳು ಬಿದ್ದರೆ ಮುಟ್ಟುದೋಷದಿಂದ ಬಾಲೆಗೆ ಮುಡದುಸ್ (ರಿಕೆಟ್ಸ್) ವಾಗುವುದು. ಬಹಿಷ್ಠೆ ತಾಯಿಯು ಮೈಹಾಲು ಕುಡಿದ ಬಾಲೆಗ ರೋಗರುಜಿನವಾಗುತ್ತದೆಯಾಗಿ ಅನುಭವವಿರುತ್ತದೆ.

ರಜಸ್ವಲೆಯ ಸ್ಪರ್ಶದಿಂದ ಇಂಪಾದ ಸ್ವರ ಉಳ್ಳ ಸಾರಂಗ-ತಂಬೂರಿ ಅಪಸ್ವರವುಳ್ಳದ್ದಾಗುತ್ತದೆ. ಅಷ್ಟೇ ಅಲ್ಲ ತಂಬೂರಿ ಮುಂತಾದ ವಾದನಗಳುಳ್ಳ ಕೋಣೆಯಲ್ಲಿ ಅವಳು ಪ್ರವೇಶಿಸಿದರೆ ಕೂಡ ಅವುಗಳ ಸ್ವರ ಭಂಗವಾಗುತ್ತದೆ, ಒಂದೊಂದು ರಜಸ್ವಲೆಯ ಸ್ಪರ್ಶದಿಂದ ಗಾಜು ಒಡೆಯುತ್ತದೆ.

ಈಗ ನಮ್ಮ ಆಯುರ್ವೇದದಂತೆ ನೋಡಿದರೂ ಅದೇ ಪ್ರಕಾರ ತೋರುತ್ತದೆ. ರಜೋದರ್ಶನವೆಂದರೇನು ? ಎಂಬ ವಿಚಾರ ಪೀಯೂಷಪಾಣಿ ಭಗವಾನ್ ಧನ್ವಂತರಿಯೇ ಸುಶ್ರುತ ಸಂಹಿತೆಯಲ್ಲಿ ಈ ರೀತಿ ಮಾಡಿರುವನು—

"ಮಾಸೇನೋಪಚಿತಂ ಕಾಲೇ ಧಮನೀಭ್ಯಾಂ ತದಾರ್ತವಮ್ ।
ಈಷತ್‌ಕೃಷ್ಣಂ ವಿಗಂಧಂ ಚ ವಾಯುರ್ಯೋನಿಮುಖಂ ನಯೇತ್ ॥"

(ಸುಶ್ರುತ ಶಾರೀರಸ್ಥಾನ ಅ ೩ ಶ್ಲೋ ೮)

ಭಾವಾರ್ಥ—ಸ್ತ್ರೀ ಶರೀರದಲ್ಲಿ ಈ ಆರ್ತವ (ಒಂದು ಪ್ರಕಾರದ ಅಶುದ್ಧ

ರಕ್ತ) ಒಂದು ತಿಂಗಳು ಪರ್ಯಂತ ಸಂಚಯುವಾಗುತ್ತದೆ. ಅದರ ಬಣ್ಣ ಕರಿಗೆಂಪಾಗಿ ಅದಕ್ಕೆ ದುರ್ಗಂಧ ಇರುವುದು. ಈ ಶ್ಲೋಕದ ಸ್ಪಷ್ಟೀಕರಣ ಮಾಡುವಾಗ ಶಾಸ್ತ್ರಾರ್ಥ ಮಹಾರಥಿ ಮಾಧವಾಚಾರ್ಯರು ಈ ರೀತಿ ಹೇಳುತ್ತಾರೆ.

ರಜೋದರ್ಶನದ ಮೇಲೆ ಹೇಳಿದ ವ್ಯಾಖ್ಯೆಯಿಂದ ನಮಗೆ ಈ ರೀತಿ ಅನ್ನಿಸುತ್ತದೆ. ಸ್ತ್ರೀ ಶರೀರದಿಂದ ಹೊರಸೂಸುವ ಆ ರಕ್ತ ಕಪ್ಪು ಹಾಗೂ ದುರ್ಗಂಧ ಯುಕ್ತವಿರುತ್ತದೆ. ಸೂಕ್ಷ್ಮದರ್ಶಕ ಯಂತ್ರದಿಂದ ಕಾಣುವುದರಿಂದ ಅದರಲ್ಲಿ ಎಷ್ಟೋ ಪ್ರಕಾರದ ವಿಷಾರಿ ಜಂತುಗಳು ಕಂಡುಬಂದಿವೆ. ದುರ್ಗಂಧಾದಿ ದೋಷಯುಕ್ತವಿರುವುದರಿಂದ ಅದರ ಅಪವಿತ್ರತೆಯಂತೂ ಪ್ರತ್ಯಕ್ಷ ಸಿದ್ಧವಾಗುತ್ತದೆ. ಕಾರಣ ಅಂಥ ಅವಸ್ಥೆಯಲ್ಲಿ ಯಾವಾಗ ಸ್ತ್ರೀಯ ಶರೀರದ ನಾಡಿಯಿಂದ ಅಪವಿತ್ರ ರಕ್ತವನ್ನು ಹರಿಯಿಸಿ ಸ್ವಚ್ಛ ಮಾಡುವ ಕೆಲಸದಲ್ಲಿ ತೊಡಗಿರುವಾಗ ಹಾಗೂ ಅದೇ ನಾಡಿಗಳಿಂದ ಗತಿಸಿ ಶಾರೀರಿಕ ರೋಮರಂಧ್ರಗಳಿಂದ ಹೊರಸೂಸುವ ಉಷ್ಣತೆ ಹಾಗೂ ಬೆವರುಗಳ ಸಂಗಡ ರಜಕೀಟಾಣು (ಜಂತು) ಗಳೂ ಹೊರಗೆ ಬರುತ್ತಿರುತ್ತದೆ. ಆ ಸಮಯ ಅಂಥ ಸ್ತ್ರೀಯರು ಸ್ಪರ್ಶಿಸಿದ ನೀರು ಮುಂತಾದುವುಗಳಲ್ಲಿ ಆ ಜಂತುಗಳು ಸಂಕ್ರಮಿಸಿ ಬಿಟ್ಟರೆ ಅನ್ಯ ಮನುಷ್ಯರ ಶರೀರದ ಮೇಲೆ ತನ್ನ ದುಷ್ಪ್ರಭಾವ ಬೀರುವಲ್ಲಿ ಏನು ಆಶ್ಚರ್ಯ ?

ರಜಸ್ವಲೆಗೆ ಆಯುರ್ವೇದ ಹೇಳಿದ ನಿಯಮಗಳು ವಿಚಾರ ಮಾಡುವಂಥವುಗಳಿರುತ್ತವೆ.

"ಏವಂ ಶುದ್ಧ ಶುಕ್ರಾರ್ತವಾ ಋತೌ ಪ್ರಥಮದಿವಸಾತ್ ಪ್ರಭೃತಿ ಬ್ರಹ್ಮಚಾರಿಣೀ ದಿವಾಸ್ವಪ್ನಾಂಜನಾಶ್ರುಪಾತಸ್ನಾನಾನುಲೇಪನಾಭ್ಯಂಗನಖಚ್ಛೇದನ ಪ್ರಧಾವನಹಸನಕಥನಾತಿಶಬ್ದಶ್ರವಣಾಲೇಖನಾತ್ಯಾಯಾಸಾನ್ ಪರಿಹರೇತ್"

ಭಾವಾರ್ಥ—ರಜಸ್ವಲಾ ಸ್ತ್ರೀಯು ಮೊದಲಿನ ದಿವಸದಿಂದಲೂ ಬ್ರಹ್ಮಚಾರಿಣಿಯಾಗಿರಬೇಕು. ಹಗಲು ನಿದ್ರಿಸಕೂಡದು. ಕಣ್ಣುಗಳಿಗೆ ಕಾಡಿಗೆ ಹಚ್ಚಬಾರದು. ಕಣ್ಣೀರು ಸುರಿಸಬಾರದು. ಸ್ನಾನ, ಅಭ್ಯಂಗ, ಗಂಧಲೇಪನ (ಸ್ನೋ ಪೌಡರ್) ಮಾಡಿಕೊಳ್ಳಬಾರದು, ಉಗುರು ತೆಗೆದುಕೊಳ್ಳುವುದು, ಓಡುವುದು, ನಗುವುದು, ಹೆಚ್ಚು ಬಡಬಡಿಸುವುದು, ಭಯಾನಕ ಶಬ್ದ ಕೇಳುವುದು, ಬಾಚಿ ಜಡೆ ಹಾಕಿಕೊಳ್ಳುವುದು, ಜೋರಿನ ವಾಯುಸೇವನೆ ಮುಂತಾದವು ಎಂದಿಗೂ ಮಾಡಬಾರದು.

ರಜಸ್ವಲೆಗೆ ಹೇಳಿದ ಈ ನಿಯಮಗಳು ಆಳವಾಗಿ ವಿಚಾರ ಮಾಡಿದಲ್ಲಿ ಅವು ಅತ್ಯಂತ ಯೋಗ್ಯವಾಗಿವೆ ಎಂದು ಮನಗಾಣುವುದು. ಆದರೆ ಪ್ರತ್ಯಕ್ಷ ಬಹಿಷ್ಠೆ ಎಂದು ಕೂಡುವ ಸ್ತ್ರೀಯರೂ ಈ ಮೇಲ್ಕಂಡ ನಿಯಮಗಳ ವಿರುದ್ಧ ವ್ಯವಹರಿಸುತ್ತಾರೆ. ತಲೆಯ ಕೂದಲು ಬಾಚಿಕೊಂಡು ಜಡೆ ಕಟ್ಟಿಕೊಳ್ಳುವುದು ಸ್ನೋ ಪೌಡರನ್ನು

ಮುಖಕ್ಕೆ ಬಳಿದುಕೊಳ್ಳುವುದು, ನಗುವುದು, ಓಟ-ಆಟ-ತಿರುಗಾಟ ಮುಂತಾದ ವಿಷಯಗಳನ್ನು ರಜಸ್ವಲೆಯರು ಸರಾಗವಾಗಿ ಮಾಡುತ್ತಿರುವುದು ಕಂಡುಬರುತ್ತದೆ. ಕೂಡುವ ಹೆಂಗಸರ ಸ್ಥಿತಿಯಿದು, ಕೂಡದಿರುವ ಹೆಂಗಸರಿಗಂತೂ ಯಾವ ಬಂಧನವೇ ಇಲ್ಲ! ಶಾಲಾ ಕಾಲೇಜಿಗೆ ಹೋಗುವ ಹೆಣ್ಣು ಮಕ್ಕಳಂತೂ ಬಹಿಷ್ಠೆ ಇರುವಾಗಲೂ ಡ್ರಿಲ್ ಮಾಡುವುದು. ಖೋಖೋ ಹೂತೂತುಗಳಂಥ ಆಟಗಳನ್ನಾಡುವುದು ಓಡುವುದು, ಜಿಗಿಯುವುದು ಇಂಥ ಆರೋಗ್ಯಘಾತುಕ ಸ್ಪರ್ಧೆಗಳಲ್ಲಿ ಭಾಗವಹಿಸು ವುದರಿಂದ ನಿಶ್ಚಯವಾಗಿ ಅಕಲ್ಯಾಣವಾಗುವುದು. ಹೆಣ್ಣುಮಕ್ಕಳ ತಾಯಿ-ತಂದೆ ಹಾಗೂ ಶಿಕ್ಷಣಾಧಿಕಾರಿಗಳು ಈ ವಿಷಯದ ಕಡೆಗೆ ಹೆಚ್ಚು ಗಮನ ಕೊಡುವುದು ಅವಶ್ಯಕವಾಗಿರುತ್ತದೆ. ವೈದ್ಯಕ ಶಾಸ್ತ್ರವು ಹೇಳಿದ ನಿಯಮಗಳು ನಿತಾಂತ ಮೂರ್ಖ ತನದ್ದೆಂದು ಅವುಗಳನ್ನು ತಾತ್ಸಾರ ಮಾಡುವುದು ಬುದ್ಧಿವಂತಿಕೆಯ ಲಕ್ಷಣವಲ್ಲ.

ರಜಸ್ವಲೆಯು ಅವಳಿಗೆ ಹೇಳಿದ ನಿಯಮಗಳನ್ನು ಪಾಲಿಸದಿದ್ದರೆ ಭಾವೀ ಸಂತತಿಗೂ ಅದರ ಅನಿಷ್ಟ ಪರಿಣಾಮಗಳನ್ನು ಅನುಭವಿಸಬೇಕಾಗುವುದಾಗಿ ಆಯುರ್ವೇದದ ಆದ್ಯಪ್ರವರ್ತಕ ಭಗವಾನ್ ಧನ್ವಂತರಿಯು ಹೇಳುತ್ತಾನೆ.

"ದಿವಾಸ್ವಪತ್ಯಾಃ ಸ್ವಾಪಶೀಲೋ, ಅಂಜನಾದಂಧೋ, ರೋದನಾದ್ವಿಕೃತದೃಷ್ಟಿಃ, ಸ್ನಾನಾನುಲೇಪನಾದ್ದುಃಖಶೀಲಃ, ತೈಲಾಭ್ಯಂಗಾತ್ಕುಷ್ಠೀ, ನಖಕರ್ತನಾತ್ ಕುನಖೀ, ಪ್ರಧಾವನಾಚ್ಚಂಚಲಃ ಹಸನಾಚ್ಛ್ಯಾವದಂತೀ ಓಷ್ಠತಾಲು ಜಿಹ್ವಃ, ಪ್ರಲಾಪೀಚಾತಿಕಥನಾತ್. ಅತಿ ಶಬ್ದಶ್ರವಣಾದ್ಬಧಿರಃ ಮರುತಾಯಸಸೇವಯೋನ್ಮತ್ತಃ ಗರ್ಭೋ ಭವತೀತ್ಯೇವಮೇತಾನ್ ಪರಿಹರೇತ್"

(ಸುಶ್ರುತ ಶಾರೀರಸ್ಥಾನ ಅಂ ೨/೫)

ಭಾವಾರ್ಥ—ರಜಸ್ವಲಾ ಸ್ತ್ರೀಯು ಹಗಲು ನಿದ್ರಿಸಿದರೆ ಎಂದಿಗೂ ನಿದ್ರೆಯುಳ್ಳವ, ಕಣ್ಣುಗಳಿಗೆ ಕಾಡಿಗೆ ಹಚ್ಚಿದರೆ ಕುರುಡ, ಅಳುವುದರಿಂದ ದೃಷ್ಟಿದೋಷವುಳ್ಳವ, ಸ್ನಾನಾನುಲೇಪನದಿಂದ ಶಾರೀರಿಕ ಪೀಡಿಯುಳ್ಳವ, ಎಣ್ಣೆಯ ಅಭ್ಯಂಗದಿಂದ ಕುಷ್ಠರೋಗಿ ಅಥವಾ ಪಾಂಡುರೋಗಿ, ಉಗುರು ಕತ್ತರಿಸುವುದರಿಂದ ಕೆಟ್ಟ ಉಗುರುಗಳುಳ್ಳವ, ಓಡುವುದರಿಂದ ಚಂಚಲ, ಹೆಚ್ಚು ನಗುವುದರಿಂದ ಹಲ್ಲು ನಾಲಿಗೆ—ತುಟಿಗಳನ್ನು ಕಪ್ಪು ಉಳ್ಳ, ಬಹಳ ಬಡಬಡಿಸಿದರೆ ಪ್ರಲಾಪಿ, ದೊಡ್ಡ ಸಪ್ಪಳ ಕೇಳಿದರೆ ಕಿವುಡ, ಅತಿ ವಾಯು ಸೇವನೆಯಿಂದ ಹಾಗೂ ಅತಿ ಪರಿಶ್ರಮದಿಂದ ಹುಚ್ಚನಾಗಿಯೂ ಗರ್ಭವನ್ನು ಹುಟ್ಟುವ ಸಂಭವ ಹೆಚ್ಚಾಗಿರುತ್ತದೆ. (ಅರ್ಥಾತ್-ಪರಿಣಾಮಗಳು ಅದೇ ಋತುಕಾಲದಲ್ಲಿ ಗರ್ಭ ನಿಲ್ಲುವುದರಿಂದ ಆಗುವುವು.) ಕಾರಣ ಬಹಿಷ್ಠೆಯರು ಇಂಥ ನಿಯಮಗಳನ್ನು ಪಾಲಿಸದೆ ಇರಕೂಡದು.

ಎಷ್ಟು ದುಃಖದ ಸಂಗತಿಯಿದು, ಮುಂದಿನ ಪೀಳಿಗೆಯ ಜನ್ಮಕೊಡುವ ತಂದೆ-ತಾಯಂದಿರು ಅತ್ತ ಕಡೆಗೆ ಗಮನ ಕೊಡುವುದಿಲ್ಲ. ಇಂಥ ನಮ್ಮ ಹಿರಿಯರು ಹಾಕಿ ಕೊಟ್ಟ ನಿಯಮಗಳನ್ನೂ ಪಾಲಿಸುವುದಿಲ್ಲ. ಆದರಿಂದ ಸಮಾಜದಲ್ಲಿ ಬಹುಸಂಖ್ಯೆ ಇಂಥ ವ್ಯಂಗ-ಪಂಗು ಅವಲಕ್ಷಣವುಳ್ಳ ಬಾಲಕರ ಜನನ ಹೆಚ್ಚಾಗಿದ್ದು ಆ ಬಗ್ಗೆ ಹಿಂದಿನಿಂದ ಮಾತ್ರ ದೇವರಿಗೆ ದೂರುತ್ತಾರೆ ಹಾಗೂ ಡಾಕ್ಟರ ವೈದ್ಯರ ಇಂಜಕ್ಷನ್-ಒಪರೇಷನ್-ಗುಳಿಗೆ-ಟಾನಿಕುಗಳ ಬಿಲ್ಲು ತುಂಬುತ್ತ ಜರ್ಜರಿತ ಸಾಂಪತ್ತಿಕ ಸ್ಥಿತಿಗೆ ಬಂದು ಮುಟ್ಟುತ್ತಾರೆ.

ತಾವು ಭುಂಜಿಸುವ ಪದಾರ್ಥಗಳ ಮೇಲೆ ಅವರ ದೃಷ್ಟಿಯು ಬೀಳಕೂಡದು. ಇಷ್ಟು ಅವರಲ್ಲಿ ಅಪವಿತ್ರತೆ ಇರುತ್ತದೆ. ಸರ್ಪ ವಿಷ ಇಳಿಸುವ ಮಾಂತ್ರಿಕರಂತೂ ಉಣ್ಣುವಾಗ ರಜಸ್ವಲೆಯರ ಶಬ್ದ ಕೇಳುವುದಿಲ್ಲ, ಅಕಸ್ಮಾತ್ ಕೇಳಿದರೂ ಊಟ ಬಿಟ್ಟು ಏಳುತ್ತಾರಲ್ಲದೆ ಇಪ್ಪತ್ತನಾಲ್ಕು ತಾಸು ಏನೂ ತಿನ್ನುವುದಿಲ್ಲ. ಹೀಗೆ ಪ್ರತೀತಿಯುಂಟು.

ಇವೆಲ್ಲ ಸಂಗತಿ ಅನುಭವಿಸಿದ್ದ ಮತ್ತು ಪ್ರತ್ಯಕ್ಷವಿರುವಾಗ ರಜಸ್ವಲೆಯು ಪೃಥಕ್ ಕೂಡ್ರದಿರುವುದು ಹಾಗೂ ಅವಳ ಸ್ಪರ್ಶ, ಸಹವಾಸ, ಅವಳ ಕೈಯ ನೀರು–ಅಡಿಗೆ–ಮುಂತಾದರ ಪರಿಣಾಮ ಎಷ್ಟು ಭಯಂಕರವಾಗುತ್ತಿರಬಹುದು ಎಂಬುದರ ವಿಚಾರ ಓದುಗರೇ ಮಾಡಬೇಕು. ನಿದ್ದೆ ಬಿದ್ದವನಿಗೆ ಎಚ್ಚರಿಸ ಬಹುದು; ನಿದ್ದೆಯ ಸೋಗು ಮಾಡಿದವನನ್ನು ಎಚ್ಚರಿಸಲು ಸಾಧ್ಯವೇ ?

**—ಕೃತಜ್ಞತೆ "ತತ್ವವಾದ" ಎಪ್ರಿಲ್ 1970 ಸಂಚಿಕೆಗೆ.**



**ಭಾರ್ಯೆ ತಾಯಿಗೆ ಸಮಾನ**

**ಭಾರ್ಯಾಂ ಪತಿಃ ಸಂಪ್ರವಿಶ್ಯ ಸ ಯಸ್ಮಾಜ್ಜಾಯತೇ ಪುನಃ ।**
**ಜಾಯಾಯಾಸ್ತದ್ಧಿ ಜಾಯಾತ್ವಂ ಪೌರಾಣಾಃ ಕವಯೋ ವಿದುಃ ॥**
**—ಮ. ಭಾರ. ಆದಿ. 74–37**

ಪತಿ ತನ್ನ ಪತ್ನಿಯನ್ನು ಪ್ರವೇಶಿಸಿ ಪುತ್ರ ರೂಪದಿಂದ ಹುಟ್ಟುವನು. ಆದುದರಿಂದಲೇ ಪತ್ನಿ 'ಜಾಯಾ' ಎಂಬೆನಿಸುವಳು. ಎಂಬುದಾಗಿ ಪುರಾಣಜ್ಞರಾದ ಜ್ಞಾನಿಗಳು ಅಭಿಪ್ರಾಯಪಡುವರು.

**ಪರಿಶಿಷ್ಟ: ೧೨**

# ಸಂದರ್ಭ ವಿಶೇಷಗಳಲ್ಲಿ ಅಳವಡಿಸಿಕೊಳ್ಳಬೇಕಾದ ಅನುಸಂಧಾನ

**ಗೋವುಗಳ ಸೇವೆಯ ಸಂದರ್ಭದಲ್ಲಿ ಇರಬೇಕಾದ ಅನುಸಂಧಾನ:**

ಮನೆಯಲ್ಲಿ ಗೋವುಗಳ ಲಾಲನೆ ಪೋಷಣೆಗಳ ಹೊಣೆಗಾರಿಕೆಯೂ ವಿಶೇಷವಾಗಿ ಸ್ತ್ರೀಯರಿಗೆ ಸಂಬಂಧಪಟ್ಟದ್ದಾಗಿರುತ್ತದೆ. ಅವರು ಆ ವಿಷಯದಲ್ಲಿ ಸ್ವಲ್ಪವೂ ನಿರುತ್ಸಾಹವನ್ನು ತೋರಿಸದೆ, ಲವಲವಿಕೆಯಿಂದ ಗೋವುಗಳ ಲಾಲನೆ ಪೋಷಣೆಗಳಲ್ಲಿ ತೊಡಗಬೇಕು. ಅವರ ಆ ನಿಟ್ಟಿನ ಉತ್ಸಾಹ ಮನೆಯ ಉಳಿದ ಸದಸ್ಯರಿಗೂ ಗೋವುಗಳ ಲಾಲನೆಪೋಷಣೆಗಳ ವಿಷಯದಲ್ಲಿ ಸ್ಫೂರ್ತಿ ನೀಡುವಂತಿರಬೇಕು.

ಹಾಲು, ಮೊಸರು ಮುಂತಾದವುಗಳನ್ನು ಸಮೃದ್ಧವಾಗಿ ಹೊಂದುವ ಐಹಿಕ ದೃಷ್ಟಿಯಿಂದಷ್ಟೇ ಅಲ್ಲದೆ, ದೊಡ್ಡ ಪ್ರಮಾಣದ ಪುಣ್ಯವನ್ನು ಸಂಪಾದಿಸುವ, ಭಗವದನುಗ್ರಹಕ್ಕೆ ಪಾತ್ರವಾಗುವ ಪಾರತ್ರಿಕ ದೃಷ್ಟಿಯಿಂದಲೂ ಗೋವುಗಳ ಲಾಲನೆ ಪೋಷಣೆ ಅತ್ಯವಶ್ಯ ಎಂಬುದನ್ನು ಮನವರಿಕೆ ಮಾಡಿಕೊಳ್ಳಬೇಕೆಂದರೆ ಶಾಸ್ತ್ರದಲ್ಲಿ ಗೋವುಗಳ ಬಗ್ಗೆ ಪ್ರಸ್ತಾಪಿಸಲ್ಪಡುವ ವಿಚಾರವನ್ನು ತಿಳಿದುಕೊಳ್ಳಬೇಕು.

ವಸಿಷ್ಠರು ಹೇಳಿದ್ದಾರೆ (ಮ. ಭಾರ. ಅನುಶಾಸನ 79-1, 2, 3) ಗೋವುಗಳ ಸೃಷ್ಟಿಯಾದಾಕ್ಷಣ ಅವು ಒಂದು ಲಕ್ಷ ವರ್ಷ ಕಾಲ ಚತುರ್ಮುಖನನ್ನು ಕುರಿತು ತಪಸ್ಸು ಮಾಡಿ ತಾವು ಉತ್ತಮರೆನಿಸಬೇಕೆಂದೂ ದಕ್ಷಿಣೆಗಳಲ್ಲೆಲ್ಲ ಶ್ರೇಷ್ಠಗಳೆನಿಸುವಂತಾಗಬೇಕೆಂದೂ, ಯಾವುದೇ ದೋಷದ ಲೋಪಕ್ಕೊಳಗಾಗಬಾರದೆಂದೂ, ತಮ್ಮ ಗೋಮಯದ ಸ್ನಾನದಿಂದ ಎಲ್ಲರೂ ಪವಿತ್ರರಾಗುವಂತಾಗಬೇಕೆಂದೂ, ದೇವತೆಗಳೂ, ಮನುಷ್ಯರೂ ಪಾವಿತ್ರ್ಯಕ್ಕಾಗಿ ಗೋಮಯವನ್ನು ಬಳಸುವಂತಾಗಬೇಕೆಂದೂ ಕೇಳಿಕೊಳ್ಳುವರು—

> **'....ಗಚ್ಛೇಮ ಶ್ರೇಷ್ಠತಾಮಿತಿ । ಲೋಕೇಽಸ್ಮಿನ್**
> **ದಕ್ಷಿಣಾನಾಂ ಚ ಸರ್ವಾಸಾಂ ವಯಮುತ್ತಮಾಃ ।**
> **ಭವೇಮ ನ ಚ ಲಿಪ್ಯೇಮ ದೋಷೇಣೇತಿ**
> **ಪರಂತಪ । ಅಸ್ಮತ್ಪುರೀಷಸ್ನಾನೇನ ಜನಃ ಪೂಯೇತ**
> **ಸರ್ವದಾ। ಶಕೃತಾ ಚ ಪವಿತ್ರಾರ್ಥಂ ಕುರ್ವೀರನ್ ದೇವಮಾನುಷಾಃ ।'**

ಚತುರ್ಮುಖನು ಈ ವರವನ್ನು ಅನುಗ್ರಹಿಸಲು ಹಸುಗಳು ಪರಮ ಪವಿತ್ರ

ಗಳಾಗಿಯೂ, ಸರ್ವಶ್ರೇಷ್ಠಗಳಾಗಿಯೂ ಇವೆ ಎಂದು ವಸಿಷ್ಠರು ಸಂದೇಶಿಸಿರುವರು—

**ತಸ್ಮಾದ್ ಗಾವೋ ಮಹಾಭಾಗಾಃ ಪವಿತ್ರ ಪರಮುಚ್ಯತೇ**
**ತಥೈವ ಸರ್ವಭೂತಾನಾಂ ಸಮತಿಷ್ಠಂತ ಮೂರ್ಧನಿ —ಅನು. 71-8**

ಗೋವುಗಳು ಮಹಾ ಪ್ರಯೋಜನಕಾರಿಗಳು. ಪವಿತ್ರಗಳಾದವು. ತಮ್ಮ ಹಾಲಿನ ಮೂಲಕ, ತುಪ್ಪದ ಮೂಲಕ ಮಾನವರಿಗೆ ತಾರಕಗಳೂ, ಪೋಷಕಗಳೂ ಆಗಿವೆ- ಎಂದು ಭೀಷ್ಮರು ತಿಳಿಸಿರುವರು—

**ಗಾವೋ ಮಹಾರ್ಥಾಃ ಪುಣ್ಯಾಶ್ಚ ತಾರಯಂತಿ ಚ ಮಾನವಾನ್ ।**
**ಧಾರಯಂತಿ ಪ್ರಜಾಶ್ಚೇಮಾ ಹವಿಷಾ ಪಯಸಾ ತಥಾ ।**
**—ಭಾರ. ಅನು. 81-2**

ಹಂಸರೂಪಿ ಪರಮಾತ್ಮನೂ ಪವಿತ್ರಗಳಾದ ಮಂಗಲಗಳಾದ ಹಾಲು, ತುಪ್ಪಗಳಿಗೆಲ್ಲ ಕಾರಣಗಳಾದ ಗೋವುಗಳಲ್ಲಿ ಲೋಕಗಳು, ಯಜ್ಞಗಳು, ದೇವಪೂಜೆ, ಅತಿಥಿಪೂಜೆ, ಶ್ರಾದ್ಧ ಮುಂತಾದ ಪಿತೃಕ್ರಿಯೆಗಳು, ಬಲ, ಪುಷ್ಟಿ, ತುಷ್ಟಿ—ಇವೆಲ್ಲ ಅವಲಂಬಿಸಿವೆ—ಎಂದು ಸಂದೇಶಿಸಿರುವನು—

**"ಗಾವಃ ಪವಿತ್ರಾ ಮಂಗಲ್ಯಾ ಗೋಷು ಲೋಕಾಃ ಪ್ರತಿಷ್ಠಿತಾಃ ।**
**ತಾಸ್ವಾಯತ್ತಾನಿ ಯಜ್ಞಾನಿ ದೇವತಾತಿಥಿಪೂಜನಮ್ ।**
**ಬಲಂ ತುಷ್ಟಿಶ್ಚ ಪುಷ್ಟಿಶ್ಚ ತಥಾ ಶ್ರಾದ್ಧಕ್ರಿಯಾ ದ್ವಿಜಾಃ ॥"**
**—ವಿಷ್ಣು ಧರ್ಮೋತ್ತರ 3-306-1,2**

ಗೋವುಗಳಿಲ್ಲದೆ ಯಜ್ಞಗಳೇ ನಡೆಯಲು ಸಾಧ್ಯವಿಲ್ಲದ ಪ್ರಯುಕ್ತ ಗೋವುಗಳು ಯಜ್ಞಾಂಗಳು ಇಲ್ಲವೆ, ಸಾಕ್ಷಾತ್ ಯಜ್ಞವೇ ಎಂದೂ ಕರೆಸಿಕೊಳ್ಳಲ್ಪಡುವವೆಂದು ಭೀಷ್ಮರು ತಿಳಿಸಿರುವರು—

**ಯಜ್ಞಾಂಗಂ ಕಥಿತಾ ಗಾವೋ ಯಜ್ಞ ಏವ ಚ ವಾಸವ ।**
**ಏತಾಭಿಶ್ಚ ವಿನಾ ಯಜ್ಞೋ ನ ವರ್ತೇತ ಕಥಂಚನ —ಮ.ಭಾರ.ಅನು.83-17**

ಹಸುಗಳಿಂದಾಗಿ ಯಜ್ಞಗಳೂ, ದೇವತೆಗಳ ಆಹಾರವಾದ ಹವಿಸ್ಸೂ, ಪಿತೃಗಳ ಆಹಾರವಾದ ಕವ್ಯವೂ ಸಿದ್ಧಿಸುವುದು—

**ತತೋ ಯಜ್ಞಾಃ ಪ್ರವರ್ತಂತೇ ಹವ್ಯಂ ಕವ್ಯಂ ಚ ಸರ್ವಶಃ ।**
**—ಮ. ಭಾರ. ಅನು. 83-19**

ಎತ್ತುಗಳು ಗದ್ದೆಯನ್ನು ಉಳುವುದರಲ್ಲಿ ಸಹಕಾರಿಗಳಾಗಿ ಬೇರೆ ಬೇರೆ ಧಾನ್ಯಗಳನ್ನೂ, ಬೀಜಗಳನ್ನೂ ಉಂಟುಮಾಡುವವು—

**ಏತಾಸಾಂ ತನಯಾಶ್ಚಾಪಿ ಕೃಷಿಯೋಗಮುಪಾಸತೇ ।**
**ಜನಯಂತಿ ಚ ಧಾನ್ಯಾನಿ ಬೀಜಾನಿ ವಿವಿಧಾನಿ ಚ ।**
**—ಮ. ಭಾರ. ಅನು. 83-19**

ಹೀಗೆ ಗೋವುಗಳು ಯಜ್ಞಾದಿಗಳ ನಿರ್ವಹಣೆಯಲ್ಲಿ ಅತ್ಯುಪಯುಕ್ತಗಳಾಗಿರುವಂತೆ, ಪರಮ ಪವಿತ್ರಗಳೂ ಹೌದು. ಗೋವುಗಳಷ್ಟು ಪವಿತ್ರಗಳಾದವು, ಪುಣ್ಯಪ್ರದವಾದವು ಮೂರು ಲೋಕಗಳಲ್ಲೂ ಇಲ್ಲ ಎನ್ನುವಷ್ಟು ಅವು ಪವಿತ್ರ ಹಾಗೂ ಪುಣ್ಯಪ್ರದವಾದವುಗಳು ಎಂದು ಭೀಷ್ಮರು ತಿಳಿಸಿರುವರು—

**"ನಹಿ ಪುಣ್ಯತಮಂ ಕಿಂಚಿದ್ ಗೋಭ್ಯೋ ಭರತಸತ್ತಮ ।**
**ಏತಾಃ ಪುಣ್ಯಾಃ ಪವಿತ್ರಾಶ್ಚ ತ್ರಿಷು ಲೋಕೇಷು ಸತ್ತಮಾಃ**
**—ಮ. ಭಾರ. ಅನು. 81-3**

ಲಕ್ಷ್ಮೀದೇವಿ ಗೋವುಗಳಲ್ಲಿ ನಿಮ್ಮಲ್ಲಿ ಯಾವುದೂ ಕುತ್ಸಿತವಾದದೇ ಕಾಣಿಸುವುದಿಲ್ಲ—ಎಂದು ತಿಳಿಸಿರುವಳು—

**ನ ವೋಽಸ್ತಿ ಕತ್ಸಿತಂ ಕಿಂಚಿದಂಗೇಷ್ವಾಲಕ್ಷ್ಯತೇಽನಘಾಃ**
**—ಮ. ಭಾರ. ಅನು. 82-22**

ಈ ರೀತಿಯಾಗಿ ಗೋವು ಪವಿತ್ರವಾಗಿರುವುದಕ್ಕೆ ಅದರಲ್ಲಿ ಪರಮಾತ್ಮನ ಹಾಗೂ ಇತರ ಲಕ್ಷ್ಮ್ಯಾದಿದೇವತೆಗಳ ವಿಶೇಷ ಸನ್ನಿಧಾನ ಕಾರಣವೆನಿಸಿದೆ.

ಭಗವಂತನು ಗೋವಿನ ಮೂಲಕ ಸದ್ಗತಿಪ್ರದನಾಗಿ ಗೋವಿನಲ್ಲಿ ಗೋನಾಮಕನಾಗಿ ಇರುವನು—

**ಗೌಶ್ಚ ಸದ್ಗತಿಹೇತುತ್ವಾದ್ ಗೋಸ್ಥಃ ಸ ಪುರುಷೋತ್ತಮಃ ।**
**—ಛಾಂ. ಉ. ಭಾ. 2-1-6**

ಇದಲ್ಲದೆ, ಗೋವಿನ ಅಂಗಪ್ರತ್ಯಂಗಗಳಲ್ಲೂ, ಬೇರೆ ಬೇರೆ ಪಾರ್ಶ್ವಗಳಲ್ಲೂ, ಗೋಮಯ, ಗೋಮೂತ್ರಗಳಲ್ಲೂ ಬೇರೆ ಬೇರೆ ದೇವತೆಗಳು, ಸಚ್ಛಕ್ತಿಗಳು ಆಶ್ರಯಿಸಿಕೊಂಡಿರುವರೆಂದು ಪದ್ಮಪುರಾಣದಲ್ಲಿ (ಸೃಷ್ಟಿಖಂಡ 50-156ರಿಂದ 163ರ ವರೆಗಿನ ಶ್ಲೋಕಗಳಲ್ಲಿ) ವಿವರಿಸಲಾಗಿದೆ—

**ಗೋಮುಖೇ ಚಾಶ್ರಿತಾ ವೇದಾಃ ಸಷಡಂಗಪದಕ್ರಮಾಃ ।**
**ಶೃಂಗಯೋಶ್ಚ ಸ್ಥಿತೌ ನಿತ್ಯಂ ಸಹೈವ ಹರಿಕೇಶವೌ ।**
**ಉದರೇಽವಸ್ಥಿತಃ ಸ್ಕಂದಃ ಶೀರ್ಷ್ಣಿ ಬ್ರಹ್ಮಾ ಸ್ಥಿತಃ ಸದಾ ।**
**ವೃಷಧ್ವಜೋ ಲಲಾಟೇ ಚ ಶೃಂಗಾಗ್ರೇ ಇಂದ್ರ ಏವ ಚ ।**
**ಕರ್ಣಯೋರಶ್ವಿನೌ ದೇವೌ ಚಕ್ಷುಷೋಶ್ಶಶಿಭಾಸ್ಕರೌ ।**
**ದಂತೇಷು ಗರುಡೋ ದೇವೋ ಜಿಹ್ವಾಯಾಂ ಚ ಸರಸ್ವತೀ ।**

ಅಪಾನೇ ಸರ್ವತೀರ್ಥಾನಿ ಪ್ರಸ್ರಾವೇ ಚೈವ ಜಾಹ್ನವೀ ।
ಋಷಯೋ ರೋಮಕೂಪೇಷು ಮುಖತಃ ಪೃಷ್ಠತೋಯತ್ ।
ಧನದೋ ವರುಣಶ್ಚೈವ ದಕ್ಷಿಣಂ ಪಾರ್ಶ್ವಮಾಶ್ರಿತೌ ।
ವಾಮಪಾರ್ಶ್ವೇ ಸ್ಥಿತಾ ಯಕ್ಷಾಸ್ತೇಜಸ್ವಂತೋ ಮಹಾಬಲಾಃ ।
ಮುಖಮಧ್ಯೇ ಚ ಗಂಧರ್ವಾ ನಾಸಾಗ್ರೇ ಪನ್ನಗಾಸ್ತಥಾ ।
ಖುರಾಣಾಂ ಪಶ್ಚಿಮೇ ಪಾರ್ಶ್ವೇಽಪ್ಸರಸಶ್ಚ ಸಮಾಶ್ರಿತಾಃ ।
ಗೋಮಯೇ ವಸತೇ ಲಕ್ಷ್ಮೀರ್ಗೋಮೂತ್ರೇ ಸರ್ವಮಂಗಲಾ ।
ಪಾದಾಗ್ರೇ ಖೇಚರಾ ವೇದ್ಯಾ ಹಂಭಾಶಬ್ದೇ ಪ್ರಜಾಪತಿಃ ।
ಚತ್ವಾರಃ ಸಾಗರಾಃ ಪೂರ್ಣಾ ಧೇನೂನಾಂ ಚ ಸ್ತನೇಷು ವೈ ।

ಶಿಕ್ಷಾ, ವ್ಯಾಕರಣ ಮುಂತಾದ ಆರು ಅಂಗಗಳಿಂದಲೂ, ಪದಕ್ರಮಾದಿಗಳಿಂದಲೂ ಸಹಿತಗಳಾದ ವೇದಗಳು ಗೋವಿನ ಮುಖವನ್ನು ಆಶ್ರಯಿಸಿವೆ. ವಾಯುದೇವ ಹಾಗೂ ಕೇಶವ ಗೋವಿನ ಕೊಂಬುಗಳಲ್ಲಿ ಇರುವರು. ಗೋವಿನ ಉದರದಲ್ಲಿ ಸ್ಕಂದನೂ, ತಲೆಯಲ್ಲಿ ಚತುರ್ಮುಖನೂ, ಹಣೆಯಲ್ಲಿ ರುದ್ರನೂ, ಕೊಂಬಿನ ತುದಿಯಲ್ಲಿ ಇಂದ್ರನೂ, ಕಿವಿಗಳಲ್ಲಿ ಅಶ್ವಿನೀದೇವತೆಗಳೂ, ಕಣ್ಣುಗಳಲ್ಲಿ ಸೂರ್ಯಚಂದ್ರರೂ, ಹಲ್ಲುಗಳಲ್ಲಿ ಗರುಡನೂ, ನಾಲಗೆಯಲ್ಲಿ ಸರಸ್ವತಿಯೂ, ಮಲ ವಿಸರ್ಜಿಸುವ ಅಂಗದಲ್ಲಿ ಸರ್ವತೀರ್ಥಗಳೂ, ಮೂತ್ರ ವಿಸರ್ಜಿಸುವ ಅಂಗದಲ್ಲಿ ಗಂಗೆಯೂ, ರೋಮರಂಧ್ರಗಳಲ್ಲಿ ಋಷಿಗಳೂ ಇರುವರು. ಗೋವಿನ ಎದುರುಗಡೆ ಹಾಗೂ ಹಿಂದುಗಡೆ ಯಮನೂ, ಬಲಭಾಗದಲ್ಲಿ ಕುಬೇರ ಹಾಗೂ ವರುಣರೂ, ಎಡಭಾಗದಲ್ಲಿ ತೇಜಸ್ವಿಗಳಾದ, ಬಲಿಷ್ಠರಾದ ಯಕ್ಷರೂ, ಮುಖದ ಮಧ್ಯದಲ್ಲಿ ಗಂಧರ್ವರೂ, ಮೂಗಿನ ತುದಿಯಲ್ಲಿ ಸರ್ಪಗಳೂ, ಗೊರಸುಗಳ ಪಶ್ಚಿಮಭಾಗದಲ್ಲಿ ಅಪ್ಸರ ಸ್ತ್ರೀಯರೂ ಇರುವರು. ಸರ್ವಮಂಗಲಳಾದ ಲಕ್ಷ್ಮೀದೇವಿ ಗೋಮಯ ಹಾಗೂ ಗೋಮೂತ್ರದಲ್ಲಿ ಇರುವಳು. ಪಾದಾಗ್ರದಲ್ಲಿ ವಿದ್ಯಾಧರರೂ, 'ಹಂಭಾ' —ಎಂಬುದಾಗಿ ಹಸುವಿನ ಕೂಗಿನಲ್ಲಿ ಪ್ರಜಾಪತಿಯೂ ಇರುವರು. ಗೋವಿನ ಸ್ತನಗಳಲ್ಲಿ ನಾಲ್ಕು ಸಾಗರಗಳು ಆಶ್ರಯಿಸಿಕೊಂಡಿವೆ.

ಲಕ್ಷ್ಮೀದೇವಿ ಗೋವುಗಳಲ್ಲಿ ಪ್ರಾರ್ಥಿಸಿ, ಅವುಗಳ ಗೋಮಯ ಹಾಗೂ ಗೋಮೂತ್ರಗಳಲ್ಲಿ ತಾನು ಇರುವುದಕ್ಕೆ ಅನುಮತಿ ಪಡೆದುಕೊಂಡಿರುವ ಆಖ್ಯಾಯಿಕೆಯನ್ನು ಭೀಷ್ಮರು ಯುಧಿಷ್ಠಿರನಿಗೆ (ಮ. ಭಾರ. ಅನು. 82ನೇ ಅಧ್ಯಾಯದಲ್ಲಿ) ತಿಳಿಸಿರುವರು.

ದೇವತೆಗಳೆಲ್ಲ ಗೋವುಗಳ ಅಂಗಾಂಗಗಳಲ್ಲೆಲ್ಲ ತುಂಬಿಕೊಂಡಿರುವರೆಂಬ ಅನುಸಂಧಾನದಿಂದ ಗೋವನ್ನು ಸ್ಪರ್ಶಿಸಿದರೆ ಸ್ನಾನ ಮಾಡಿದಂತಾಗುವುದು ಎಂದು ಪದ್ಮಪುರಾಣ (ಸೃಷ್ಟಿಖಂಡ 50-164) ತಿಳಿಸಿದೆ—

**"ಗಾಂ ಚ ಸ್ಪೃಶತಿ ಯೋ ನಿತ್ಯಂ ಸ್ನಾತೋ ಭವತಿ ನಿತ್ಯಶಃ ।"**

ಯಾರು ಗೋವುಗಳ ಶುಶ್ರೂಷೆಯನ್ನು ನಡೆಸುವನೋ, ಅವುಗಳನ್ನು ಅನುಸರಿಸಿ ಇರುವನೋ ಅಂತಹವನಿಗೆ ದುರ್ಲಭಗಳಾದ ವರಗಳನ್ನು ಅವು ಅನುಗ್ರಹಿಸುವವು—

**"ಗಾಶ್ಚ ಶುಶ್ರೂಷತೇ ಯಶ್ಚ ಸಮನ್ವೇತಿ ಚ ಸರ್ವಶಃ ।**
**ತಸ್ಮೈ ತುಷ್ಟಾಃ ಪ್ರಯಚ್ಛಂತಿ ವರಾನಪಿ ಸುದುರ್ಲಭಾನ್ ॥"**

**—ಮ. ಭಾರ. ಅನು. 81–33**

ಗೋವುಗಳ ಭಕ್ತನು ಏನೇನನ್ನು ಬಯಸುವನೋ ಅವೆಲ್ಲ ದೊರಕುವುದು—

**ಗೋಷು ಭಕ್ತಶ್ಚ ಲಭತೇ ಯದ್ ಯದಿಚ್ಛತಿ ಮಾನವಃ ।**

**—ಭಾರ. ಅನು. 83–50**

ಯಾರ ಮನೆಯಲ್ಲಿ ಗೋವು ಇಲ್ಲವೋ ಅದು ಬಂಧುಗಳಿಂದ ದೂರವಾದ ಮನೆಯಂತೆ—

**ಗೌಶ್ಚ ಯಸ್ಮಿನ್ ಗೃಹೇ ನಾಸ್ತಿ ತದ್ ಬಂಧುರಹಿತಂ ಗೃಹಮ್ ।**

**—ಪದ್ಮ ಸೃಷ್ಟಿಖಂಡ 50-156**

ನನ್ನೆದುರು ನಿತ್ಯ ಗೋವುಗಳಿರಬೇಕು. ನನ್ನ ಹಿಂದೆಯೂ ಗೋವುಗಳಿರಬೇಕು. ನನ್ನ ಸುತ್ತ ಗೋವುಗಳಿದ್ದು, ನಾನು ಅವುಗಳ ಮಧ್ಯೆ ಬದುಕುವಂತಾಗಬೇಕು—ಎಂಬ ಹಾರೈಕೆಯನ್ನು ಮತ್ತೆ ಮತ್ತೆ ಪಠಿಸುತ್ತಿರಬೇಕು—

**ಗಾವೋ ಮಮಾಗ್ರತೋ ನಿತ್ಯಂ ಗಾವಃ ಪೃಷ್ಠತ ಏವ ಚ ।**
**ಗಾವೋ ಮೇ ಸರ್ವತಶ್ಚೈವ ಗವಾಂ ಮಧ್ಯೇ ವಸಾಮ್ಯಹಮ್ ॥**

**—ಭಾರ. ಅನು. 80-3**

ಹೀಗೆ ಗೋವುಗಳು ನಮ್ಮ ಬದುಕಿಗೆ ಅತ್ಯುಪಯುಕ್ತಗಳು; ದೈವ ಹಾಗೂ ಪಿತೃ ಕರ್ಮಗಳಿಗೆ ಆಧಾರದಂತಿರುವವು. ಸಕಲ ದೇವತೆಗಳ ಸನ್ನಿಧಿಗೆ ಪಾತ್ರಗಳಾಗಿದ್ದು ಪರಮ ಪವಿತ್ರ ಹಾಗೂ ಪರಮ ಮಂಗಲವಾದವು. ಇಂತಹ ಹಸುಗಳು ಆದಷ್ಟು ಹೆಚ್ಚು ಸಂಖ್ಯೆಯಲ್ಲಿ ಮನೆಯಲ್ಲಿ ಇರುವುದರಿಂದ ಮನೆಯಲ್ಲಿ ಒಳ್ಳೆಯ ಪವಿತ್ರ ಹಾಗೂ ಮಂಗಲ ವಾತಾವರಣ ಸಿದ್ಧಿಸುವುದು. ಗೋವುಗಳ ಸೇವೆಯಿಂದ ಜೀವನ ಸಾರ್ಥಕವೆನಿಸುವುದು—ಎಂಬುದನ್ನು ಮನವರಿಕೆ ಮಾಡಿಕೊಂಡು ಅವುಗಳನ್ನು ಪೋಷಿಸಬೇಕು.



೧೫೮

## ನಡೆದುಹೋದ ಪಾಪಗಳಿಗಾಗಿ
## ಪಶ್ಚಾತ್ತಾಪಪೂರ್ವಕ ಅನುಸಂಧಾನ:

ಗೃಹಿಣಿ ಪತಿಪುತ್ರರ ಜೊತೆಗೆ, ಗುರು ಹಿರಿಯರ ಜೊತೆಗೆ ಆದಷ್ಟು ಸಹನೆಯಿಂದ ನಡೆದುಕೊಳ್ಳಬೇಕು. ಆದರೂ ಕೆಲವೊಂದು ಬಾರಿ ಕ್ರೋಧ ಉಕ್ಕೇರಿ, ತತ್ಪೂರ್ವಕಗಳಾದ ಕೆಟ್ಟ ಮಾತುಗಳು, ಕೆಟ್ಟ ವ್ಯವಹಾರಗಳು ಹೊರಹೊಮ್ಮುವವು. ತ್ರಿಕರಣಪೂರ್ವಕವಾಗಿ ತನ್ನ ಪತಿಯಲ್ಲಿಯೇ ಆಸಕ್ತಳಾಗಿರಬೇಕಾದ ಗೃಹಿಣಿಯ ಮನಸ್ಸು ಎಷ್ಟು ನಿಯಂತ್ರಣ ಮಾಡಿಕೊಂಡರೂ ಕೆಲವು ಅಶ್ಲೀಲ ದೃಶ್ಯಗಳಿಂದ, ಅಶ್ಲೀಲ ಸಾಹಿತ್ಯಗಳಿಂದ ಪ್ರಚೋದಿತವಾಗಿ ಕಾಮದ ಆಕ್ರಮಣಕ್ಕೆ ಒಳಗಾಗುವುದುಂಟು. ಸಾಕಷ್ಟು ದಾನಧರ್ಮಗಳಿಗೆ ಪ್ರೋತ್ಸಾಹ ನೀಡಬೇಕಾದ ಗೃಹಿಣಿಯಿಂದ ಕೆಲವೊಮ್ಮೆ ಲೌಕಿಕ ವಸ್ತುಗಳ ಪ್ರಲೋಭನೆಗೊಳಗಾಗಿ ಲೋಭ ತಲೆ ಎತ್ತಿ ಇಷ್ಟೊಂದು ಪ್ರಮಾಣದಲ್ಲಿ ಯಾಕೆ ದಾನ? ಈಗಲೇ ಯಾಕೆ ಈ ಧರ್ಮಾಚರಣೆ? —ಎಂದೆಲ್ಲ ಪ್ರತಿಕ್ರಿಯೆ ಅಭಿವ್ಯಕ್ತವಾಗುವುದುಂಟು.

ಈ ರೀತಿಯಾಗಿ ಅರಿಷಡ್ವರ್ಗದ ಆಕ್ರಮಣಕ್ಕೊಳಗಾಗುವ ಪರಿಸ್ಥಿತಿಯೇ ಒದಗದಂತೆ ಆದಷ್ಟು ಯತ್ನಿಸಬೇಕು. ಒಂದು ವೇಳೆ ಆ ನಿಟ್ಟಿನ ಯತ್ನ ಯಶಸ್ವಿಯಾಗದೆ ಕಾಮಕ್ರೋಧಾದಿ ಅರಿಷಡ್ವರ್ಗದ ಮುತ್ತಿಗೆಯಿಂದಾಗಿ ನಡೆಯಬಾರದ ನಡತೆ ತನ್ನಿಂದ ನಡೆದುಹೋಯಿತೆಂದರೆ ಅದಕ್ಕಾಗಿ ಪಶ್ಚಾತ್ತಾಪಪೂರ್ವಕವಾಗಿ ಹರಿಸಂಸ್ಮರಣೆ ನಡೆಸಬೇಕು—

**"ಕೃತೇ ಪಾಪೇಽನುತಾಪೋ ವೈ ಯಸ್ಯ ಪುಂಸಃ ಪ್ರಜಾಯತೇ ।**
**ಪ್ರಾಯಶ್ಚಿತ್ತಂ ತು ತಸ್ಯೋಕ್ತಂ ಹರಿಸಂಸ್ಮರಣಂ ಪರಮ್ ॥"**

ಯಾವ ವ್ಯಕ್ತಿಗೆ ತನ್ನಿಂದ ನಡೆದ ಪಾಪಕ್ಕಾಗಿ ಪಶ್ಚಾತ್ತಾಪ ಉಂಟಾಗಿದೆಯೋ, ಆ ವ್ಯಕ್ತಿಗೆ ಆ ಪಾಪದ ಪರಿಹಾರಕ್ಕೆ ಉತ್ತಮ ಪ್ರಾಯಶ್ಚಿತ್ತವೆಂದರೆ ಭಕ್ತಿಪೂರ್ವಕವಾಗಿ ಶ್ರೀಹರಿಯ ಸ್ಮರಣೆ ಎಂಬುದಾಗಿ ಶ್ರೀ ಮಧ್ವಾಚಾರ್ಯರು ತಮ್ಮ ಕೃಷ್ಣಾಮೃತಮಹಾರ್ಣವದಲ್ಲಿ ಉಲ್ಲೇಖಿಸಲ್ಪಟ್ಟ ಶ್ಲೋಕದ (34) ಮೂಲಕ ಸಂದೇಶಿಸಿರುವರು.

ಹರಿಸಂಸ್ಮರಣೆ ರೂಪವಾದ ಪ್ರಾಯಶ್ಚಿತ್ತದಿಂದ ಪಾಪದ ಪರಿಹಾರ ಪಡೆದುಕೊಳ್ಳಬೇಕಾದ ವ್ಯಕ್ತಿ ತನ್ನಿಂದ ಎಸಗಲ್ಪಟ್ಟ ಪಾಪಕ್ಕಾಗಿ ಪಶ್ಚಾತ್ತಾಪ ಪಡಬೇಕೆಂಬುದನ್ನು ಮರೆಯಬಾರದು. ತಾನು ಹೀಗೆ ಮಾಡಬಾರದಿತ್ತು; ಆದರೆ

ನನ್ನಿಂದ ಇಂತಹ ಪಾಪ ನಡೆದುಹೋಯಿತು. ಕಾಮಕ್ಕೆ ಅವಾಂತರ ಪ್ರೇರಕನಾದ ಕಾಲನೇಮಿ ಎಂಬ ಅಸುರನ ಆಕ್ರಮಣದಿಂದ ನನ್ನಿಂದ ಇಂತಹ ಕಾಮಪೂರ್ವಕ ಪಾಪ ನಡೆದುಹೋಯಿತು. ಕ್ರೋಧಾಭಿಮಾನಿ 'ಕ್ರೋಧ' ಅಸುರನ ಪ್ರಭಾವ ದಿಂದಾಗಿಯೇ ನಾನು ಸಿಟ್ಟಿನ ಭರಕ್ಕೊಳಗಾಗಿಯೇ ಆಡಬಾರದ ಮಾತನ್ನೆಲ್ಲ ಅಂದು ಬಿಟ್ಟೆ. ಅಂತೆಯೇ ಪ್ರತಿಯೊಂದು ದೋಷಕ್ಕೂ ಒಬ್ಬೊಬ್ಬ ಅವಾಂತರ ಅಸುರರು ಅಭಿಮಾನಿಗಳಾಗಿದ್ದು ಅವರ ಆವೇಶಕ್ಕೊಳಗಾಗಿ ಆಯಾ ದೋಷಪ್ರಯುಕ್ತ ಪಾಪಕಾರ್ಯ ನಡೆಯುವಂತಾಗಿದೆ. ಕರ್ಮಾಧ್ಯಕ್ಷನಾದ ಭಗವಂತನು ನನ್ನ ಪ್ರಾರಬ್ಧಕರ್ಮಕ್ಕನುಗುಣವಾಗಿ ಇಂತಹ ಪಾಪಕೃತ್ಯಗಳನ್ನು ನನ್ನಿಂದ ನಡೆಯು ವಂತೆ ಮುಖ್ಯವಾಗಿ ಪ್ರೇರಣೆ ನೀಡಿರುವನು.[1] ಆದ್ದರಿಂದ ಅಂತಹ ಪಾಪದ ಅಶುಭ ಫಲದ ಅಧಿಕ ಪ್ರಮಾಣ ಅವಾಂತರ ಪ್ರೇರಕರಾದ ಅಸುರರ ಪಾಲಿಗೇ ಸೇರುವಂತೆ; ಆದಷ್ಟು ಅಲ್ಪ ಪ್ರಮಾಣದ ಅಶುಭ ಫಲವಷ್ಟೇ ನನಗೆ ದೊರೆಯು ವಂತೆ ಅವನು ಅನುಗ್ರಹಿಸಬೇಕು. ಅಲ್ಲದೆ, ಮುಂದೆ ಇಂತಹ ಪಾಪ ನನ್ನಿಂದ ನಡೆಯದಂತೆಯೂ ಅವನು ಅನುಗ್ರಹಿಸಬೇಕು. ಅಸುರರು ಆಕ್ರಮಣ ಮಾಡ ದಂತೆ ಪ್ರೇರಿಸಬೇಕು. ಹೀಗೆ ಎರಡು ರೀತಿಗಳಿಂದ ಭಕ್ತರ ಪಾಲಿನ ಪಾಪವನ್ನು ದೂರೀಕರಿಸುವುದರಿಂದ 'ಹರಿ' ಎಂದು ಅನ್ವರ್ಥಕವಾಗಿ ಸ್ತುತಿಸಲ್ಪಡುವವನು ಅವನು.[2]

ಈ ರೀತಿಯಾಗಿ ಪಶ್ಚಾತ್ತಾಪ ಹಾಗೂ ಹರಿಸಂಸ್ಮರಣೆಯನ್ನು ನಡೆಸಬೇಕಾ ದದ್ದು.

## ಹೊಸ್ತಿಲನ್ನು ಅಲಂಕರಿಸುವಾಗ ತಂದುಕೊಳ್ಳಬೇಕಾದ ಅನುಸಂಧಾನ:

ನಾವು ವಾಸಿಸುವ ಮನೆ 'ಜಗನ್ನಿವಾಸ' ಎನಿಸಿರುವ ಭಗವಂತನ ಸ್ವಾಮ್ಯಕ್ಕೆ ಮುಖ್ಯವಾಗಿ ಒಳಪಟ್ಟಿದ್ದು, ಅವನ ಮಂದಿರ ಎನಿಸುವುದು. ಅಂದಮೇಲೆ ಅದರ ದ್ವಾರದಲ್ಲಿಯೇ ಲಕ್ಷ್ಮೀದೇವಿ ವಿಶೇಷವಾಗಿ ಸನ್ನಿಹಿತಳಾಗಿರವಳು. ಇದರ ಅನು

---

1. ಅಖಿಲಪ್ರೇರಕೋ ವಿಷ್ಣುಃ....ಅಸುರಾ ಅಶುಭೇಷ್ವೇವ ಕಾಮಾದೇರಭಿಮಾನಿನಃ । ತತ್ರ ಕಾಮಃ ಕಾಲನೇಮಿಃ......
—ಬೃಹತ್ತರ್ಕ (ಗೀತಾ. 3-37)

2. ಹರತಿ ಭಕ್ತಾನಾಂ ಪಾಪಸಮುದಾಯಂ "ಅಧಿಕಂ" ಪರಿಹರತೀತಿ ಹರಿಃ ।

ಸಂಧಾನಕ್ಕೆ ಪುಷ್ಟಿ ದೊರಕುವಂತೆ ದ್ವಾರದ ಹೊಸ್ತಿಲನ್ನು ಅಲಂಕರಿಸಿ, ಅಲ್ಲಿ ಲಕ್ಷ್ಮೀದೇವಿಯನ್ನು ಆರಾಧಿಸುವ ಹೊಣೆ ಗೃಹಿಣಿಗೆ ಸೇರಿದ್ದು. ಗೋಪಿಕಾ ಸ್ತ್ರೀಯರು ಬೆಳಿಗ್ಗೆ ಎದ್ದಾಕ್ಷಣ ದೀಪ ಹಚ್ಚಿ ವಾಸ್ತುಪೂಜೆಯನ್ನು – ಅಂದರೆ ಮನೆಯ ನಿವೇಶನವನ್ನು ಪ್ರತಿನಿಧಿಸುವ ಹೊಸ್ತಿಲನ್ನು ಆರಾಧಿಸಿ ದಧಿಮಥನದಲ್ಲಿ ತೊಡಗುತ್ತಿದ್ದರೆಂದು ಭಾಗವತ ನಿರೂಪಿಸಿದೆ.[1]

ಹೊಸ್ತಿಲ ಮಧ್ಯದಲ್ಲಿ ದ್ವಾರಕ್ಕೆ ಸಂಕೇತವಾಗಿ ಅರ್ಧವೃತ್ತಾಕಾರಗಳು. ಎಡ ಬಲಪಾರ್ಶ್ವಗಳಲ್ಲಿ ಗುಣಿಸು ಚಿಹ್ನೆಗಳಿಂದ ಭಗವಂತನ ದ್ವಾರಪಾಲಕರಾದ ಜಯ ವಿಜಯರ ಸಂಕೇತ. ಅದರ ನಂತರ ಬಲಬದಿಯಲ್ಲಿ ಸುದರ್ಶನ ಚಕ್ರದ ಚಿಹ್ನೆ. ಎಡ ಬದಿಯಲ್ಲಿ ಪಾಂಚಜನ್ಯ ಶಂಖದ ಚಿಹ್ನೆ—ಇವುಗಳನ್ನು ಬರೆದು ಚಕ್ರಶಂಖಗಳು ಯಾವ ಭಗವಂತನ ಅಸಾಧಾರಣ ಚಿಹ್ನೆಗಳಾಗಿವೆಯೋ—ಅಂತಹ ಭಗವಂತನಿಗೆ ಈ ಮನೆ ಸೇರಿದ್ದೆಂದು ಅನುಸಂಧಾನ ತಂದುಕೊಳ್ಳಬೇಕು. ಅಲ್ಲದೆ, ದುರ್ಗಾ ದೇವಿಯೇ ಭಗವಂತನ ಚಕ್ರವಾಗಿ ಶ್ರೀದೇವಿಯೇ ಶಂಖವಾಗಿ ಇರುವುದರಿಂದ ಅಂತಹ ಚಕ್ರಶಂಖಗಳಿಂದಾಗಿ ದುರ್ಗಾದೇವಿ ಶ್ರೀದೇವಿಯರ ಸನ್ನಿಧಾನಾತಿಶಯ ವನ್ನು ಅನುಸಂಧಾನ ಮಾಡಿಕೊಳ್ಳಬೇಕು. ಲಕ್ಷ್ಮೀದೇವಿಯ ಸನ್ನಿಧಾನವುಳ್ಳ ಕುಂಕುಮದ ಲೇಪನವೂ ಈ ಅನುಸಂಧಾನಕ್ಕೆ ಪೋಷಕವೆನಿಸುವುದು. ದ್ವಾರದಲ್ಲಿ ಯ ದುರ್ಗಾಸನ್ನಿಧಿ ಮನೆಗೆ ಬರಬಹುದಾದ ಅನಿಷ್ಟಗಳನ್ನು ಪರಿಹರಿಸಿದರೆ, ಶ್ರೀ ದೇವಿಯ ಸನ್ನಿಧಿ ಮನೆಯಲ್ಲಿ ಮಂಗಳ ವಾತಾವರಣದ ಆವರಣಕ್ಕೆ ನಿಮಿತ್ತವಾಗ ಬಲ್ಲದು.

ಮನೆ ಪರಿವಾರಸಹಿತನಾದ ಶ್ರೀಹರಿಗೆ ಸೇರಿದ್ದೆಂಬ ಅನುಸಂಧಾನಕ್ಕೆ ಪುಷ್ಟಿ ಕೊಡುವಂತಹ ಮಂತ್ರವನ್ನೋ ಹಾಡನ್ನೋ ಪಠಿಸುತ್ತ ಹೊಸ್ತಿಲನ್ನು ಅಲಂಕರಿಸ ಬೇಕು.

ಹೊಸ್ತಿಲನ್ನು ಅಲಂಕರಿಸುವಾಗ ಒಂದು ಶ್ಲೋಕವನ್ನು ಪಠಿಸುವ ಸಂಪ್ರ ದಾಯವಿದೆ. ಶ್ರೀಕೃಷ್ಣ ತಮಗೆ ಪತಿಯಾಗಿ ದೊರಕಬೇಕೆಂದು ಕಾತ್ಯಾಯನೀ ವ್ರತದ ಆಚರಣೆಯಲ್ಲಿ ತೊಡಗಿದ್ದ ನಂದಗೋಕುಲದ ಕುಮಾರಿಯರು ಪಠಿಸುತ್ತಿದ್ದ ಶ್ಲೋಕ ಅದು—

---

1. **"ಗೋಪ್ಯಃ ಸಮುತ್ಥಾಯ ನಿರೂಪ್ಯ ದೀಪಾನ್**
**ವಾಸ್ತೂನ್ ಸಮಭ್ಯರ್ಚ್ಯ ದಧೀನ್ಯಮಂಥನ್"** —ಭಾಗ. 10-47-44

**ಕಾತ್ಯಾಯನಿ ಮಹಾಮಾಯೇ ಮಹಾಯೋಗಿನ್ಯಧೀಶ್ವರಿ ।**
**ನಂದಗೋಪಸುತಂ ದೇವಿ ಪತಿಂ ಮೇ ಕುರು ತೇ ನಮಃ ॥ —ಭಾಗ. 10-22-4**

ಈ ಶ್ಲೋಕದ ಪೂರ್ವಾರ್ಧದಲ್ಲಿ ಮೂರು ವಿಶೇಷಣಗಳಿಂದ ಕಾತ್ಯಾಯನೀ ದೇವಿಯನ್ನು ಸ್ತುತಿಸಲಾಗಿದೆ. ಕಾತ್ಯಾಯನೀ ಅಂದರೆ ದುರ್ಗಾದೇವಿ.[1] ಪರಮಾತ್ಮನ ನೆಚ್ಚಿನ ಮಡದಿ. ಕೃಷ್ಣಾವತಾರದಲ್ಲಿ ಆವನ ತಂಗಿಯಾಗಿ ಸೇವೆ ಸಲ್ಲಿಸಿದವಳು. ಜಡಪ್ರಕೃತಿಗೆ ನಿಯಾಮಕಳಾಗಿದ್ದು 'ಮಹಾಮಾಯಾ' ಎನಿಸುವ ಆಕೆ ಇಡೀ ಜಗತ್ತಿಗೇ ಒಡೆಯಳು. ಭಗವಂತನಲ್ಲಿ ವಿಶೇಷವಾದ ಭಕ್ತಿಯನ್ನು ಹರಿಸಿ 'ಮಹಾಯೋಗಿನೀ' ಎನಿಸಿರುವವಳು. ಅಂತಹವಳಲ್ಲಿ ನಿನ್ನ ಪ್ರೀತಿಯ ಪತಿಯಾದ ಭಗವಂತನು ನನಗೂ ಪತಿಯಾಗಿ ದೊರಕುವಂತೆ ಅನುಗ್ರಹಿಸು ಎಂದು ಶ್ಲೋಕದ ಉತ್ತರಾರ್ಧದಲ್ಲಿ ಪ್ರಾರ್ಥಿಸಿಕೊಳ್ಳುವುದರಲ್ಲಿ ಔಚಿತ್ಯವಿದೆ. 'ಶ್ರೀರಮಣ' ಎನಿಸಿರುವ ಭಗವಂತನು ಲಕ್ಷ್ಮೀದೇವಿಗಷ್ಟೇ ಪತಿ ಆಗುವವನು. ಆದ್ದರಿಂದ ಉಳಿದ ಸ್ತ್ರೀಯರು ಭಗವಂತನ ಸನ್ನಿಧಾನಾತಿಶಯಕ್ಕೆ ಪಾತ್ರನಾದ ವ್ಯಕ್ತಿ ತಮಗೆ ಪತಿಯಾಗಿ ದೊರಕಲೆಂಬ ಅನುಸಂಧಾನದಿಂದ ಪ್ರಾರ್ಥಿಸಬೇಕು. ಈಗಾಗಲೇ ಮದುವೆಯಾಗಿ ಪತಿಯನ್ನು ಪಡೆದುಕೊಂಡಿರುವವರು ತಮ್ಮ ಪತಿಯಲ್ಲಿ ಭಗವಂತನ ಸನ್ನಿಧಾನಾತಿಶಯ ಬರುವಂತಾಗಲೆಂಬ ಅನುಸಸಂಧಾನದಿಂದ ಈ ಪ್ರಾರ್ಥನೆಯನ್ನು ಸಲ್ಲಿಸಬೇಕು.

ಪತಿಯ ಮಾಧ್ಯಮದಲ್ಲಿ ಸಾಧನೆ ನಡೆಸಬೇಕಾದ ಸ್ತ್ರೀಯರಿಗೆ ಒಳ್ಳೆಯ ಪತಿ ದೊರಕುವುದೇ ಜೀವನದಲ್ಲಿ ದೊಡ್ಡ ಭಾಗ್ಯವಾಗಿರುವುದರಿಂದ ಅಂತಹ ಭಾಗ್ಯಕ್ಕಾಗಿ ಪ್ರಾರ್ಥಿಸುವುದು ಔಚಿತ್ಯಪೂರ್ಣವಾದುದು.

**ಯಾವಾಗ ಅನುಸಂಧಾನ :**

ಆಯಾ ಚಟುವಟಿಕೆಗಳಿಗೆ, ಘಟನೆಗಳಿಗೆ ಸಂಬಂಧಪಡುವ ಅನುಸಂಧಾನ ಆಯಾ ಸಂದರ್ಭದಲ್ಲಿಯೇ ನಡೆಯಬೇಕಾದದ್ದು. ಆದರೆ ಆಯಾ ಚಟುವಟಿಕೆಯಲ್ಲಿ, ಘಟನೆಯಲ್ಲಿ ಮುಳುಗಿರುವ ಪ್ರಯುಕ್ತ ಆ ಸಂದರ್ಭದಲ್ಲಿಯೇ ಭಗವದನುಸಂಧಾನ ತೀರಾ ಅಶಕ್ಯ ಎಂದು ಕಂಡರೆ ಆ ಚಟುವಟಿಕೆಯೋ, ಘಟನೆಯೋ ಮುಗಿದ ಮೇಲೆ ಅದಕ್ಕೆ ಸಂಬಂಧಪಡುವಂತೆ ಭಗವದನುಸಂಧಾನವನ್ನು ತಂದುಕೊಳ್ಳಬೇಕು.

---

1. "ನಾಮಧೇಯಾನಿ ಕುರ್ವಂತಿ....ದುರ್ಗೇತಿ ಭದ್ರಕಾಲೀತಿ ವಿಜಯಾ ವೈಷ್ಣವೀತಿ ಚ ।
ಕುಮುದಾ ಚಂಡಿಕಾ ಕೃಷ್ಣಾ ಮಾಧವೀ ಕನ್ಯಕೇತಿ ಚ ।
ಮಾಯಾ ನಾರಾಯಣೀಶಾನೀ ಶಾರದೇತ್ಯಂಬಿಕೇತಿ ಚ ।"
ಎಂಬ ಭಗವಂತನ ಮಾತಿಗನುಗುಣವಾಗಿ (ಭಾಗ. 10-2-12) ಸಾಮಾನತಃ ಇತರ ದೇವಿಯರ ನಾಮಗಳೆಂದು ಪ್ರಸಿದ್ಧವಾದವೂ ಮುಖ್ಯವಾಗಿ ದುರ್ಗಾದೇವಿಯ ನಾಮಗಳೇ.

"ಕ್ರಿಯಾವಸಾನೇ ಪ್ರಯತಃ ಸ್ಮರೇತ" — ಎಂಬ ಭಾಗವತದ (2-2-15) ಸಂದೇಶದಲ್ಲಿ ಕ್ರಿಯಾಕಾಲದಲ್ಲಿ ಸ್ಮರಣೆ ಮಾಡಲಾಗದಿದ್ದರೆ, ಕ್ರಿಯೆ ಮುಗಿದ ಮೇಲಾದರೂ ಸ್ಮರಣೆ ನಡೆಸಬೇಕೆಂಬ ಸೂಕ್ಷ್ಮಾಂಶವೂ ಅಡಕವಾಗಿದೆ.

'ಸರ್ವಸಮರ್ಪಣೆ'ಯ ರಹಸ್ಯವನ್ನು ತಿಳಿಸಹೊರಟ ಶ್ರೀ ಗೋಪಾಲ ದಾಸರ ಏಸು ಬಗೆ ಪೂಜೆಗಳು ನಿನಗೆ ಮಾಡುವೆ ಎಂಬ್ಯಾ ..."—ಎಂಬ ಸುಳಾಯದಿಲ್ಲಿ ಆಯಾ ಚಟುವಟಿಕೆ, ಘಟನೆ ಮುಗಿದಾಕ್ಷಣ ಅಲ್ಲದಿದ್ದರೂ ಅಂತಹ ಅನುಸಂಧಾನಕ್ಕೆ ಯಾವಾಗ ಸಾತ್ವಿಕತೆ ಮೂಡುವುದೋ — ಆಗ ಹಿಂದೆ ತನ್ನ ಮೂಲಕ ನಡೆದ ಚಟುವಟಿಕೆಗಳನ್ನೆಲ್ಲ ನೆನೆದು ಅದಕ್ಕೆ ಸಂಬಂಧಿಸುವ ಅನುಸಂಧಾನವನ್ನು ತಂದುಕೊಂಡರೂ ಸಾಕು — ಎಂಬ ಸೂಚನೆ ದೊರಕುವುದು.

ಆದ್ದರಿಂದ ಆಯಾ ಚಟುವಟಿಕೆ ನಡೆಯುತ್ತಿರುವ ಸಂದರ್ಭದಲ್ಲಿಯೇ ಅಲ್ಲದಿದ್ದರೂ ಮುಂದೆ ಎಂದಾದರೂ ಸಾತ್ವಿಕತೆ ಪ್ರವೃದ್ಧವಾದಾಗ ಹಿಂದಿನ ಚಟುವಟಿಕೆಗಳನ್ನೆಲ್ಲ ಭಗವದನುಸಂಧಾನದ ಹಿನ್ನೆಲೆಯಲ್ಲಿ ಮೆಲುಕುಹಾಕಿ, ಭಗವಂತನಿಗೆ ಸಮರ್ಪಿಸಬೇಕು.



**ಪರಿಶಿಷ್ಟ: ೧೩**

## ಮಕ್ಕಳಿಗೆ ಆಧ್ಯಾತ್ಮಿಕ ಮೌಲ್ಯಗಳ ಶಿಕ್ಷಣವನ್ನು ನೀಡಬೇಕು

ತಾಯಿಯಾದವಳು ತನ್ನ ಮಕ್ಕಳ ಲಾಲನೆ ಪೋಷಣೆಗಳಲ್ಲಿ ತೊಡಗಿರುವಂತೆ ಆಧ್ಯಾತ್ಮಿಕ ಮೌಲ್ಯಗಳ ಶಿಕ್ಷಣವನ್ನೂ ನೀಡುತ್ತಿರಬೇಕು. ತಾಯಿಯ ಉಪದೇಶ ಮಕ್ಕಳ ಮೇಲೆ ಚೆನ್ನಾಗಿ ಪ್ರಭಾವ ಬೀರುವುದು. 'ಸತ್ಯವನ್ನು ಹೇಳಬೇಕು', 'ಸುಳ್ಳು ಹೇಳಬಾರದು'; 'ಹಿಂಸೆ ಮಾಡಬಾರದು'—ಮುಂತಾದ ನೀತಿಗಳನ್ನೂ ಭಗವತ್ಕೇಂದ್ರಿತವಾಗಿ ಉಪದೇಶಿಸಬೇಕು. ಅಂದರೆ ದೇವರಲ್ಲಿ ನಂಬಿಕೆಯನ್ನು ಹುಟ್ಟಿಸಿ, ಅಂತಹ ದೇವರ ಪ್ರೀತಿಗಾಗಿ ಒಳ್ಳೆಯ ರೀತಿಯಿಂದ ಬದುಕಬೇಕೆಂದು ತಿಳಿ ಹೇಳಬೇಕು. ಗುರು, ಬಂಧು, ತಂದೆ, ಪತಿ, ದೈವ—ಇವರೆಲ್ಲ ಸಂಸಾರ ಸಾಗರದಿಂದ ದಾಟಲು ಏನೂ ನೆರವು ನೀಡಿಲ್ಲ ಅಂದರೆ ಹೇಗೆ ಗುರು, ಬಂಧು, ತಂದೆ, ಪತಿ, ದೈವ – ಅಂತೆಲ್ಲ ಕರೆಸಿಕೊಳ್ಳಲು ಅನರ್ಹರೆನಿಸುವರೋ

ಹಾಗೆಯೇ ತಾಯಿಯೂ ತನ್ನ ಮಕ್ಕಳು ಸಂಸಾರ ಬಂಧನದಿಂದ ಬಿಡುಗಡೆ ಹೊಂದಲು ಬೇಕಾದ ಆಧ್ಯಾತ್ಮಿಕ ಸ್ಫೂರ್ತಿಯನ್ನು ನೀಡಿಲ್ಲ ಅಂದರೆ ತಾಯಿ ಎಂದೆನಿಸಲು ಅನರ್ಹಳಾಗುವಳು—ಎಂದು ಋಷಭರೂಪಿ ಪರಮಾತ್ಮ ಸಂದೇಶಿಸಿದ್ದಿದೆ.

**ಗುರುರ್ನ ಸ ಸ್ಯಾತ್ ಸ್ವಜನೋ ನ ಸ ಸ್ಯಾತ್ ।**
**ಪಿತಾ ನ ಸ ಸ್ಯಾಜ್ಜನನೀ ನ ಸಾ ಸ್ಯಾತ್ ।**
**ದೈವಂ ನ ತತ್ಸ್ಯಾನ್ನ ಪತಿಶ್ಚ ಸ ಸ್ಯಾ—**
**ನ್ನ ಮೋಚಯೇದ್ ಯಃ ಸಮುಪೇತಮೃತ್ಯುಮ್ ।**

**—ಭಾಗ. 5-5-18**

ತನ್ನ ಚಿಕ್ಕಮ್ಮ ಸುರುಚಿಯಿಂದ ಅವಮಾನಿತನಾಗಿ ಅಳುತ್ತ ಬಂದ ಬಾಲಕ ಧ್ರುವನಿಗೆ ಅವನ ತಾಯಿ ಸುನೀತಿ ನೀಡಿರುವ ಉಪದೇಶವನ್ನು ತಾಯಿಯಾದವರೆಲ್ಲ ವಿಶೇಷವಾಗಿ ಗಮನಿಸಬೇಕು.

'ಮತ್ತೊಬ್ಬರ ವಿಷಯದಲ್ಲಿ ಅನಿಷ್ಟವನ್ನು ಬಯಸಬಾರದು. ಇನ್ನೊಬ್ಬನಿಗೆ ದುಃಖಪ್ರದನಾದವನು ತಾನೂ ದುಃಖವನ್ನು ಅನುಭವಿಸಬೇಕಾಗುವುದು.[1] ತಪಸ್ಸಿನಿಂದ ಭಗವಂತನನ್ನು ಆರಾಧಿಸಲು ಸೂಚನೆಯನ್ನು ನಿನ್ನ ಚಿಕ್ಕಮ್ಮ ನೀಡಿರುವುದಾದರೂ ಅದು ಪರಮಸತ್ಯವಾದುದೇ. ಅದಕ್ಕನುಗುಣವಾಗಿ ನೀನು ನಡೆದುಕೊಳ್ಳು.[2] ಆ ಪುಂಡರೀಕಾಕ್ಷನಲ್ಲದೆ ಮತ್ತಾರೂ ನಿನ್ನ ದುಃಖವನ್ನು ಪರಿಹರಿಸಬಲ್ಲವರನ್ನು ನಾನು ಕಾಣಲಾರೆ. ಬ್ರಹ್ಮಾದಿ ದೇವತೆಗಳಿಂದಲೂ ಪ್ರಾರ್ಥಿಸಲ್ಪಡುವ ಲಕ್ಷ್ಮೀದೇವಿಯೂ ಪದ್ಮವನ್ನು ಕೈಯಲ್ಲಿ ಧರಿಸಿಕೊಂಡು ಆ ಪುಂಡರೀಕಾಕ್ಷನಿಗಾಗಿ ತವಕಿಸುತ್ತಿರುವಳು"[3]. ಸುನೀತಿಯ ಈ ಮಾತುಗಳೇ ಧ್ರುವನಿಗೆ ಗಾಢವಾದ ತಪಸ್ಸನ್ನು ಆಚರಿಸಲು ಸ್ಫೂರ್ತಿ ನೀಡಿದವು. ಒಂದು ವೇಳೆ, ಸುನೀತಿ ಅಂತಹ ಉಪದೇಶವನ್ನು ನೀಡದೆ; ಬದಲಾಗಿ ಧ್ರುವನನ್ನು ಅವಮಾನಿಸಿದ ಸುರುಚಿಯನ್ನು ಶಪಿಸಿದ್ದರೆ ಧ್ರುವನು ಅಧ್ಯಾತ್ಮದ ಮಾರ್ಗವನ್ನು ಹಿಡಿಯಲು ಸಾಧ್ಯವೇ ಇರಲಿಲ್ಲ ತಾನೇ ?

---

1. "ಮಾಮಂಗಲಂ ತಾತ ಪರೇಷು ಮಂಸ್ಥಾಃ
ಭುಂಕ್ತೇ ಜನೋ ಯತ್ಪರದುಃಖದಸ್ತತ್ ॥ —ಭಾಗ. 4-8-17
2. "ಆತಿಷ್ಠ ತತ್ತಾತ ವಿಮತ್ಸರಸ್ತ್ವ-
ಮುಕ್ತಂ ಸಮಾತ್ರಾಪಿ ಯದವ್ಯಲೀಕಮ್" —ಭಾಗ. 4-8-19
3. "ನಾನ್ಯಂ ತತಃ ಪದ್ಮಪಲಾಶಲೋಚನಾದ್
ದುಃಖಚ್ಛಿದಂ ತೇ ಮೃಗಯಾಮಿ ಕಂಚನ ।
ಯೋ ಮೃಗ್ಯತೇ ಹಸ್ತಗೃಹೀತಪದ್ಮಯಾ
ಶ್ರಿಯೈತರೈರಂಗ ವಿಮೃಗ್ಯಮಾಣಯಾ" —ಭಾಗ. 4-8-23

ಹೀಗೆ ಧ್ರುವನ ಧ್ರುವ ವ್ಯಕ್ತಿತ್ವಕ್ಕೆ ಪುಟಕೊಟ್ಟ ಸುನೀತಿಯು ವ್ಯಕ್ತಿತ್ವ ಪ್ರತಿಯೊಬ್ಬ ತಾಯಿಯಂದಿರಿಗೂ ಆದರ್ಶವಾಗಿರಬೇಕು.



**ಪರಿಶಿಷ್ಟ: ೧೪**

# ಶಿಶುಗಳಿಗೆ ಬಾಲಗ್ರಹಾದಿ ಪೀಡೆಗಳನ್ನು ತೊಲಗಿಸಿ ಸರ್ವತೋಮುಖವಾದ ರಕ್ಷಣೆಯನ್ನು ನೀಡುವ ಸಾತ್ವಿಕ 'ತಾಯಿತ'

ಶಿಶುಗಳು ಬೇರೆ ಬೇರೆ ಬಗೆಯ ಬಾಲಗ್ರಹಾದಿ ದುಷ್ಟಶಕ್ತಿಗಳ ಆಕ್ರಮಣಕ್ಕೊಳಗಾಗುವುದುಂಟು. ಆಗ ತಾಯಿಯಂದಿರು ಕಂಗಾಲಾಗಿ ಶಿಶುಗಳ ರಕ್ಷಣೆಗಾಗಿ ಏನು ಮಾಡಲೂ ಯಾವುದರ ತ್ಯಾಗಕ್ಕೂ ಸಿದ್ಧರಾಗಿರುವರು. ಅವೈದಿಕ ದೇವತೆಗಳ ತಾಯಿತಾದಿಗಳ ಧಾರಣೆಯಿಂದ ರಕ್ಷಣೆ ದೊರಕುವುದೆಂದರೆ ತಮ್ಮ ವೈಷ್ಣವ ದೀಕ್ಷೆಯನ್ನು ಬಿಟ್ಟು ಆ ಕ್ಷುದ್ರ ದೇವತೆಗಳನ್ನು ಶರಣಾಗತರಾಗುವುದಕ್ಕೂ ತಯಾರಾಗುವರು. ಹಾಗಾಗಬಾರದು. ಮುಖ್ಯ ರಕ್ಷಕನಾದ ಭಗವಂತನಲ್ಲಿಯೇ ರಕ್ಷಣೆಗಾಗಿ ಮೊರೆಯಿಡಬೇಕು. ಭಗವಂತನೇ ತನ್ನ ಬೇರೆ ಬೇರೆ ರೂಪಗಳಿಂದ ಶಿಶುವಿಗೆ ರಕ್ಷಣೆಯನ್ನು ನೀಡುತ್ತಿರುತ್ತಾನೆಂಬ ಅನುಸಂಧಾನಕ್ಕೆ ಪುಷ್ಟಿ ನೀಡುವ 'ಸಾತ್ವಿಕ ತಾಯಿತ'ವೊಂದನ್ನು ಭಾಗವತ ಪ್ರಸ್ತುತಪಡಿಸಿದೆ. ಬಾಲಕೃಷ್ಣನು ಪೂತನೆಯನ್ನು ನಿಗ್ರಹಿಸಿದ ಸಂದರ್ಭದಲ್ಲಿ ಅಂತಹ ದುಷ್ಟಶಕ್ತಿಗಳ ಸಂಪರ್ಕದಿಂದ ಮುಂದೆ ಮಗುವಿಗೇನೂ ಆಗಬಾರದೆಂದು ಗೋಪಿಯರು ಮಂತ್ರಾತ್ಮಕವಾದ ಈ ತಾಯಿತವನ್ನು ತೊಡಿಸುವರು.

ಎಂಟು ಶ್ಲೋಕಗಳ ವ್ಯಾಪ್ತಿಯಲ್ಲಿ ಇರುವ ಈ 'ತಾಯಿತ'ದ ಮೊದಲ ಶ್ಲೋಕದಲ್ಲಿ ಭಗವಂತನು ತನ್ನ ಅಜ ಮುಂತಾದ ಹನ್ನೊಂದು ರೂಪಗಳಿಂದ ಪಾದ, ಮೊಣಕಾಲು ಮುಂತಾದ ಅವಯವಗಳನ್ನು ರಕ್ಷಿಸಲೆಂದೂ, ಎರಡನೇ ಶ್ಲೋಕದಲ್ಲಿ ಭಗವಂತನು ಚಕ್ರ, ಗದಾ ಮುಂತಾದ ಆಯುಧಗಳನ್ನು ಧರಿಸಿರುವ ಎಂಟು ರೂಪಗಳಿಂದ ಶಿಶುವಿನ ಎದುರು, ಹಿಂದೆ ಹೀಗೆ ಎಲ್ಲೆಡೆ ರಕ್ಷಣೆಯನ್ನು ನೀಡಲೆಂದೂ, ಮೂರನೆಯ ಮತ್ತು ನಾಲ್ಕನೆಯ ಶ್ಲೋಕದಲ್ಲಿ ಭಗವಂತನು ಹೃಷೀಕೇಶ, ನಾರಾಯಣ ಮುಂತಾದ ಆರು ರೂಪಗಳಿಂದ ಮಗುವಿನ ಇಂದ್ರಿಯ

ಪ್ರಾಣ ಇವುಗಳನ್ನೆಲ್ಲ ರಕ್ಷಿಸಲೆಂದೂ ಐದನೇ ಶ್ಲೋಕದಲ್ಲಿ ಶಿಶು ಆಟ ಆಡುವುದೇ ಮುಂತಾದ ಬೇರೆ ಬೇರೆ ಸ್ಥಿತಿಯಲ್ಲಿ ಇರುವಾಗ ಗೋವಿಂದ ಮಾಧವ ಮುಂತಾದ 5 ರೂಪಗಳಿಂದ ಭಗವಂತನು ರಕ್ಷಣೆಯನ್ನು ನೀಡಲೆಂದೂ, ಮುಂದಿನ ಮೂರು ಶ್ಲೋಕಗಳಲ್ಲಿ ಶಿಶುಗಳ ಮೇಲೆ ಆಕ್ರಮಣ ಮಾಡಬಲ್ಲ ದುಷ್ಟ ಶಕ್ತಿಗಳನ್ನೆಲ್ಲ ಉಲ್ಲೇಖಿಸಿ, ಭಗವಂತನ 'ನಾಮಗ್ರಹಣ' ಮಾತ್ರದಿಂದಲೇ ಭಯಪಡುವ ಅವುಗಳೆಲ್ಲ ಭಗವಂತನ ನಾಮಗ್ರಹಣಪೂರ್ವಕವಾಗಿ ನಡೆಸಿದ 'ಬೀಜನ್ಯಾಸ'ದಿಂದಾಗಿ ನಶಿಸಿಹೋಗಲಿ–ಎಂದು ಹಾರೈಸಲಾಗುವುದು. ಹೀಗೆ ಭಗವಂತನ ನಾಮಗ್ರಹಣ ಪೂರ್ವಕವಾಗಿ ನಡೆಸಲ್ಪಟ್ಟ ಅನುಸಂಧಾನ ಶಿಶುಗಳಿಗೆ ವಜ್ರಕವಚ ತೊಡಿಸಿದಂತೆ ರಕ್ಷಣೆಯನ್ನು ನೀಡಬಲ್ಲದು.

**ಅವ್ಯಾದಜೋಂಘ್ರಿಮಣಿಮಾಂಸ್ತವ ಜಾನ್ವಥೋರೂ**
**ಯಜ್ಞೋಽಚ್ಯುತಃ ಕಟಿತಟಂ ಜಠರಂ ಹಯಾಸ್ಯಃ ।**
**ಹೃತ್ ಕೇಶವಸ್ತ್ವದುರ ಈಶ ಇನಸ್ತು ಕಂಠಂ**
**ವಿಷ್ಣುರ್ಭುಜಂ ಮುಖಮುರುಕ್ರಮ ಈಶ್ವರಃ ಕಮ್ ॥ ೧ ॥**

ಅಜ ಎನಿಸುವ ಭಗವಂತನು ನಿನ್ನ ಪಾದವನ್ನು ರಕ್ಷಿಸಲಿ. ಅಣಿಮಾನ್ ಎನಿಸುವ ಭಗವಂತನು ನಿನ್ನ ಮೊಣಕಾಲುಗಳನ್ನು ರಕ್ಷಿಸಲಿ. ಯಜ್ಞನಾಮಕ ಭಗವಂತನು ನಿನ್ನ ತೊಡೆಗಳನ್ನು ರಕ್ಷಿಸಲಿ. ಅಚ್ಯುತ ಎನಿಸುವ ಭಗವದ್ರೂಪ ನಿನ್ನ ಸೊಂಟ ಪ್ರದೇಶವನ್ನು ಕಾಪಾಡಲಿ. ಹೊಟ್ಟೆಯನ್ನು ಹಯಗ್ರೀವನು ರಕ್ಷಿಸಲಿ. ಹೃದಯವನ್ನು ಕೇಶವನೂ, ಎದೆಯನ್ನು ಈಶ ಎನಿಸುವ ಭಗವದ್ರೂಪವೂ, ಕಂಠವನ್ನು ಇನ ಎನಿಸುವ ಭಗವದ್ರೂಪವೂ, ಭುಜವನ್ನು ವಿಷ್ಣುವೂ, ತ್ರಿವಿಕ್ರಮನು ಮುಖವನ್ನೂ, ತಲೆಯನ್ನು ಈಶ್ವರನೂ ರಕ್ಷಿಸಲಿ.

**ಚಕ್ರ್ಯಗ್ರತಸ್ತು ಸಗದೋ ಹರಿರಸ್ತು ಪಶ್ಚಾತ್ ।**
**ತ್ವತ್ಪಾರ್ಶ್ವಯೋರ್ಧನುರಸೀ ಮಧುಹಾಽಜನಶ್ಚ ।**
**ಕೋಣೇಷು ಶಂಖ ಉರುಗಾಯ ಉಪರ್ಯುಪೇಂದ್ರಃ**
**ತಾರ್ಕ್ಷ್ಯಃ ಕ್ಷಿತೌ ಹಲಧರಃ ಪುರುಷಃ ಸಮಂತಾತ್ ॥ ೨ ॥**

ಚಕ್ರಧಾರಿಯಾದ ಶ್ರೀಹರಿ ನಿನ್ನ ಎದುರುಗಡೆಯಲ್ಲೂ, ಗದಾಧಾರಿ ಶ್ರೀಹರಿ ನಿನ್ನ ಹಿಂದುಗಡೆಯಲ್ಲೂ, ನಿನ್ನ ಪಾರ್ಶ್ವಗಳಲ್ಲಿ ಧನುರ್ಧಾರಿ ಮಧುಸೂದನನೂ, ಖಡ್ಗಧಾರಿ ಜನಾರ್ದನನೂ, ವಿದಿಕ್ಕುಗಳಲ್ಲಿ ಶಂಖಧಾರಿ ತ್ರಿವಿಕ್ರಮನೂ, ಮೇಲ್ಗಡೆ ಉಪಾವಾಮನನೂ, ಭೂಮಿಯಲ್ಲಿ ಸಂಕರ್ಷಣನೂ, ನೇಗಿಲುಧಾರಿ ಪುರುಷ ಎನಿಸಿರುವ ನಾರಾಯಣನೂ ಎಲ್ಲೆಡೆ ಇದ್ದುಕೊಂಡು ರಕ್ಷಣೆ ನೀಡಲಿ.

**ಇಂದ್ರಿಯಾಣಿ ಹೃಷೀಕೇಶಃ ಪ್ರಾಣಾನ್ ನಾರಾಯಣೋಽವತು ।**
**ಶ್ವೇತದ್ವೀಪಪತಿಶ್ಚಿತ್ತಂ ಮನೋ ಯೋಗೇಶ್ವರೋಽವತು ॥ ೩ ॥**
**ಪೃಶ್ನಿಗರ್ಭಸ್ತು ತೇ ಬುದ್ಧಿಮಾತ್ಮಾನಂ ಭಗವಾನ್ ಪರಃ ॥ ೪ ॥**

ಹೃಷೀಕೇಶನು ನಿನ್ನ ಇಂದ್ರಿಯಗಳನ್ನು ರಕ್ಷಿಸಲಿ. ಪ್ರಾಣಗಳನ್ನು ನಾರಾಯಣನು ರಕ್ಷಿಸಲಿ. ಶ್ವೇತದ್ವೀಪಾಧಿಪತಿಯು ಚಿತ್ತವನ್ನು ಕಾಪಾಡಲಿ. ಯೋಗೇಶ್ವರನು ಮನಸ್ಸನ್ನು ರಕ್ಷಿಸಲಿ. ಪೃಶ್ನಿಗರ್ಭ ವಾಸುದೇವನು ನಿನ್ನ ಬುದ್ಧಿಯನ್ನು ರಕ್ಷಿಸಲಿ. ನಿನ್ನ ದೇಹವನ್ನು ಪರಃ ಎನಿಸಿರುವ ಭಗವಂತನು ರಕ್ಷಿಸಲಿ.

**ಕ್ರೀಡಂತಂ ಪಾತು ಗೋವಿಂದಃ ಶಯಾನಂ ಪಾತು ಮಾಧವಃ ।**
**ವ್ರಜಂತಮವ್ಯಾದ್ ವೈಕುಂಠ ಆಸೀನಂ ತ್ವಾಂ ಶ್ರಿಯಃಪತಿಃ ।**
**ಭುಂಜಾನಂ ಯಜ್ಞಭುಕ್ ಪಾತು ಸರ್ವಗ್ರಹಭಯಂಕರಃ ॥ ೫ ॥**

ನಿನ್ನನ್ನು ಆಟ ಆಡುತ್ತಿರುವಾಗ ಗೋವಿಂದನೂ, ಮಲಗಿರುವಾಗ ಮಾಧವನೂ, ಸಂಚರಿಸುತ್ತಿರುವಾಗ ವೈಕುಂಠನೂ, ಕುಳಿತಿರುವಾಗ ಶ್ರೀಪತಿಯೂ, ತಿನ್ನುತ್ತಿರುವಾಗ 'ಯಜ್ಞಭುಕ್' ಎನಿಸಿರುವ ಪರಮಾತ್ಮನೂ ಹೀಗೆ ಸಕಲ ದುಷ್ಟ ಗ್ರಹಗಳಿಗೂ ಭಯಂಕರನಾದ ಭಗವಂತನು ತನ್ನ ಬೇರೆ ಬೇರೆ ರೂಪದಿಂದ ಬೇರೆ ಬೇರೆ ಚಟುವಟಿಕೆಗಳಲ್ಲಿ ತೊಡಗಿರುವ ನಿನ್ನ ರಕ್ಷಣೆಯನ್ನು ಮಾಡಲಿ.

**ಡಾಕಿನ್ಯೋ ಯಾತುಧಾನ್ಯಶ್ಚ ಕೂಶ್ಮಾಂಡಾ ಯೇಽರ್ಭಕಗ್ರಹಾಃ ।**
**ಭೂತಪ್ರೇತಪಿಶಾಚಾಶ್ಚ ಯಕ್ಷರಕ್ಷವಿನಾಯಕಾಃ ॥ ೬ ॥**

**ಕೋಟರಾ ರೇವತೀ ಜ್ಯೇಷ್ಠಾ ಪೂತನಾ ಮಾತೃಕಾದಯಃ ।**
**ಉನ್ಮಾದಾ ಯೇ ಹ್ಯಪಸ್ಮಾರಾ ದೇಹಪ್ರಾಣೇಂದ್ರಿಯ ದ್ರುಹಃ ॥ ೭ ॥**

**ಸ್ವಪ್ನದೃಷ್ಟಾ ಮಹೋತ್ಪಾತಾ ವೃದ್ಧಬಾಲಗ್ರಹಾಶ್ಚ ಯೇ ।**
**ಸರ್ವೇ ನಶ್ಯಂತು ತೇ ವಿಷ್ಣೋರ್ನಾಮಗ್ರಹಣಭೀರವಃ ॥ ೮ ॥**

ಬಾಲಗ್ರಹಗಳೆನಿಸಿರುವ ಹೆಣ್ಣು ದೆವ್ವಗಳು, ರಾಕ್ಷಸಿಯರು, ಈಶ್ವರನ ಪ್ರಮಥ ಗಣದವರು, ಭೂತ, ಪ್ರೇತ, ಪಿಶಾಚ, ಯಕ್ಷ, ರಕ್ಷ, ವಿನಾಯಕ ಮುಂತಾದ ದುಷ್ಟ ಶಕ್ತಿಗಳು, ಕೊಟರಾ, ರೇವತೀ, ಜ್ಯೇಷ್ಠಾ, ಪೂತನಾ ಮುಂತಾದ ದುಷ್ಟ ಶಕ್ತಿಗಳು; ದೇಹ, ಪ್ರಾಣ, ಇಂದ್ರಿಯಗಳಿಗೆ ಕೆಡುಕನ್ನುಂಟು ಮಾಡುವ, ಚಿತ್ತಪಲ್ಲಟ, ಬೀಳುವರೋಗ, ಸ್ವಪ್ನದಲ್ಲಿ ಕಾಣಿಸುವ ಭೂತ, ಮುಂತಾದ ಅಪಶಕುನಗಳು ಇವೆಲ್ಲ ಶ್ರೀವಿಷ್ಣುವಿನ ನಾಮಗ್ರಹಣ ಮಾತ್ರಕ್ಕೆ ಭಯಪಡುವವುಗಳಾಗಿದ್ದು, ಅವನ ನಾಮಗ್ರಹಣದಿಂದಾಗಿ ಅವೆಲ್ಲ ನಶಿಸಿಹೋಗಲಿ.

**ಪರಿಶಿಷ್ಟ : ೧೫**

# ಪತಿಗೆ ಸಕಾಲಿಕ ಉಪದೇಶ ನೀಡುವುದರಿಂದ ಪಾತಿವ್ರತ್ಯಕ್ಕೆ ಚ್ಯುತಿ ಇಲ್ಲ

ಪತಿಯು ಪತ್ನಿಯ ಪಾಲಿಗೆ ಗುರು ಕೂಡಾ. ಆದರೆ ಕೆಲವೊಂದು ಸಂದರ್ಭಗಳಲ್ಲಿ ಪತ್ನಿ ತನ್ನ ಪತಿಗೆ ಉಪದೇಶವನ್ನು ನೀಡುವುದೇನೂ ಅನುಚಿತ ಎನಿಸುವುದಿಲ್ಲ. ಪತಿಯೂ ಒಬ್ಬ ಮನುಷ್ಯನೇ ಎಂದ ಮೇಲೆ ತಿಳಿದೋ ತಿಳಿಯದೆಯೋ ದಾರಿ ತಪ್ಪುವುದು ಸಹಜವಾಗಿರುವುದರಿಂದ, ಅವನ ಹಿತೈಷಿಣಿಯಾದ ಪತ್ನಿ ಅವನ ದಾರಿತಪ್ಪುವಿಕೆಯನ್ನು ನೋಡುತ್ತ, ಮೌನ ತಾಳಿಕೊಂಡಿರದೆ ವಿನೀತಳಾಗಿ ಉಪದೇಶವನ್ನು ನೀಡುವುದು ಅತ್ಯವಶ್ಯ. ಅತಿಪ್ರಿಯಳಾಗಿದ್ದು 'ಕಾಂತಾ' ಎನಿಸುವ ಆಕೆಯ ಉಪದೇಶ ಅವನ ಮೇಲೆ ತುಂಬ ಪರಿಣಾಮಕಾರಿಯಾಗಬಲ್ಲದು. 'ಕಾಂತಾಸಮ್ಮಿತತಯಾ ಉಪದೇಶಯುಜೇ....' —ಎಂಬುದಾಗಿ ಕಾಂತೆಯ ಉಪದೇಶದಂತೆ ಉಪದೇಶ ನೀಡುವುದೂ ಕಾವ್ಯದ ಪ್ರಯೋಜನಗಳಲ್ಲೊಂದೆಂದು ಕಾಂತೆಯ ಉಪದೇಶವನ್ನು ದೃಷ್ಟಾಂತವಾಗಿ ತೆಗೆದುಕೊಂಡಿರುವಷ್ಟು ಪ್ರಸಿದ್ಧವಾದುದು ಪತ್ನಿಯಾದವಳ ಉಪದೇಶ.

ಪತಿಯಿಂದ ಉಪದೇಶ ಕೇಳಬೇಕಾದವಳು ಅವರಿಗೆ ಉಪದೇಶ ನೀಡುವುದೇ! —ಎಂದು ಮುಜುಗುರ ತಾಳುವವಳು ಮಹಾಪತಿವ್ರತೆಯರೆಂದು ಪ್ರಸಿದ್ಧರಾದ ಸೀತಾದೇವಿ, ದ್ರೌಪದೀದೇವಿ ಮುಂತಾದವರೂ ಕೆಲವೊಂದು ಸಂದರ್ಭಗಳಲ್ಲಿ ತಮ್ಮ ಪತಿಗೆ ಉಪದೇಶ ನೀಡಿದ್ದನ್ನು ಪರಿಶೀಲಿಸಬೇಕು.

**ಹಿಂಸಾತ್ಯಾಗದ ಬಗ್ಗೆ ಸೀತೆಯ ಉಪದೇಶ :**

ಪಿತೃವಚನಕ್ಕೆ ಗೌರವ ಕೊಟ್ಟು ಅರಣ್ಯಕ್ಕೆ ಹೊರಟ ಸೀತಾಲಕ್ಷ್ಮಣಸಹಿತನಾದ ಶ್ರೀರಾಮ ಸುತೀಕ್ಷ್ಣ ಎಂಬ ಋಷಿಯ ಆಶ್ರಮದಿಂದ ದಂಡಕಾರಣ್ಯದ ಕಡೆಗೆ ಸಾಗುತ್ತಿದ್ದಾಗ, ಸೀತಾದೇವಿ ವಿನೀತಳಾಗಿ ಶ್ರೀರಾಮಚಂದ್ರನಿಗೆ ಉಪದೇಶಿಸುವಳು.[1] ದಂಡಕಾರಣ್ಯವಾಸಿಗಳಿಗೆ ರಕ್ಷಣೆ ನೀಡಲು ಹಿಂಸೆಯಲ್ಲಿ ತೊಡಗಬೇಡ— "ನ ಕಥಂಚನ ಸಾ ಕಾರ್ಯಾ ಗೃಹೀತಧನುಷಾ ತ್ವಯಾ । ಬುದ್ಧಿಃ...." ನೀನು ರಾಜ್ಯವನ್ನು ತ್ಯಜಿಸಿ ಅರಣ್ಯಕ್ಕೆ ಬಂದವ; ತಪಸ್ಸಿಗಾಗಿ ಬಂದವ. ಹೀಗಿರು

1. ವಾ. ರಾಮಾಯಣ ಅರಣ್ಯಕಾಂಡೇ —9ನೇ ಸರ್ಗದಲ್ಲಿ

ವಾಗ ಪುನಃ ಧನುಸ್ಸನ್ನು ಧರಿಸಿ, ಕ್ಷತ್ರಿಯ ಧರ್ಮದಂತೆ ಹಿಂಸೆಯಲ್ಲಿ ತೊಡಗುವುದು ವಿಪರ್ಯಾಸವಲ್ಲವೇ ? —ಕ್ವ ಚ ಶಸ್ತ್ರಂ ಕ್ವ ಚ ವನಂ ಕ್ವ ಚ ಕ್ಷಾತ್ರಂ ತಪಃ ಕ್ವ ಚ" — ಹೀಗೆಲ್ಲ ಉಪದೇಶ ನೀಡಿ 'ಸ್ನೇಹಾಚ್ಚ ಬಹುಮಾನಾಚ್ಚ ಸ್ಮಾರಯೇ ತ್ವಾಂ ತು ಶಿಕ್ಷಯೇ । ನ ಕಥಂಚನ....' —ನಿನ್ನ ಮೇಲಿನ ಸ್ನೇಹದಿಂದ ಗೌರವದಿಂದ ನಿನಗೆ ಧರ್ಮವನ್ನು ನೆನಪಿಸಿಕೊಟ್ಟಿದ್ದೇನೆಯೇ ಹೊರತು ಧರ್ಮದ ಬಗ್ಗೆ ಶಿಕ್ಷಣ ಕೊಡುತ್ತಿಲ್ಲ. 'ವಿಚಾರ್ಯ ಬುದ್ಧ್ಯಾ ತು ಸಹಾನುಜೇನ ಯದ್ ರೋಚತೇ ತತ್ ಕುರು ಮಾಚಿರೇಣ' —ಲಕ್ಷ್ಮಣನ ಜೊತೆಗೆ ಸಮಾಲೋಚನೆ ನಡೆಸಿ ಹೇಗೆ ಸರಿ ಎನಿಸುವುದೋ ಹಾಗೆ ನಡೆದುಕೊಳ್ಳು ಎಂದು ಹೇಳಲೂ ಮರೆಯುವುದಿಲ್ಲ.

ಪತ್ನಿ ಎಷ್ಟು ವಿನೀತಳಾಗಿ ಉಪದೇಶ ನೀಡಬೇಕೆಂಬುದಕ್ಕೂ ಇದು ಒಳ್ಳೆಯ ಆದರ್ಶ.

'ಪರಿತುಷ್ಟೋಽಸ್ಮ್ಯಹಂ ಸೀತೇ....' —ಮುಂತಾದ ಮಾತುಗಳಿಂದ ಸೀತೆಯ ಆ ಉಪದೇಶವನ್ನು ಅಭಿನಂದಿಸಿದ ಶ್ರೀರಾಮಚಂದ್ರ ಸಹಧರ್ಮಿಣಿಯಾದವಳು ಹಾಗೆ ಸಕಾಲಿಕ ಉಪದೇಶವನ್ನು ನೀಡುವುದು ಸಮುಚಿತವಾದುದೆಂದು ಸೂಚಿಸಿರುವನು.

**ದ್ರೌಪದಿಯಿಂದ ಪೌರುಷವಾದದ ಮಂಡನೆ :**

ದ್ಯೂತದಲ್ಲಿ ಸೋತು ಅರಣ್ಯಕ್ಕೆ ಸೇರಿದ ಯುಧಿಷ್ಠಿರ ಒಂದು ವರ್ಷ ಕಳೆದರೂ ಮುಂದೆ ಹನ್ನೆರಡು ವರ್ಷಗಳ ಬಳಿಕ ರಾಜ್ಯವನ್ನು ಪಡೆದುಕೊಳ್ಳುವುದಕ್ಕೆ ಬೇಕಾದ ಸಿದ್ಧತೆಯಲ್ಲಿ ಯುಧಿಷ್ಠಿರ ತೊಡಗದಿರುವುದನ್ನು ಗಮನಿಸಿದ ಭೀಮಸೇನನ ಆಜ್ಞೆಯ ಮೇರೆಗೆ ದ್ರೌಪದೀದೇವಿ ಯುಧಿಷ್ಠಿರನೆದುರು ಪೌರುಷವಾದವನ್ನು ಮಂಡಿಸುತ್ತಾಳೆ. ಮಹಾಭಾರತದ ನಾಲ್ಕು ಅಧ್ಯಾಯಗಳ ವ್ಯಾಪ್ತಿಯನ್ನು ಪಡೆಯುವಷ್ಟು[1] ಸುದೀರ್ಘ ಚರ್ಚೆಯನ್ನು ನಡೆಸಿ ಕ್ಷಮೆಯ ಮಹತ್ತ್ವವನ್ನು ಪ್ರತಿಪಾದಿಸುತ್ತಿದ್ದ ಯುಧಿಷ್ಠಿರನನ್ನು ನಿರುತ್ತರನನ್ನಾಗಿಸುವಳು. ಸ್ತ್ರೀಯರಿಗೆ ಹೆಚ್ಚು ವಾಚಾಲತ್ವವು ಶೋಭಿಸುವುದಿಲ್ಲ — ಎಂದು ಮತ್ತೆ ಹೆಚ್ಚು ಮಾತನಾಡದೆ ಸುಮ್ಮನಾಗುವಳು.

ಹೀಗೆ ದ್ರೌಪದೀ ದೇವಿ ತನ್ನ ಪತಿ ಎದುರು ಅವನ ಪ್ರವೃತ್ತಿಯ ವಿರುದ್ಧವಾಗಿ ವಾದವನ್ನು ಮಂಡಿಸಿರುವಳೆಂದರೆ, ಅದಕ್ಕೆ ಭೀಮಸೇನನ ಪ್ರೇರಣೆ ಹಿನ್ನೆಲೆಯಾಗಿತ್ತೆಂದರೆ,[2] ಪತಿಗೂ ಸಕಾಲಿಕ ಉಪದೇಶವನ್ನು ನೀಡಬಹುದೆಂಬುದನ್ನು ಇದರಿಂದ ನಿಶ್ಚಯಿಸಿಕೊಳ್ಳಬಹುದು ತಾನೆ ?

---

1. ವನಪರ್ವ -27, 28, 30 ಹಾಗೂ 32 ಅಧ್ಯಾಯಗಳಲ್ಲಿ
2. "....ಜಗಾದ ಕೃಷ್ಣಾ ಭೀಮಾಜ್ಞಯಾ ಧರ್ಮರಾಜಂ ಸುವೇತ್ರೀ"

—ಮ.ಭಾ.ತಾ.ನಿ. 22-63

**ಗಾಂಧಾರಿ ಟೀಕಿಸಿದುದು :**

ತನಗೆ ಪತಿಯಾಗುವ ಧೃತರಾಷ್ಟ್ರ ಕುರುಡನೆಂದು ತಿಳಿದಾಕ್ಷಣ ಹಾಗಾದರೆ ತಾನೂ ಪತಿಗೆ ಇಲ್ಲದ ಚಾಕ್ಷುಷ ಜ್ಞಾನವನ್ನು ಹೊಂದಬಾರದೆಂದು ಕಣ್ಣಿಗೆ ಬಟ್ಟೆ ಕಟ್ಟಿಕೊಂಡು ಬದುಕಿಡೀ ಕಣ್ಣಿನ ಉಪಯೋಗವನ್ನು ಪಡೆದುಕೊಳ್ಳದೆಯೇ ಬದುಕಿದ ಪತಿವ್ರತೆ[1] ಗಾಂಧಾರಿಯೂ ಶ್ರೀಕೃಷ್ಣ ಪಾಂಡವರ ಕೌರವರ ಮಧ್ಯೆ ಸಂಧಾನಕ್ಕಾಗಿ ಬಂದಾಗ ನಡೆದ ಕೌರವ ಸಭೆಯಲ್ಲಿ ದುರ್ಯೋಧನನಿಗೆ ಬುದ್ಧಿವಾದ ನೀಡಲು ಹೇಳಿದ ಧೃತರಾಷ್ಟ್ರನಿಗೆ—ನೀನೇ ಮೊದಲು ನಿಂದಾರ್ಹನಾಗಿರುವವನು. ಪುತ್ರ ದುರ್ಯೋಧನನ ಪ್ರಜ್ಞೆ ಕಲುಷಿತವಾಗುತ್ತಿದೆ ಎಂದು ತಿಳಿದರೂ 'ಪುತ್ರ ಪ್ರಿಯ'ನಾಗಿದ್ದುಕೊಂಡು ಅವನ ಪ್ರವೃತ್ತಿಗೆ ಅನುಮೋದನೆಯನ್ನು ನೀಡಿರುವಿ ತಾನೇ ? —'ತ್ವಂ ಹ್ಯೇವಾತ್ರ ಭೃಶಂ ಗರ್ಹ್ಯೋ ಧೃತರಾಷ್ಟ್ರ ಸುತಪ್ರಿಯಃ' —ಎಂದು ಟೀಕಿಸುವಳು. ಧೃತರಾಷ್ಟ್ರ ಪುತ್ರನ ವಿಷಯದಲ್ಲಿ ಅನುಚಿತವಾಗಿ ನಡೆದುಕೊಂಡಿರುವುದನ್ನು ಸಮರ್ಥಿಸುವಳು. [2]

ಹೀಗೆ ಗಂಡನನ್ನು ಸಭೆಯಲ್ಲಿಯೇ ತರಾಟೆಗೆ ತೆಗೆದುಕೊಂಡಿದ್ದರೂ ಗಾಂಧಾರಿಯ ಪಾತಿವ್ರತ್ಯ ಅದರಿಂದ ಚ್ಯುತವಾಗಲಿಲ್ಲ ತಾನೇ ?

**ಶಕುಂತಲೆ ಎಚ್ಚರಿಸುದುದು :**

ಕಣ್ವ ಮುನಿಯ ಸಾಕುಮಗಳಾದ ಶಕುಂತಲೆಯನ್ನು ದುಶ್ಯಂತ ಗಾಂಧರ್ವ ವಿಧಿಗನುಗುಣವಾಗಿ ವಿವಾಹವಾದ. ಆದರೆ ಮತ್ತೆ ಹಸ್ತಿನಪುರಕ್ಕೆ ಬಂದವ ಆಕೆಯ ಕಡೆಗೆ ಗಮನವೇ ಹರಿಸಿಲ್ಲ. ಭರತನೆಂಬ ಪುತ್ರನನ್ನು ಪಡೆದ ಶಕುಂತಲೆ ದುಶ್ಯಂತನಲ್ಲಿಗೆ ಬಂದಾಗ–ಅವನು ಶಕುಂತಲೆಯ ಪರಿಚಯವೇ ಇಲ್ಲದಂತೆ ನಟಿಸುವನು. ಆಗ ಶಕುಂತಲೆ ಅರಮನೆಯಲ್ಲಿಯೇ ದುಶ್ಯಂತನನ್ನು ಚೆನ್ನಾಗಿ ನಿಂದಿಸುವಳು. ಸುಮಾರು ಎಪ್ಪತ್ತೈದು ಶ್ಲೋಕಗಳ[3] ವ್ಯಾಪ್ತಿಯಲ್ಲಿ ತುಂಬಿರುವ ಉಪದೇಶದಲ್ಲಿ –'ಮಾತ್ಯಾಕ್ಷೀಃ ಸಮಯಂ ರಾಜನ್ ಸತ್ಯಂ ಸಂಗತಮಸ್ತು ತೇ" –ಪ್ರತಿಜ್ಞೆಯನ್ನು ಮುರಿಯಬೇಡ, ಸತ್ಯವನ್ನು ಪಾಲಿಸು – ಇತ್ಯಾದಿಯಾಗಿ ಸತ್ಯದ ಪಾಲನೆಗೆ ಕೊಟ್ಟಿರುವ ಕರೆ ಮುಂತಾದವುಗಳನ್ನು ಒಳಗೊಂಡಿವೆ. ಭಾರ್ಯೆ

---

1. ತತಃ ಸಾ ಪಟ್ಟಮಾದಾಯ ಕೃತ್ವಾ ಬಹುಗುಣಂ ತದಾ ।
ಬಬಂಧ ನೇತ್ರೇ ಸ್ವೇ ರಾಜನ್ ಪತಿವ್ರತಪರಾಯಣಾ ॥ —ಆದಿಪರ್ವ 109-14
2. ಮ. ಭಾರ. ಉದ್ಯೋಗ 129—10....15
3. ಆದಿಪರ್ವ 74ನೇ ಅಧ್ಯಾಯದಲ್ಲಿ 25ರಿಂದ 72 ಹಾಗೂ 82ರಿಂದ 108ರವರೆಗೆ ಶ್ಲೋಕಗಳು.

ಯ, ಪುತ್ರನ ಮಹತ್ತ್ವವೂ ಸಮರ್ಥಿಸಲಾಗುವುದು. "ಯದಿ ಮೇ ಯಾಚ-ಮಾನಾಯಾ ವಚನಂ ನ ಕರಿಷ್ಯಸಿ । ದುಶ್ಯಂತ ಶತಧಾ ಮೂರ್ಧಾ ತತಸ್ತೇಽದ್ಯ ಸ್ಫುಟಿಷ್ಯತಿ" – ಬೇಡುತ್ತಿರುವ ನನ್ನ ಮಾತಿಗೆ ಬೆಲೆ ಕೊಡುವುದಿಲ್ಲ ಎಂದಾದರೆ ನಿನ್ನ ತಲೆ ನೂರು ಹೋಳಾಗಿ ಒಡೆದು ಹೋಗುವುದು— ಎಂದು ಶಪಿಸಿರುವುದೂ ಸೇರಿಕೊಂಡಿದೆ.

ಹೀಗೆ ಶಕುಂತಲೆ ಸಿಂಹಾಸನವನ್ನೇರಿರುವ ಪತಿಗೆ ಉಪದೇಶ ನೀಡಿದರೂ ಅದು ಅಪರಾಧ ಎನಿಸಲಿಲ್ಲ. 'ಭರಸ್ವ ಪುತ್ರಂ ದುಶ್ಯಂತ ಮಾವಮಂಸ್ಥಾಃ ಶಕುಂತಲಾಮ್' —ಶಕುಂತಲೆಯನ್ನೂ, ಅವಳ ಪುತ್ರನನ್ನೂ ಪೋಷಿಸು. ಅವ ಮಾನಿಸಬೇಡ – ಎಂದು ಅಶರೀರವಾಣಿಯ ಮೂಲಕ ತಿಳಿಸಲ್ಪಡಬೇಕೆಂದರೆ ಆಕೆ ದುಶ್ಯಂತನೆದುರು ಕ್ರುದ್ಧಳಾಗಿ ಮುಖಕ್ಕೆ ಮುಖಕೊಟ್ಟು [ಭರ್ತಾರಮಭಿಸಂಪ್ರೇಕ್ಷ್ಯ ಕ್ರುದ್ಧಾ ವಚನಮಬ್ರವೀತ್] ಉಪದೇಶ ನೀಡಿದುದು ಅನುಚಿತ ಎಂದಾಗಲಿಲ್ಲ ತಾನೇ ?

ಹೀಗೆ ಪತಿ ದಾರಿತಪ್ಪಿದಾಗ ಅಥವಾ ತಪ್ಪುವ ಸ್ಥಿತಿಯಲ್ಲಿರುವಾಗ ಪತ್ನಿ ಅವಶ್ಯವಾಗಿ ಅವನಿಗೆ ಉಪದೇಶವನ್ನು ನೀಡಬೇಕು.



**ಪರಿಶಿಷ್ಟ: ೧೬**

## ಶೌಚ-ಸ್ನಾನಗಳ ಹಿರಿಮೆ ಮತ್ತು ವಿಧಾನ

ಪಾತಿವ್ರತ್ಯ ಧರ್ಮ ಫಲಿಸಲು ಅವಶ್ಯವಾದವುಗಳಲ್ಲಿ ಶೌಚವೂ ಒಂದಾಗಿದೆ. ಯಾಕೆಂದರೆ ಯಾವುದೇ ಧರ್ಮ ಫಲಿಸಬೇಕೆಂದರೆ 'ಶೌಚ' ಇದ್ದೇ ಇರಬೇಕು.[1] ಶೌಚವಿಲ್ಲದ ವ್ಯಕ್ತಿ ನೀಡಿದ್ದನ್ನು ದೇವತೆಗಳು ಸ್ವೀಕರಿಸುವುದಿಲ್ಲ.[2] ಶೌಚಹೀನ ವ್ಯಕ್ತಿಯ ಮೇಲೆ ರಾಕ್ಷಸ ಪಿಶಾಚಾದಿ ದುಷ್ಟ ಶಕ್ತಿಗಳ ಆಕ್ರಮಣವಾಗುವುದಿದೆ.[3]

---

1. ಸರ್ವೇಷಾಮೇವ ಧರ್ಮಾಣಾಂ ಶೌಚಂ ವಾ ಫಲಭಾಗ್ಭವೇತ್ —ವಿ.ಧ. 3-272-2
● ಶೌಚಾಚಾರವಿಹೀನಸ್ಯ ಸಮಸ್ತಾಃ ನಿಷ್ಫಲಾಃ ಕ್ರಿಯಾಃ —ವ್ಯಾಸಸ್ಮೃತಿ
2. ದತ್ತಂ ಯಚ್ಛೌಚಹೀನೇನ ನ ತದ್ಗೃಹ್ಣಂತಿ ದೇವತಾಃ । —ವಿ.ಧ. 3-249-21
3. ಯಕ್ಷೈಶ್ಚ ರಾಕ್ಷಸೈಶ್ಚೈವ ಪಿಶಾಚೈಶ್ಚ ನಿಶಾಚರೈಃ ।
ಡಾಕಿನೀಭಿಶ್ಚ ಧರ್ಮಜ್ಞಾಃ ಶೌಚಹೀನೋಽಭಿಭೂಯತೇ । —ವಿ.ಧ. 3-249-2

ಇಂತಹ ಶೌಚ ಹೊರಗಿನ ಶೌಚ ಹಾಗೂ ಒಳಗಿನ ಶೌಚ ಎಂಬುದಾಗಿ ಎರಡು ಪ್ರಭೇದಗಳನ್ನೊಳಗೊಂಡಿದೆ. ಮಣ್ಣು ನೀರುಗಳಿಂದ ಹೊರಗಿನ ಶೌಚವಾದರೆ, 'ಭಾವಶುದ್ಧಿ'ಯಿಂದ ಆಂತರಿಕ ಶೌಚವು ಸಿದ್ಧಿಸುವುದು.[1]

ಮಲ ಅಥವಾ ಮೂತ್ರ ವಿಸರ್ಜಿಸಿದಾಗ ಆಯಾ ದ್ವಾರಗಳನ್ನು ಮಣ್ಣಿನಿಂದ, ಜಲದಿಂದ ತೊಳೆದುಕೊಳ್ಳಬೇಕು.[2] ಒಮ್ಮೆ ಬಾಯಿ ಮುಕ್ಕಳಿಸಿ, ಒಮ್ಮೆ ಅಚಮನ ಮಾಡಬೇಕು.[3] ಮಲ ವಿಸರ್ಜನೆಯ ಸಂದರ್ಭದಲ್ಲಿ ಮಲದ ದುರ್ಗಂಧ ಪೂರ್ಣವಾಗಿ ಹೋಗುವವರೆಗೆ ಒಳ್ಳೆಯ ಮಣ್ಣಿನಿಂದ ಕೈಕಾಲುಗಳನ್ನು ತೊಳೆದುಕೊಳ್ಳಬೇಕು. ದುರ್ಗಂಧ ಪೂರ್ಣವಾಗಿ ದೂರವಾಗಲು ಎಷ್ಟು ಬಾರಿ ಮೃತ್ತಿಕಾಶೌಚವನ್ನು ನಡೆಸಬೇಕೋ ಅಷ್ಟು ಬಾರಿ ಮತ್ತೆ ಮತ್ತೆ ಕೈಗೆ ಮಣ್ಣನ್ನು ಹಚ್ಚಿಕೊಂಡು ಮೃತ್ತಿಕಾ ಶೌಚವನ್ನು ನಡೆಸಬೇಕು.[4] ದುರ್ಗಂಧ ಇದೆ ಎಂದರೆ ಅಂತಹ ದುರ್ಗಂಧಕ್ಕೆ ಆಶ್ರಯವಾದ ಮಲವೂ ಸೂಕ್ಷ್ಮಪ್ರಮಾಣದಲ್ಲಿ ಇದ್ದೇ ಇದೆ ಎಂದರ್ಥ. ಆದುದರಿಂದ ದುರ್ಗಂಧ ಪೂರ್ಣವಾಗಿ ದೂರವಾಗುವವರೆಗೆ ಕೈಯನ್ನು ಮತ್ತೆ ಮತ್ತೆ ಮಣ್ಣಿನಿಂದ ತೊಳೆದುಕೊಳ್ಳಬೇಕು.

ಮನೆಯನ್ನು ಪ್ರತಿನಿತ್ಯ ಗೋಮಯದಿಂದ ಸಾರಿಸಿ ಶುದ್ಧಗೊಳಿಸಬೇಕು.[5] ಕಂಚಿನ ಪಾತ್ರೆಗಳನ್ನು ಬೂದಿಯಿಂದಲೂ, ತಾಮ್ರ ಪಾತ್ರೆಯನ್ನು ಹುಣಸೆ ಹುಳಿಯಿಂದಲೂ, ಚಿನ್ನ ಬೆಳ್ಳಿ ಮುಂತಾದವುಗಳ ಪಾತ್ರ ಬರೇ ನೀರಿನಿಂದಲೂ ಶುದ್ಧಗೊಳಿಸಬೇಕು. ಲೋಹಪಾತ್ರೆಗಳನ್ನು ಅವುಗಳಲ್ಲಿ ನಡೆಸುವ ಪಾಕವನ್ನು

---

1. ಶೌಚಂ ತು ದ್ವಿವಿಧಂ ಪ್ರೋಕ್ತಂ ಬಾಹ್ಯಮಭ್ಯಂತರಂ ತಥಾ ।
ಮೃಜ್ಜಲಾಭ್ಯಾಂ ಸ್ಮೃತಂ ಬಾಹ್ಯಂ ಭಾವಶುದ್ಧಿಸ್ತಥಾಂತರಮ್ । —ವ್ಯಾಸ. ಸ್ಮೃತಿ.

2. ವಿಣ್ಮೂತ್ರೋತ್ಸರ್ಗಶುದ್ಧ್ಯರ್ಥಂ ಮೃದ್ವಾರ್ಯಾದೇಯಮರ್ಥವತ್ ।
—ಮನು. 5-134

3. ತ್ರಿರಾಚಾಮೇದಪಃ ಪೂರ್ವಂ ದ್ವಿಃ ಪ್ರಮೃಜ್ಯಾತ್ತತೋ ಮುಖಮ್ ।
ಶಾರೀರಂ ಶೌಚಮಿಚ್ಛನ್ ಹಿ ಸ್ತ್ರೀ ಶೂದ್ರಸ್ತು ಸಕೃತ್ ಸಕೃತ್ ॥ —ಮ.ಸ್ಮೃ. 5-139

4. ಸ್ತ್ರೀಶೂದ್ರಾಣಾಮಶಕ್ತಾನಾಂ ಬಾಲಾನಾಂ ಶೌಚಕರ್ಮಣಿ ।
ಯಥಾ ಗಂಧಕ್ಷಯಃ ಸ್ಯಾತ್ತು ತಥಾ ಕುರ್ಯಾದಸಂಖ್ಯಕಮ್ ।
ಗಂಧಲೇಪಕ್ಷಯೋ ಯಾವತ್ತಾವಚ್ಛೌಚಂ ವಿಧೀಯತೇ ।
ಸರ್ವೇಷಾಮೇವ ವರ್ಣಾನಾಮಿತ್ಯಾಹ ಭಗವಾನ್ ಮನುಃ ॥
—ದೇವೀಭಾಗವತ 11-2-27, 28

5. ಗೋಮಯೇನ ಗೃಹೇ ನಿತ್ಯಂ ಪ್ರಕುರ್ಯಾದುಪಲೇಪನಮ್ ।
—ಪದ್ಮಪುರಾಣ, ಸೃಷ್ಟಿಖಂಡ 51-80

ತೊಳೆದು ಅಗ್ನಿಯ ಸಂಪರ್ಕಕ್ಕೊಳಪಡಿಸಿದಾಗ ಅವು ಶುದ್ಧವಾಗುವವು.[1]

ಗೃಹಿಣಿ ಹೀಗೆ ಮನೆ ಹಾಗೂ ಪಾತ್ರೆಗಳ ಶೌಚವನ್ನು ಸಾಧಿಸಿದ ಬಳಿಕ ಸ್ನಾನವನ್ನು ನಡೆಸಬೇಕು. ಸ್ನಾನವು ಶೌಚದ ಪ್ರಧಾನಾಂಗ. ಸ್ನಾನವು ತುಷ್ಟಿ ಸಂಪಾದಕ. ಬಾಹ್ಯ ಹಾಗೂ ಆಂತರ ದೋಷಗಳನ್ನು ಪರಿಹರಿಸುವುದು. ದುಃಸ್ವಪ್ನಗಳನ್ನು ನಾಶಮಾಡುವುದು. ಅಮಂಗಲವನ್ನು ದೂರಪಡಿಸುವುದು. ಮಾಂಗಲ್ಯ ಸಂಪಾದಕ. ಮಾನಸಿಕ ಶೌಚವನ್ನುಂಟು ಮಾಡುವುದು. ಜಾತರಾಗ್ನಿಯನ್ನು ಅಭಿವೃದ್ಧಿಪಡಿಸುವುದು. ಸೌಭಾಗ್ಯ ವರ್ಧಕ. ಅಲಕ್ಷ್ಮಿಯನ್ನು ದೂರೀಕರಿಸುವುದು. ಪಾಪ ಪರಿಹಾರಕ. ಕರ್ಮಗಳನ್ನಾಚರಿಸಲು ಬೇಕಾದ ಸಾಮರ್ಥ್ಯವನ್ನು ನೀಡುವುದು.[2] ಸ್ನಾನ ಮಾಡದೆ ನಡೆಸಿದ ಕ್ರಿಯೆಗಳೆಲ್ಲ ವ್ಯರ್ಥಗಳೆನಿಸುವವು.[3] ಬೆಂಕಿಯಿಂದ ಬಿಸಿಯಾದ ನೀರಿನಲ್ಲಿ ಸ್ನಾನ ಮಾಡಿದರೆ ಸ್ನಾನಫಲವು ದೊರಕದು.[4] ತಲೆಯನ್ನು ಬಿಟ್ಟು ಮುಂಡಕ್ಕಷ್ಟೆ ಸ್ನಾನವನ್ನು ನಡೆಸಿದರೆ, ಅದನ್ನು ಸ್ನಾನನಡೆಸಲ್ಪಟ್ಟಿತೆಂದು ಹೇಳಲಾಗದು.[5] ಈ ನಿಯಮ ಸ್ತ್ರೀಯರ ಪಾಲಿಗೆ ಇಲ್ಲ. ಅವರು ತಲೆಯನ್ನು ಬಿಟ್ಟು ಮುಂಡಕ್ಕಷ್ಟೇ ಮಿಂದರೂ ಪವಿತ್ರರೇ.[6] ಮನುಷ್ಯನ ದೇಹದಲ್ಲಿ ಇರುವ ಮೂರುವರೆ ಕೋಟಿ ರೋಮಗಳಲ್ಲಿ ಮೂರುವರೆ ಕೋಟಿ ತೀರ್ಥಗಳು ಹರಿಯುತ್ತಿರುತ್ತವೆ. ಸ್ನಾನ ಮಾಡುವಾಗ ಶಿರಸ್ಸಿನ ನೀರನ್ನು ದೇವತೆಗಳು ಸ್ವೀಕರಿಸಿದರೆ, ಮೀಸೆಯಲ್ಲಿಯ ನೀರನ್ನು ಪಿತೃಗಳೂ, ಕಣ್ಣುಗಳ ನೀರನ್ನು ಗಂಧರ್ವರೂ, ಕೆಳಭಾಗದ ನೀರನ್ನು ಸಕಲಜಂತು

---

1. ಭಸ್ಮನಾ ಕಾಂಸ್ಯಪಾತ್ರಂ ತು ತಾಮ್ರಮಮ್ಲೇನ ಶುದ್ಧ್ಯತಿ ।
......ಸ್ವರ್ಣರೌಪ್ಯಾದಿಪಾತ್ರಂತು ಜಲಮಾತ್ರೇಣ ಶುದ್ಧ್ಯತಿ ।
ಅಗ್ನಿನಾ ಲೋಹಪಾತ್ರಂ ತು ಪಾಕಪ್ರಕ್ಷಾಲನೇನ ತು ॥
—ಪದ್ಮಪುರಾಣ ಸೃಷ್ಟಿ-51-80, 81

2. ಸ್ನಾತಃ ಶೌಚಮವಾಪ್ನೋತಿ ಸ್ನಾನಂ ತುಷ್ಟಿಕರಂ ಪರಮ್ । ....ವಹ್ನಿವೃದ್ಧಿಕರಂ ಸ್ನಾನಂ ಸ್ನಾನಂ ಸೌಭಾಗ್ಯವರ್ಧನಮ್ । ಅಲಕ್ಷ್ಮ್ಯಾಃ ಶಮನಂ ಸ್ನಾನಂ ಸ್ನಾನಂ ದುರಿತನಾಶನಮ್ । ಸ್ನಾತಃ ಕ್ರಿಯಾಸಮರ್ಥಶ್ಚ ತಥಾ ಭವತಿ ಮಾನವಃ
—ಪದ್ಮಪುರಾಣ ಸೃಷ್ಟಿ 277–13, 14, 15 16

3. ಕ್ರಿಯಾವೈಫಲ್ಯಮಾಪ್ನೋತಿ ಸ್ನಾನಹೀನಃ ಸಮಾಚರನ್ । —ಪದ್ಮ ಸೃಷ್ಟಿ 277-10

4. ವಹ್ನಿತಪ್ತಾಂಬುನಾ ಸ್ನಾತೋ ನಾಪ್ನೋತಿ ಸ್ನಾನಜಂ ಫಲಮ್ ।

5. ಶಿರಸಾ ತು ವಿನಾಸ್ನಾತೋ ನ ಸ್ನಾತಃ ಪರಿಕೀರ್ತಿತಃ —ಪದ್ಮ. 177–17

6. ಅಶಿರಸ್ಕಂ ತು ಯತ್ಸ್ನಾನಂ....ಕುಲಸ್ತ್ರೀಣಾಂ ನ ದೋಷಭಾಕ್ ।
—ಬ್ರಹ್ಮವೈವರ್ತ ಅ. 27

ಗಳು ಸ್ವೀಕರಿಸುವವು. ಆದ್ದರಿಂದ ದೇವತೆಗಳು, ಪಿತೃಗಳು, ಗಂಧರ್ವರು ಎಲ್ಲ ಜಂತುಗಳು ಸಾಧಕ ನಡೆಸುವ ಸ್ನಾನದಿಂದ ತೃಪ್ತಿ ಹೊಂದುವರು. [1]

ಹೀಗೆ ಸ್ನಾನವು ಜಪ ಮುಂತಾದ ಅನುಷ್ಠಾನಗಳಿಗೆ ಬೇಕಾದ ಪಾವಿತ್ರ್ಯವನ್ನು ಉಂಟುಮಾಡುವ ಸಾಧನವಾಗಿ ಅಷ್ಟೇ ಅಲ್ಲದೆ, ಸ್ವತಃ ಪುಣ್ಯಪ್ರದ ಸಾಧನೆಯಾಗಿಯೂ ಅನುಷ್ಠೇಯ ಎನಿಸಿದೆ.

ಸ್ನಾನಮಾಡಿದ ಮೇಲೆ ಮಡಿ ಬಟ್ಟೆ ಉಟ್ಟು ಅನುಷ್ಠಾನವನ್ನು ನಡೆಸಬೇಕು. ತೊಟ್ಟುಕೊಳ್ಳುವ ಉಡುಪು ಮಲಿನವಾಗಿದ್ದಿರಬಾರದು; ಅರ್ಧಸುಟ್ಟದ್ದಾಗಿರಬಾರದು; ಹರಿದದ್ದಾಗಿರಬಾರದು; ತುಂಡರಿಸಿದ್ದಾಗಿರಬಾರದು; ಹಾಗೂ ದೇಹದ ಮೇಲೆ ಒಂದೇ ಬಟ್ಟೆ ಇರುವಂತಾಗಬಾರದು. ಹೀಗೆಲ್ಲ ಆದಾಗ ಆ ವ್ಯಕ್ತಿ 'ನಗ್ನ' ಎಂದೇ ಅರ್ಥ – ಎಂದು ನಿಷೇಧಿಸಿದೆ ಶಾಸ್ತ್ರ. [2]

ಯಾರ ಮನಸ್ಸು ಶುದ್ಧವಾಗಿದೆಯೋ ಅವನ ಪಾಲಿಗೆ ಸತ್ಯರೂಪವಾದ ಶೌಚ, ಇಂದ್ರಿಯನಿಗ್ರಹರೂಪವಾದ ಶೌಚ, ದೇಹಕ್ಕೆ ಸಂಬಂಧಿಸುವ ಶೌಚ—ಇವೆಲ್ಲ ಸಾರ್ಥಕವೆನಿಸುವವು. ಈ ಎಲ್ಲ ಶೌಚಗಳು ಮನಶುದ್ಧಿರಹಿತನಾದವನ ಪಾಲಿಗೆ ವ್ಯರ್ಥವಾದವು. ಆದುದರಿಂದ ಸರ್ವ ಶೌಚಗಳಲ್ಲೂ ಮಾನಸಿಕ ಶೌಚವೇ ಶ್ರೇಷ್ಠವಾದುದು. [3] 'ಪವಿತ್ರಾಣಾಂ ಪವಿತ್ರಂ' ಎನಿಸಿರುವ ಪುಂಡರೀಕಾಕ್ಷನನ್ನು ನೆನೆಯುತ್ತ ಇದ್ದಲ್ಲಿ ಮಾನಸಿಕ ಶೌಚವನ್ನು ಪಡೆದುಕೊಳ್ಳಬಹುದು. [4]

---

1. ತಿಸ್ರಃ ಕೋಟ್ಯೋಽರ್ಧಕೋಟೀ ಚ ಯಾನಿ ಲೋಮಾನಿ ಮಾನುಷೇ ।
ಸ್ರವಂತಿ ಸರ್ವತೀರ್ಥಾನಿ ತಸ್ಮಾನ್ನ ಪರಿಪೀಡಯೇತ್ ।
ದೇವಾಃ ಪಿಬಂತಿ ಶಿರಸಿ ಶ್ಮಶ್ರುತಃ ಪಿತರಸ್ತಥಾ ।
ಚಕ್ಷುಷೋರಪಿ ಗಂಧರ್ವಾ ಅಧಸ್ತಾತ್ ಸರ್ವಜಂತವಃ ॥
ದೇವಾಃ ಪಿತೃಗಣಾಃ ಸರ್ವೇ ಗಂಧರ್ವಾ ಜಂತವಸ್ತಥಾ ।
ಸ್ನಾನಮಾತ್ರೇಣ ತುಷ್ಯಂತಿ ಸ್ನಾನಾತ್ ಪಾಪಂ ನ ವಿದ್ಯತೇ ॥
—ಪಾದ್ಮ. ಸೃಷ್ಟಿ. 51-61, 62, 63

2. ಮಲವಸ್ತ್ರೋ ದಗ್ಧವಸ್ತ್ರಶ್ಛಿನ್ನವಸ್ತ್ರೋಽರ್ಧವಸ್ತ್ರಕಃ ।
ಏಕವಾಸಾ ಅವಾಸಾಶ್ಚ ನಗ್ನ ಏವ ಭವೇನ್ನರಃ ।

3. ಸತ್ಯಂ ಶೌಚಂ ದಮಃ ಶೌಚಂ ಶೌಚಂ ಶಾರೀರಮೇವ ಚ ।
ಸರ್ವಾಣಿ ತಸ್ಯ ಶೌಚಾನಿ ಯಸ್ಯ ಶುದ್ಧಂ ಮನಃ ಸದಾ ॥
ಮನಃ ಶುದ್ಧಿವಿಹೀನಸ್ಯ ಸರ್ವೇ ಶೌಚಾ ನಿರರ್ಥಕಾಃ ॥
......ತಸ್ಮಾದ್ಧಿ ಸರ್ವಶೌಚಾನಾಂ ಮನಃಶೌಚಂ ಪರಂಸ್ಮೃತಮ್ ॥

4. ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂಗತೋಽಪಿ ವಾ ।
ಯಃ ಸ್ಮರೇತ್ ಪುಂಡರೀಕಾಕ್ಷಂ ಸಬಾಹ್ಯಾಂಭ್ಯತರಃ ಶುಚಿಃ ॥

○ ....ನ ವೈ ಕ್ವಚಿನ್ಮೇ ಮನಸೋ ಮೃಷಾ ಗತಿಃ....ಯನ್ಮೇ ಹೃದೌತ್ಕಂಠ್ಯವತಾಧೃತೋ ಹರಿಃ । —ಭಾಗ. 2-6-33

**ಪರಿಶಿಷ್ಟ : ೧೭**

# ಗರ್ಭಿಣಿ ಸ್ತ್ರೀಯರು ತಂದುಕೊಳ್ಳಬೇಕಾದ ಅನುಸಂಧಾನ ಮತ್ತು ಸಲ್ಲಿಸಬೇಕಾದ ಪ್ರಾರ್ಥನೆ

ಗರ್ಭಿಣಿ ಸ್ತ್ರೀಯರ ಸ್ಥಿತಿ ತುಂಬ ನಾಜೂಕಿನದು. ಅವರು ಆ ಕಾಲದಲ್ಲಿ ಏನಾಗುತ್ತೋ? ಹೇಗಾಗುತ್ತೋ? —ಎಂಬ ಚಿಂತೆಗೆ, ಕಳವಳಕ್ಕೆ ಒಳಗಾಗಿರುವ ಸಾಧ್ಯತೆ ಇದೆ. ಇದರಿಂದ ದೂರವಾಗಿ, ನೆಮ್ಮದಿಯಿಂದ ಇರಬೇಕಾದರೆ ಆಗ ಅವರು ವಿಶೇಷವಾಗಿ ದೇವರ ಸ್ಮರಣೆಯನ್ನು ನಡೆಸುತ್ತಿರಬೇಕು. ಗರ್ಭಿಣಿಯಾದ ತನ್ನ ವಿಷಯದಲ್ಲಿ ದೇವರು ಹೇಗೆ ಅನುಗ್ರಹಿಸುತ್ತಿದ್ದಾನೆ—ಎಂಬುದನ್ನು ವಿಶ್ಲೇಷಿಸಿಕೊಳ್ಳುತ್ತಿರಬೇಕು. ಗರ್ಭಾಧಾನ ಸಂಸ್ಕಾರದ ಅವಧಿಯಲ್ಲಿ ಪಠಿಸುವ ಮಂತ್ರವೊಂದು[1] ಭಗವಂತನು ತನ್ನ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ–ರೂಪಗಳಿಂದ ಗರ್ಭಿಣಿಯರ ಗರ್ಭಕ್ಕೆ ಹೇಗೆ ಧಾರಕನಾಗಿರುವನೆಂದು ವಿವರಿಸುತ್ತಿದೆ.

ವಾಸುದೇವನಿಂದ ಯೋನಿಶುದ್ಧಿಯು, ಸಂಕರ್ಷಣನಿಂದ ಗರ್ಭದಲ್ಲಿರುವ ಜೀವನ ಶರೀರೋತ್ಪತ್ತಿ, ಪ್ರದ್ಯುಮ್ನನಿಂದ ಪ್ರಸವ, ಅನಿರುದ್ಧನಿಂದ ಗರ್ಭದ ಧಾರಣ ಪೋಷಣಗಳು ಆಗುತ್ತವೆ.[2]

ಗರ್ಭ ಅನಿರುದ್ಧರೂಪಿ ಪರಮಾತ್ಮನ ವಿಶೇಷ ರಕ್ಷಣೆಗೆ ಒಳಗಾಗಿರುವುದು. ಆದುದರಿಂದಲೇ ಮೊದಲು ತಂದೆಯ ಶರೀರದಲ್ಲಿ ಇದ್ದ ಜೀವಾತ್ಮನು ಮತ್ತೆ ತಾಯಿಯ ಶರೀರಕ್ಕೆ ಒಯ್ಯಲ್ಪಟ್ಟರೂ ಅಲ್ಲಿ ನಶಿಸಿ ಹೋಗುವುದಿಲ್ಲ. ಬದಲಾಗಿ, ತಾಯಿಯ ಶರೀರದ ಪರಿಸರಕ್ಕೇ ಹೊಂದಿಕೊಂಡು ಬೆಳೆಯುವನು. ಹೀಗೆ ಗರ್ಭದ ಮೇಲೆ ಅನಿರುದ್ಧರೂಪಿ ಪರಮಾತ್ಮನ ರಕ್ಷಣೆಯನ್ನು ಛಾಂದೋಗ್ಯೋಪನಿಷತ್ತು ಸಮರ್ಥಿಸಿರುವುದು.[3]

---

1. ವಿಷ್ಣುರ್ಯೋನಿಂ ಕಲ್ಪಯತು ತ್ವಷ್ಟಾ ರೂಪಾಣಿ ಪಿಂಶತು ।
ಆಸಿಂಚತು ಪ್ರಜಾಪತಿಃ ಧಾತಾ ಗರ್ಭಂ ದಧಾತು ತೇ ॥ —ಬೃ. ಉ. 8-4-21
2. ಯೋನಿಕ್ಲೃಪ್ತಿರ್ವಾಸುದೇವಾತ್ ರೂಪಂ ಸಂಕರ್ಷಣಾದ್ ಭವೇತ್ ।
ಆಸೇಕಕರ್ಮ ಪ್ರದ್ಯುಮ್ನಾದ್ ಅನಿರುದ್ಧಾಚ್ಚ ಧಾರಣಮ್ । —ಛಾಂ.ಉ. 2-1-9
3. ಶದಸ್ಯ ಗರ್ಭಾ ಅನ್ವಾಯತ್ತಾಃ । ತಸ್ಮಾತ್ ತೇ ಪ್ರತಿಹತಾಃ ನಾವಪದ್ಯಂತೇ ।
—ಛಾಂ. ಉ. 2-1-9

ಈ ರೀತಿಯಾಗಿ ಭಗವಂತನು ತನ್ನ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಹಾಗೂ ಅನಿರುದ್ಧ ರೂಪಗಳಿಂದ ತನ್ನ ರಕ್ಷಣೆಯಲ್ಲಿ ಹೇಗೆ ತೊಡಗಿರುವನೆಂಬು ದನ್ನು ವಿವೇಚಿಸಿಕೊಳ್ಳುತ್ತಿರಬೇಕು.

ಗರ್ಭಿಣಿ ಸ್ತ್ರೀಗೆ ತನ್ನ ಗರ್ಭದಲ್ಲಿ ಬೆಳೆಯುತ್ತಿರುವ ಪುತ್ರನ ಮೇಲೆ ವಿಶೇಷ ವಾದ ಆದರವಿರುತ್ತದೆ. ಪುತ್ರನಲ್ಲಿ ಪರಮಾತ್ಮನ ರೂಪವಿರುವುದರಿಂದ ಪುತ್ರನ ಆದರದಿಂದ ಪರಮಾತ್ಮನಲ್ಲಿ ಆದರವನ್ನು ತೋರಿಸಿದಂತಾಗುವುದೆಂದು ವಿವೇಚಿಸಿ ಕೊಳ್ಳಬೇಕು. ಹಾಗೆಯೇ ಗರ್ಭಿಣಿ ಸ್ತ್ರೀ ತನ್ನ ಪತಿ ಮುಂತಾದವರ ವಿಶೇಷವಾದ ಆದರ ಕ್ಕೆ ಒಳಗಾಗುತ್ತಾಳೆ. ಆಗ ಆ ಸ್ತ್ರೀ ತನ್ನಲ್ಲಿ ಇರುವ ಪರಮಾತ್ಮನನ್ನು ಅವರು ಆದ ರಿಸುತ್ತಿದ್ದಾರೆ. ಪರಮಾತ್ಮನು ತನ್ನಲ್ಲಿ ಇರುವನೆಂಬುದಕ್ಕಾಗಿಯೇ ತಾನೂ ಆದರಣೀಯಳೆನಿಸಿರುವೆನೆಂದು ಅನುಸಂಧಾನ ತಂದುಕೊಳ್ಳಬೇಕು.[1]

ಹಿರಣ್ಯಕಶಿಪುವಿನ ಪತ್ನಿ ಕಯಾಧು ಗರ್ಭಿಣಿಯಾಗಿದ್ದಾಗ ನಾರದರ ಉಪ ದೇಶವನ್ನು ಕೇಳಿದ್ದಳು. ಆ ಉಪದೇಶ ಗರ್ಭದಲ್ಲಿದ್ದ ಪ್ರಹ್ಲಾದನ ಮೇಲೆ ಸಾಕಷ್ಟು ಪ್ರಭಾವ ಬೀರಿದೆ—ಎಂಬುದಾಗಿ ಪ್ರಹ್ಲಾದನೇ ತನ್ನ ಸಹಪಾಠಿ ಬಾಲಕ ರಿಗೆ ತಿಳಿಸುವನು.[2] ಇದರಿಂದ ಗರ್ಭಿಣಿ ಸ್ತ್ರೀಯರು ಒಳ್ಳೊಳ್ಳೆ ವಿಚಾರಗಳನ್ನು ಕೇಳಿದರೆಂದರೆ ಅದರ ಪ್ರಭಾವ ಅವರ ಗರ್ಭದ ಮೇಲೆಯೂ ಬೀರಬಲ್ಲದೆಂದು ಸಿದ್ಧವಾಗುವುದು.

ಉತ್ತರಾದೇವಿಯ ಗರ್ಭದ ಮೇಲೆ ಆಕ್ರಮಣ ಮಾಡಲು ಅಶ್ವತ್ಥಾಮಾ ಚಾರ್ಯರಿಂದ ಪ್ರಯುಕ್ತವಾಗಿದ್ದ 'ಬ್ರಹ್ಮಶಿರೋಸ್ತ್ರ' ಹವಣಿಸುತ್ತಿತ್ತು. ಉತ್ತರಾದೇವಿಯ ಪ್ರಾರ್ಥನೆಯ ಮೇರೆಗೆ ಶ್ರೀಕೃಷ್ಣ ಪರಮಾತ್ಮನು ಅಂಗುಷ್ಠ ಪ್ರಮಾಣದ ರೂಪವನ್ನು ಧರಿಸಿಕೊಂಡು ಉತ್ತರೆಯ ಗರ್ಭದ ಸುತ್ತಲೂ ಸಂಚರಿಸುತ್ತ ಅದನ್ನು ಸಂರಕ್ಷಿಸುವನು.

---

1. '....ಸಾ ಪುತ್ರಂ ಭಾವಯುತ್ಯಥ । ಪುತ್ರಸ್ಯ ಭಾವನಾ ಸ್ಯೈವ ತದ್ಗತ್ವಾದ್ ಹರಿಭಾವನಾ । ಸಂಭಾವಿತವ್ಯಾ ಸಾ ಚೈವ ಭರ್ತ್ರಾ ಪುತ್ರಶ್ಚ ಸಾದರಮ್ । ಸಂಭಾವನಂ ಕುಮಾರಸ್ಯ ಜಾನತಃ ಕೇಶವೇ ಭವೇತ್ । ತಸ್ಯೈತ್ಕರ್ಪಣಮಾತ್ರೇಣ ಪೂಜಿತೋ ಹಿ ಭವೇದ್ಧರಿಃ ।
—ಐತರೇಯಸಂಹಿತಾ (ಐ.ಉ.ಭಾ. 2-4-1-3, 4)

2. ಋಷಿಃ ಕಾರುಣಿಕಸ್ತಸ್ಯಾಃ ಪ್ರಾದಾದುಭಯಮೀಶ್ವರಃ ।
ಧರ್ಮಸ್ಯ ತತ್ತ್ವಂ ಜ್ಞಾನಂ ಚ ಮಾಮಪ್ಯುದ್ದಿಶ್ಯ ನಿರ್ಮಲಮ್ ॥
—ಭಾಗ. 7-7-15

ಹೀಗೆ ಉತ್ತರಾದೇವಿಯ ಗರ್ಭವನ್ನು ಸಂರಕ್ಷಿಸಿದ ಭಗವಂತನೇ ತನ್ನ ಗರ್ಭವನ್ನೂ ರಕ್ಷಿಸಲಿ—ಎಂದು ಆಕೆ ಸಲ್ಲಿಸಿದ ಪ್ರಾರ್ಥನೆಯನ್ನೇ ಉಳಿದ ಗರ್ಭಿಣಿ ಸ್ತ್ರೀಯರೂ ಸಲ್ಲಿಸಬೇಕು. ಆ ಪ್ರಾರ್ಥನೆ ಹೀಗಿದೆ—

**'ಪಾಹಿ ಪಾಹಿ ಮಹಾಯೋಗಿನ್ ದೇವದೇವ ಜಗತ್ಪತೇ ।**
**ನಾನ್ಯಂ ತ್ವದಭಯಂ ಪಶ್ಯೇ ಯತ್ರ ಮೃತ್ಯುಃ ಪರಸ್ಪರಮ್ ।**

**—ಭಾಗ. 1-8-9**

ಹೇ ಜಗದೊಡೆಯ! ದೇವತೆಗಳಿಗೂ ಸ್ತುತ್ಯನಾದವನೇ! ದೊಡ್ಡ ದೊಡ್ಡ ಉಪಾಯಗಳನ್ನೆಲ್ಲ ಹೊಂದಿರುವವನೇ ನನ್ನನ್ನು ಕಾಪಾಡಬೇಕು. ಅಂಗಲಾಚಿ ಬೇಡಿಕೊಳ್ಳುವೆನು. ಈ ಸಂಸಾರದಲ್ಲಿ ಅನ್ಯೋನ್ಯವಾಗಿ ಹಿಂಸಕರೇ ಆಗಿರುವುದರಿಂದ, ಸ್ವತಂತ್ರನಾದ ನಿನ್ನ ಹೊರತಾಗಿ ಇನ್ನಾರೂ ಸರ್ವಾತ್ಮನಾ ಅಭಯ ಪ್ರದಾನ ಮಾಡುವವರನ್ನು ನಾ ಕಾಣೆ.'

ಅನುಸಂಧಾನ ಪೂರ್ವಕವಾಗಿ ದೇವರಲ್ಲಿ ಹೀಗೆ ಪ್ರಾರ್ಥಿಸಿಕೊಂಡಾಗ ಭಗವಂತನು ಅವಶ್ಯವಾಗಿ ರಕ್ಷಣೆಯನ್ನು ಅನುಗ್ರಹಿಸುವನು. ಹೀಗೆ ಭಗವಂತನ ರಕ್ಷಣೆಯ ಬಗ್ಗೆ ವಿಶೇಷವಾದ ವಿಶ್ವಾಸವನ್ನು ತಾಳಿ ಅವನ ಗುಣಗಾನ ಮಾಡುತ್ತ, ಅವನ ಮಹಿಮೆಗಳನ್ನು ಲೀಲೆಗಳನ್ನು ಕೇಳುತ್ತ ಹೇಳುತ್ತ ನಿಶ್ಚಿಂತರಾಗಿ ಇರಬೇಕು.

**ಪರಿಶಿಷ್ಟ: ೧೮**

# ಹೆಣ್ಮಕ್ಕಳ ತಾಯಿಯಾಗಿ ವಿಶೇಷ ಕರ್ತವ್ಯ

ಸ್ತ್ರೀ ತಾಯಿಯಾಗಿ ಮಕ್ಕಳ ಲಾಲನೆ ಪೋಷಣೆ, ಯೋಗ್ಯ ಸಂಸ್ಕಾರಗಳ ಪ್ರದಾನ ಮುಂತಾದ ಕರ್ತವ್ಯಗಳ ಜೊತೆಗೆ ಹೆಣ್ಮಕ್ಕಳ ತಾಯಿಯಾಗಿ ನಡೆಸಬೇಕಾದ ಇನ್ನೂ ಕೆಲವು ಕರ್ತವ್ಯ ವಿಶೇಷಗಳಿವೆ. ತನ್ನ ಮಗಳೂ ಮುಂದೆ ಅರ್ಹ ಗೃಹಿಣಿಯಾಗಿ, ಯೋಗ್ಯ ಪತಿವ್ರತೆಯಾಗಿ ಬಾಳಲು ಬೇಕಾದ ಬೆಳಕನ್ನು ನೀಡುವ ಹೊಣೆಗಾರಿಗೆ ತಾಯಿಯಾದವಳಿಗೇ ವಿಶೇಷವಾಗಿ ಸಂಬಂಧಪಡುವಂತಹದ್ದು. ಈ ನಿಟ್ಟಿನಲ್ಲಿ ಸ್ತ್ರೀ ತನ್ನ ಮಗಳಿಗೆ ಹೆಜ್ಜೆ ಹೆಜ್ಜೆಗೆ ನೀಡುತ್ತ ಬರಬೇಕಾದ ಶಿಕ್ಷಣ, ಸಂಸ್ಕಾರ, ಎಚ್ಚರ, ಉಪದೇಶ—ಇವುಗಳಿಗೆ ಸಂಬಂಧಪಡುವ ಅಂಶಗಳನ್ನು ಹೀಗೆ ಉಲ್ಲೇಖಿಸಬಹುದಾಗಿದೆ.

೧. ಪತಿಯನ್ನು ದೇವರ ಪ್ರತೀಕವೆಂದು ಭಾವಿಸಿ, ಅವನಿಗೆ ಗೌರವಾದರಗಳನ್ನು ಹೇಗೆ ಸಲ್ಲಿಸಬೇಕು? ಅವನನ್ನು ತೃಪ್ತಿ ಪಡಿಸುವುದರಲ್ಲಿ ಹೇಗೆ ಮಗ್ನಳಾಗಿದ್ದಿರಬೇಕು?

೨. ಪತಿಯ ಮನೆಯಲ್ಲಿ ಅತ್ತೆ, ಮಾವ ಮುಂತಾದ ಗುರುಹಿರಿಯರ ಜೊತೆಗೆ, ನಾದಿನಿಯರು, ಮೈದುನರು—ಮುಂತಾದ ಉಳಿದ ಸದಸ್ಯರ ಜೊತೆಗೆ ಹೇಗೆ ವ್ಯವಹರಿಸಬೇಕು ? ಮನೆಗೆ ಬರುವ ಅತಿಥಿ ಅಭ್ಯಾಗತರನ್ನು ಹೇಗೆ ಗೌರವಿಸಬೇಕು ? ಆದರಿಸಬೇಕು ?

೩. ಮಕ್ಕಳ ಲಾಲನೆ, ಪೋಷಣೆ, ಶಿಕ್ಷಣಗಳ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕು ?

೪. 'ಗೃಹಿಣೀ ಗೃಹಮುಚ್ಯತೇ' —ಎಂದೇ ಪ್ರಶಂಸಿಸಲ್ಪಡುವ ಗೃಹಿಣಿ ತನ್ನ ಮನೆಯನ್ನು 'ದೇಗುಲ' —ಎಂದೇ ಭಾವಿಸಿ, ಅಲ್ಲಿ ಪವಿತ್ರವಾದ, ಶುದ್ಧವಾದ ಶಾಂತವಾದ ವಾತಾವರಣ ಹಬ್ಬಿರುವಂತೆ ಮಾಡುವಲ್ಲಿ ವಹಿಸಬೇಕಾದ ಪಾತ್ರ ಎಂತಹದು ?

೫. ಮನೆಯ ಸುತ್ತ ವಾತಾವರಣವನ್ನೂ ಶುಚಿಯಾಗಿ, ಪವಿತ್ರವಾಗಿ ಇಟ್ಟುಕೊಳ್ಳುವುದರಲ್ಲಿ, ಗಿಡಮರಗಳನ್ನು ಬೆಳೆಸಿ, ಪೋಷಿಸುವುದರಲ್ಲಿ ವಹಿಸಬೇಕಾದ ಪಾತ್ರ ಯಾವುದು ?

೬. ರುಚಿಯಾಗಿ, ಶುಚಿಯಾಗಿ ಅಡುಗೆ ಮಾಡುವ ವಿಧಾನವನ್ನು ತಿಳಿಸಿಕೊಡಬೇಕು. ಹಬ್ಬ ಹರಿದಿನಗಳಲ್ಲಿ ಮಾಡಬೇಕಾದ ಭಕ್ಷ್ಯವಿಶೇಷಗಳ ತಯಾರಿಯ ಮಾಹಿತಿಯನ್ನೂ ನೀಡಬೇಕು.

೭. ಸ್ತ್ರೀಯಾದವಳು ಬೇರೆ ಬೇರೆ ಸಂದರ್ಭದಲ್ಲಿ ಮಡಿಮಾಡಿಕೊಳ್ಳಲು ಅಳವಡಿಸಿಕೊಳ್ಳಬೇಕಾದ ವಿಧಾನವನ್ನು ಪರಿಚಯಿಸಿಕೊಡಬೇಕು.

೮. ಸ್ತ್ರೀಯಾದವಳು ತನ್ನ ದೈನಂದಿನ ಕರ್ತವ್ಯಗಳನ್ನು ನಿರ್ವಹಿಸುವಾಗ ಹಾಡುತ್ತಿರಬೇಕಾದ ಬೇರೆ ಬೇರೆ ದಾಸರ ಹಾಡುಗಳನ್ನು ಇಂಪಾಗಿ ಹಾಡಲು ಕಲಿಸಬೇಕು.

೯. ಪತಿ ಹಾಗೂ ಮಕ್ಕಳು ಧಾರ್ಮಿಕ ಹಾಗೂ ಆಧ್ಯಾತ್ಮಿಕ ಪ್ರವೃತ್ತಿಯನ್ನು ಮತ್ತಷ್ಟು ಬೆಳೆಸಿಕೊಳ್ಳುವಲ್ಲಿ ಪತ್ನಿಯಾಗಿ, ತಾಯಿಯಾಗಿ ನೀಡಬೇಕಾದ ಸಹಕಾರ, ಸ್ಫೂರ್ತಿ, ಉಪದೇಶಾದಿಗಳ ಮಾಹಿತಿಯನ್ನು ನೀಡಬೇಕು.

೧೦. ಪಾತಿವ್ರತ್ಯ ಧರ್ಮಕ್ಕೆ ಚ್ಯುತಿಬಾರದಂತೆ ನಡೆದುಕೊಳ್ಳಲು ವೇಶಭೂಷಣಗಳ, ಆಚಾರವಿಚಾರಗಳ ವಿಷಯದಲ್ಲಿ ಎಚ್ಚರ ನೀಡುತ್ತಿರಬೇಕು.

ಇವಿಷ್ಟು ಅಂಶಗಳು ಒಳಪಡುವಂತೆ ಸ್ತ್ರೀಧರ್ಮದ ಬಗ್ಗೆ, ಪಾತಿವ್ರತ್ಯ ಧರ್ಮದ ಕುರಿತು ಗೌರವಭಾವನೆ ಉಂಟಾಗುವಂತೆ, ಮನವರಿಕೆಯಾಗುವಂತೆ ತಾಯಿಯಾದವಳು ತನ್ನ ಹೆಣ್ಮಕ್ಕಳಿಗೆ ಹೆಜ್ಜೆಹೆಜ್ಜೆಗೆ ಉಪದೇಶಿಸುತ್ತಿರಬೇಕು.

ಪರಿಶಿಷ್ಟ : ೧೯

# ಪಾತಿವ್ರತ್ಯಕ್ಕೆ ಶ್ರದ್ಧೆಯು ಪಂಚಾಂಗ

ಕರ್ಮದ ರಹಸ್ಯವನ್ನು ಅರಿತು ಶ್ರದ್ಧಾಪೂರ್ವಕವಾಗಿ ನಡೆಸಿದಾಗಷ್ಟೇ ಅದು ಅತ್ಯಧಿಕ ಫಲಪ್ರದವಾಗುವುದು.[1] ಕರ್ಮವೊಂದು ಐಹಿಕವಾಗಿಯಾದರೂ ಬಹು ಫಲಪ್ರದವಾಗಬೇಕೆಂದರೆ ಶ್ರದ್ಧಾಯುಕ್ತವಾದ ಮನಸ್ಸಿನಿಂದಲೇ ಅದನ್ನು ಆಚರಿಸಬೇಕು.[2] ಆಸ್ತಿಕ್ಯ ನಿಷ್ಠೆಯೇ ಶ್ರದ್ಧೆ ಎನಿಸುವುದು.[3] ಆದುದರಿಂದ ಕೆಲವೆಡೆ ಆಸ್ತಿಕ್ಯಭಾವವನ್ನು ಅಳವಡಿಸಿಕೊಂಡು ಶ್ರದ್ಧಾಸಂಪನ್ನನಾಗಿ ಪುಣ್ಯಕರ್ಮಗಳನ್ನು ನಡೆಸಬೇಕೆಂದೂ, ಪಾಪಕರ್ಮಗಳನ್ನು ತ್ಯಜಿಸಬೇಕೆಂದೂ ವಿಧಿಸಲಾಗಿದೆ.[4] ಆಸ್ತಿಕ್ಯ ಭಾವನೆಗೆ ಒಳಗಾದವನು ದೇವರಿಗೆ, ಧರ್ಮಕ್ಕೆ ಭಯಪಟ್ಟು ಆದಷ್ಟು ಪಾಪಕರ್ಮಗಳಿಂದ ದೂರ ಇರಲು ಪ್ರಯತ್ನಿಸುವನು. ಆದರೆ ಅದೇ ಆಸ್ತಿಕ್ಯ ಭಾವನೆಯಿಂದ ಶೂನ್ಯನಾದ ವ್ಯಕ್ತಿ ದೇವರ, ಧರ್ಮದ ಭಯದಿಂದ ಮುಕ್ತನಾಗಿರುವುದರಿಂದ ಯಾವುದೇ ಪಾತಕದ ಆಚರಣೆಯಲ್ಲೂ ಹಿಂಜರಿಯುವುದಿಲ್ಲ. ಹೀಗೆ ನಾಸ್ತಿಕ್ಯವು ಸಕಲ ಪಾಪಾಚರಣೆಗೂ ಮುಕ್ತದ್ವಾರದಂತೆ ಇರುವುದರಿಂದ— ಉಳಿದೆಲ್ಲ ಪಾಪಗಳಿಗಿಂತಲೂ ಅತಿಹೇಯವಾದುದು ಎಂದು ಎಚ್ಚರಿಸಲಾಗಿದೆ.[5] ಶ್ರದ್ಧೆ ಅವರವರ ಸ್ವರೂಪಕ್ಕನುಗುಣವಾಗಿ ಇರುವಂತಹದ್ದಾದರೂ,[6] ಅದರ ಅಭಿವ್ಯಕ್ತಿಗಾಗಿ ಯತ್ನಿಸಬೇಕು. ಶ್ರದ್ಧೆಗೆ ನಾಸ್ತಿಕ್ಯಭಾವನೆ

---

1. ಯದೇವ ವಿದ್ಯಯಾ ಶ್ರದ್ಧಯೋಪನಿಷದಾ
ತದೇವ ವೀರ್ಯವತ್ತರಂ ಭವತಿ —ಛಾಂ.ಉ. 1-1-5
2. ಶ್ರದ್ಧಾನ್ವಿತೇನ ಮನಸಾ ಯದ್ಯತ್ ಕಿಂಚಿತ್ ಸಮಾಚರೇತ್ ।
ತತ್ತದ್ಬಹುಫಲಂ ತಸ್ಯ ಜಾಯತೇ ಲೋಕಯೋರ್ದ್ವಯೋಃ ॥
3. ಶ್ರದ್ಧೇತ್ಯಾಸ್ತಿಕ್ಯನಿಷ್ಠೋಕ್ತಾ.... —ಗೀ.ತಾ. 17-2
4. ಆಸ್ತಿಕ್ಯಭಾವಮಾಸ್ಥಾಯ ನರಃ ಶ್ರದ್ಧಾಸಮನ್ವಿತಃ ।
ನಿತ್ಯಂ ಪುಣ್ಯಾನಿ ಕುರ್ವೀತ ಪಾಪಾನಿ ಪರಿವರ್ಜಯೇತ್ । —ವಿ.ಧ. 3-276-5
5. ಸರ್ವೇಷಾಮೇವ ಪಾಪಾನಾಂ ನಾಸ್ತಿಕ್ಯಂ ಪಾತಕಂ ಪರಮ್ ।
ನಾಸ್ತಿಕ್ಯಾದ್ಧಿ ಪರಂ ನಾಸ್ತಿ ಕಿಂಚಿತ್ ಪಾಪಂ ದ್ವಿಜೋತ್ತಮಾಃ । —ವಿ.ಧ. 3-247-1
6. ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ । —ಗೀ. 17-3
- ಸತ್ತ್ವಾನುರೂಪಾ ಜೀವಾನುರೂಪಾ —ಗೀ. ತಾ.
- ಶ್ರದ್ಧಾ ಸ್ವರೂಪಂ ಜೀವಸ್ಯ.... —ಗೀ. ತಾ.

ಆವರಕವಾಗದಂತೆ ಎಚ್ಚರವಹಿಸಬೇಕು. ನಾಸ್ತಿಕ್ಯಭಾವನೆಗೆ ನಿಮಿತ್ತವೆನಿಸಿರುವವು ಗಳಲ್ಲಿ ಒಂದು ನಾಸ್ತಿಕ್ಯವನ್ನು ಪ್ರತಿಪಾದಿಸುವ ಅಸಚ್ಛಾಸ್ತ್ರದ, ಕೆಟ್ಟ ಸಾಹಿತ್ಯದ ಅಧ್ಯಯನ. ಆದುದರಿಂದ ಸಾಕಷ್ಟು ಯತ್ನಪಟ್ಟು ಇಂತಹ ಕೆಟ್ಟ ಸಾಹಿತ್ಯದ ಅಧ್ಯಯನವನ್ನು ದೂರೀಕರಿಸಬೇಕೆಂದು ಎಚ್ಚರಿಸಲಾಗಿದೆ.[1]

ಆಸ್ತಿಕತೆ 'ದೇವರು ಇದ್ದಾನೆ' —ಎಂಬ ನಂಬಿಕೆಗಷ್ಟೇ ಸೀಮಿತವಾದರೆ ಸಾಲದು. ದೇವರನ್ನು ದೇವರನ್ನಾಗಿ ಅಂದರೆ ಸರ್ವೋತ್ತಮನಾದ, ಸರ್ವ ಸಮರ್ಥನಾದ, ಸರ್ವಗುಣ ಸಂಪನ್ನನಾದ, ಸ್ವತಂತ್ರನಾದ ವ್ಯಕ್ತಿಯನ್ನಾಗಿ ಒಪ್ಪಿ ಕೊಳ್ಳಲು ಯಾವ ಯಾವ ವಿಚಾರಗಳು ಆವಶ್ಯಕಗಳೋ ಅವೆಲ್ಲವನ್ನೂ ನಂಬ ಬೇಕು. ದೇವರನ್ನು ಇಂತಹ ವ್ಯಕ್ತಿಯನ್ನಾಗಿ ನಂಬಿ, ಅವನ ವ್ಯಕ್ತಿತ್ವಕ್ಕೆ ಗೌರ ವಾದರಗಳನ್ನು ಸಲ್ಲಿಸುವುದರ ಜೊತೆಗೆ, ಅವನ ಆದೇಶದಂತಿರುವ[2] ಶ್ರುತಿಸ್ಮೃತಿ ಗಳಿಗನುಗುಣವಾಗಿ ನಡೆದುಕೊಳ್ಳಬೇಕು. ದೇವರನ್ನು ನಂಬಿಯೂ, ಅವನ ಆಜ್ಞೆ ಯಂತಿರುವ ಶ್ರುತಿಸ್ಮೃತಿಗಳಿಗೆ ಸರಿಯಾದ ಮಾನ್ಯತೆಯನ್ನು ಸಲ್ಲಿಸಿಲ್ಲ ಎಂದರೆ ದೇವರ ನಂಬಿಕೆಯೇ ದೃಢವಾಗಿಲ್ಲ ಎಂದೇ ಅರ್ಥ.

ಆದ್ದರಿಂದ ಶ್ರುತಿಸ್ಮೃತಿಗಳಿಗನುಗುಣವಾಗಿ ನಡೆದುಕೊಳ್ಳುವುದೂ ಆಸ್ತಿಕತೆ ಯ ಪರಿಧಿಗೇ ಸೇರಿರುವಂತಹದ್ದು. ಲೌಕಿಕವಾಗಿಯಾಗಲೀ,[3] ಧಾರ್ಮಿಕವಾಗಿ ಯಾಗಲೀ, ಆಧ್ಯಾತ್ಮಿಕವಾಗಿಯಾಗಲೀ ನಡೆದುಕೊಳ್ಳುವುದರಲ್ಲಿ ಅಥವಾ ಯಾವ ರೀತಿಯಾಗಿ ನಡೆದುಕೊಳ್ಳಬಾರದೆಂಬುದರಲ್ಲಿ ಶಾಸ್ತ್ರವನ್ನೇ ಆಧಾರವಾಗಿಟ್ಟುಕೊಳ್ಳ ಬೇಕು. ಶಾಸ್ತ್ರ ಸಂದೇಶಿಸುವಂತೆ ನಡೆದುಕೊಳ್ಳಬೇಕು; ಶಾಸ್ತ್ರ ನಿಷೇಧಿಸಿರುವ ಚಟುವಟಿಕೆಗಳಿಂದ ನಿವೃತ್ತನಾಗಬೇಕು.

ಯಾವುದು ಶಾಸ್ತ್ರ? ಶಾಸ್ತ್ರ ಎಂದು ಪ್ರಸಿದ್ಧವಾಗಿರುವುದೆಲ್ಲ ಶಾಸ್ತ್ರ ಎಂದೇ ನೂ ಪರಿಗಣಿಸುವಂತಿಲ್ಲ. 'ಸ್ಕಾಂದ' ಶಾಸ್ತ್ರಪ್ರಪಂಚವನ್ನು ಕರಾರುವಾಕ್ಕಾಗಿ ಪರಿಚಯಿಸಿಕೊಡುತ್ತಿದೆ—'ಋಗ್ವೇದವೇ ಮುಂತಾದ ನಾಲ್ಕು ವೇದಗಳು, ಮಹಾ ಭಾರತ, ಪಂಚರಾತ್ರ, ಮೂಲರಾಮಾಯಣ ಹಾಗೂ ಇವುಗಳಿಗೆ ಅನುಕೂಲ ವಾದ ಸ್ಮೃತ್ಯಾದಿ ವಾಙ್ಮಯ ಇವಿಷ್ಟೇ ಶಾಸ್ತ್ರ ಎಂದು ಪರಿಗಣಿಸಲ್ಪಟ್ಟಿರುವಂತ

---

1. ನಾಸ್ತಿಕ್ಯಸ್ಯ ತಥಾ ಮೂಲಂ ತ್ವಸಚ್ಛಾಸ್ತ್ರಾವಗಾಹನಮ್ ।
ತಸ್ಮಾತ್ ಸರ್ವಪ್ರಯತ್ನೇನ ತದ್ ವಿವರ್ಜ್ಯಂ ವಿಜಾನತಾ ॥ —ವಿ.ಧ. 3-247-4

2. ಶ್ರುತಿಸ್ಮೃತೀ ಮಮೈವಾಜ್ಞೇ ಯಸ್ತೇ ಉಲ್ಲಂಘ್ಯ ವರ್ತತೇ ।
ಆಜ್ಞಾಚ್ಛೇದೀ ಮಮ ದ್ವೇಷೀ ಮದ್ಭಕ್ತೋಽಪಿ ನ ವೈಷ್ಣವಃ ॥

3. ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ । —ಭ.ಗೀ. 16-24

ಹದ್ದು. ಇವುಗಳಿಗಿಂತ ಭಿನ್ನವಾದವು ಶಾಸ್ತ್ರ ಎನಿಸಲಾರವು. 1

ಹೀಗೆ ಶಾಸ್ತ್ರಪ್ರಪಂಚದ ಪರಿಮಿತಿಯನ್ನು ಪರಿಚಯಿಸಿಕೊಂಡು, ಅಂತಹ ಶಾಸ್ತ್ರದ ಸಂದೇಶಕ್ಕನುಗುಣವಾಗಿ ನಡೆದುಕೊಳ್ಳುವಾಗ ತಾನು ಅನುಸರಿಸುತ್ತಿರುವ ವಿಧಾನ ಸಮುಚಿತವಾದುದೆಂಬ ಪೂರ್ಣವಿಶ್ವಾಸವನ್ನು ಹೊಂದಿರಬೇಕು. ಇದರ ಬದಲು ಮತ್ತೊಂದು ರೀತಿಯಾಗಿ ನಡೆದುಕೊಳ್ಳಬಹುದಿತ್ತೇನೋ ಎಂದು ಸಂಶಯ ಪಟ್ಟರೂ ಆ ಅನುಷ್ಠಾನದಿಂದ ಹೊಂದಬೇಕಾದ ಫಲದ ಪ್ರಮಾಣ ಕಡಿಮೆಯಾಗ ಬಲ್ಲದು. ದುರ್ಯೋಧನನ ಮೇಲೆ ಸುರಿದ ಪುಷ್ಪವೃಷ್ಟಿಯನ್ನು ಕಂಡು ಮಹಾ ಭಾರತಯುದ್ಧದ ಧಾರ್ಮಿಕತೆಯ ಬಗ್ಗೆ ಸಂದೇಹಗ್ರಸ್ತನಾಗಿದ್ದ ಪ್ರಯುಕ್ತ ಯುಧಿಷ್ಠಿರ ಆ ಯುದ್ಧದ ಫಲದಲ್ಲಿ ಸ್ವಲ್ಪ ಪ್ರಮಾಣದ ಫಲವನ್ನು ಕಳಕೊಂಡಿಲ್ಲ ವೇ? ಅಂತೆ.

ಶ್ರೀ ವಿಷ್ಣುವಿನ ಪ್ರೀತಿಗಾಗಿ ಆಚರಿಸುವ ವೈಷ್ಣವ ಧರ್ಮವನ್ನು ಆಚರಿಸಲು ತೊಡಗಿ ಮಧ್ಯದಲ್ಲಿಯೇ ಅನಿವಾರ್ಯವಾಗಿ ತ್ಯಜಿಸಿದರೂ ಅಷ್ಟು ಧರ್ಮಾಚರಣೆಗೆ ಫಲ ಇದ್ದೇ ಇದೆ. ಹಾಗೆ ತ್ಯಜಿಸಿದ್ದರಿಂದ ಏನೂ ಅಪಾಯವೂ ಆಗಲಾರದು. ವೈಷ್ಣವ ಧರ್ಮವನ್ನು ಆಚರಿಸಬೇಕೆಂದು ಸಂಕಲ್ಪಿಸಿ, ಆ ಸಂಕಲ್ಪವನ್ನು ಕಾರ್ಯ ಗತಗೊಳಿಸಲಾಗದಿದ್ದರೂ ಸಂಕಲ್ಪ ಮಾತ್ರಕ್ಕೂ ಫಲ ಇದ್ದೇ ಇದೆ. 2 ಈ ರೀತಿ ಯಾಗಿ ವೈಷ್ಣವ ಧರ್ಮದ ವೈಶಿಷ್ಟ್ಯವನ್ನು ಮನವರಿಕೆ ಮಾಡಿಕೊಂಡು, ನಮ್ಮ ಧರ್ಮಗಳನ್ನು ವೈಷ್ಣವ ಧರ್ಮಗಳನ್ನಾಗಿ ಆಚರಿಸಬೇಕು.

ಕರ್ಮಾಧ್ಯಕ್ಷನಾದ ಭಗವಂತನ ನೇತೃತ್ವದಲ್ಲಿ ನಡೆಯುತ್ತಿರುವ ಕರ್ಮ ಸಿದ್ಧಾಂತದ ಪ್ರಕಾರ ನಮ್ಮ ನಮ್ಮ ಪ್ರಾರಬ್ಧಕರ್ಮಕ್ಕನುಗುಣವಾಗಿಯೇ ಜೀವನದ ಪ್ರತಿಯೊಂದು ಆಗುಹೋಗುವೂ, ಯೋಗಕ್ಷೇಮವೂ ನಡೆಯುತ್ತಿದ್ದು, ಜೀವನ ದಲ್ಲಿ ಏನಾದರೂ ಅನಿಷ್ಟ ಸಂಭವಿಸಿದಾಗ, ಯಾವುದನ್ನಾದರೂ ಕಳಕೊಂಡಾಗ ಕರ್ಮವನ್ನೋ, ದೈವವನ್ನೋ ನಿಂದಿಸಿದಲ್ಲಿ ಪರ್ಯಾಯವಾಗಿ ಕರ್ಮಾಧ್ಯಕ್ಷನಾದ

---

1. ಋಗ್ಯಜುಃ ಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಮ್ ।
ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ ।
ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂ ಪ್ರಕೀರ್ತಿತಮ್ ।
ಅತೋಽನ್ಯೋ ಗ್ರಂಥವಿಸ್ತಾರೋ ನೈವ ಶಾಸ್ತ್ರಂ ಕುವರ್ತ್ಮ ತತ್ ॥
—ಸ್ಕಾಂದೇ (ಬ್ರ. ಸೂ. ಭಾ. 1-1-3)

2. ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ । —ಗಿ. 2-40

೦. ಪ್ರಾರಂಭಮಾತ್ರನಿಚ್ಛಾ ವಾ ವಿಷ್ಣುಧರ್ಮೇ ನ ನಿಷ್ಫಲಾ —ಆಗ್ನೇಯೇ (ಗೀ.ತಾ.)

ಭಗವಂತನನ್ನೇ ನಿಂದಿಸಿದಂತಾಗುವುದೆಂಬುದನ್ನು ವಿಶ್ಲೇಷಿಸಿಕೊಂಡು ನಡೆದುಕೊಳ್ಳಬೇಕು.

ಹೀಗೆ ಶ್ರದ್ಧೆ ದೃಢವಾಗಿದ್ದಿರಬೇಕೆಂದರೆ ಇಷ್ಟೆಲ್ಲ ವಿಚಾರಗಳನ್ನು ಒಪ್ಪಿಕೊಂಡು ಅಳವಡಿಸಿಕೊಂಡಿರುವ ಆಸ್ತಿಕ್ಯನಿಷ್ಠೆ ಆಗಿದ್ದಿರಬೇಕಷ್ಟೇ.

ಇತರ ಧರ್ಮಗಳು ಹೇಗೋ ಹಾಗೆಯೇ ಪಾತಿವ್ರತ್ಯ ಧರ್ಮವೂ ಫಲಪ್ರದವಾಗಬೇಕೆಂದರೆ ಶ್ರದ್ಧಾಪೂರ್ವಕವಾಗಿಯೇ ನಡೆಸಲ್ಪಡಬೇಕು. ಪಾತಿವ್ರತ್ಯ ಧರ್ಮಾಚರಣೆಯ ಹಿನ್ನಲೆಯಲ್ಲಿ ಅಳವಡಿಸಿಕೊಳ್ಳಬೇಕಾದ ಶ್ರದ್ಧೆ ಎಂದರೆ 'ಶಾಸ್ತ್ರದಲ್ಲಿ ತಿಳಿಸಿರುವಂತೆ ಪತಿಯಲ್ಲಿ ದೇವರ ಸನ್ನಿಧಾನ ವಿಶೇಷವಿದೆ ಆದ್ದರಿಂದ ಶಾಸ್ತ್ರದಲ್ಲಿ ಹೇಳಿರುವಂತೆ ಪತಿಗೆ ಸಾಕಷ್ಟು ಪ್ರಮಾಣದಲ್ಲಿ ಗೌರವಾದರಗಳನ್ನು ಸಮರ್ಪಿಸಬೇಕು' —ಇತ್ಯಾದಿಯಾದ ಆಸ್ತಿಕ್ಯ ನಿಷ್ಠೆ. ಇಂತಹ ಆಸ್ತಿಕ್ಯ ನಿಷ್ಠೆಯನ್ನು ಆದಷ್ಟು ದೃಢವಾಗಿ ಅಳವಡಿಸಿಕೊಂಡು ಆಚರಿಸಲ್ಪಡುವ ಪಾತಿವ್ರತ್ಯ ಅತ್ಯಧಿಕವಾಗಿ ಫಲಪ್ರದವಾಗಬಲ್ಲದು.



**ಪರಿಶಿಷ್ಟ: ೨೦**

# ಕ್ಷಮಯಾ ಧರಿತ್ರೀ

**"ಕಾರ್ಯೇಷು ದಾಸೀ ಕರಣೇಷು ಮಂತ್ರೀ**
**ರೂಪೇ ಚ ಲಕ್ಷ್ಮೀಃ ಕ್ಷಮಯಾ ಧರಿತ್ರೀ ।**
**ಭೋಜ್ಯೇಷು ಮಾತಾ ಶಯನೇಷು ವೇಶ್ಯಾ**
**ಷಾಡ್ಗುಣ್ಯನಾರೀ ಕಿಲ ಧರ್ಮಪತ್ನೀ"**

—ಸ್ತ್ರೀ 'ಧರ್ಮಪತ್ನೀ' —ಎಂಬ ಬಿರುದನ್ನು ಪಡೆಯಬೇಕಾದರೆ, ಕಾರ್ಯನಿರ್ವಹಣೆಯಲ್ಲಿ ದಾಸಿಯಂತೆ, ಮನೆಗೆ ಸಂಬಂಧಿಸಿದ ಮಂತ್ರಾಲೋಚನೆಯಲ್ಲಿ ಮಂತ್ರಿಯಂತೆ, ಸೌಂದರ್ಯದಲ್ಲಿ ಲಕ್ಷ್ಮೀದೇವಿಯಂತೆ, ಅಡುಗೆ ಸಿದ್ಧಪಡಿಸುವುದರಲ್ಲಿ, ವಿತರಿಸುವುದರಲ್ಲಿ ತಾಯಿಯಂತೆ, ರತಿಸುಖ ನೀಡುವುದರಲ್ಲಿ ವೇಶ್ಯೆಯಂತೆ —ಹೇಗೆ ಇರಬೇಕೋ ಹಾಗೆಯೇ ಸಹನೆಯ ವಿಷಯದಲ್ಲಿ 'ಸರ್ವಂಸಹಾ' ಎಂದು ಬಿರುದು ಪಡೆದ ಭೂಮಿಯಂತೆ ಇರಬೇಕು ಎಂದು ತಿಳಿಸಲಾಗಿದೆ.

ಎಲ್ಲರಲ್ಲೂ ಇರಬೇಕಾದ ಕ್ಷಮಾಗುಣವನ್ನು ಸ್ತ್ರೀ ವಿಶೇಷವಾಗಿ ಅಳವಡಿಸಿಕೊಳ್ಳಬೇಕು. ಮನೆಯ ಎಲ್ಲ ವ್ಯವಹಾರಗಳ ಕೇಂದ್ರಬಿಂದುವಾಗಿದ್ದು, ತುಂಬ ಉದ್ವೇಗಕ್ಕೆ ಒಳಗಾಗುವ ಪ್ರಸಂಗಗಳಲ್ಲೂ ಸಹನೆಯಿಂದ ನಡೆದುಕೊಳ್ಳಬೇಕು.

ಹೀಗೆ ನಡೆದುಕೊಳ್ಳಬೇಕಾದರೆ ಶಾಸ್ತ್ರದಲ್ಲಿ ಅಲ್ಲಲ್ಲಿ ಹೇಳಿರುವಂತೆ ಕ್ಷಮಾ ವಿರುದ್ಧವಾದ ಕ್ರೋಧದ ದೋಷಗಳನ್ನೂ, ಕ್ಷಮೆಯ ಗುಣಗಳನ್ನೂ ವಿವೇಚಿಸಿ ಕೊಳ್ಳಬೇಕು.

**ಕ್ರೋಧಂ ಮೂಲಮನರ್ಥಾನಾಂ:**

ಯುಧಿಷ್ಠಿರ ದ್ರೌಪದಿದೇವಿಯ ಎದುರು ಕ್ರೋಧದ ದೋಷಗಳನ್ನೆಲ್ಲ ವಿವರಿಸಿದ್ದಿದೆ.

ಕ್ರೋಧಾಭಿಭೂತನಾದ ವ್ಯಕ್ತಿ ಯಾವುದನ್ನು ನಡೆಸಬೇಕು? ಯಾವುದನ್ನು ಮಾಡಬಾರದು? ಎಂಬ ವಿವೇಕವನ್ನೇ ಕಳೆದುಕೊಳ್ಳುತ್ತಾನೆ.[1] ಕ್ರೋಧಾವೇಶಕ್ಕೊಳಗಾದವನು ತನಗೆ ಅನರ್ಥ ಸಂಭವಿಸುವುದಿದ್ದರೂ ವಿವೇಚಿಸಿಕೊಳ್ಳಲಾರ.[2] ಕ್ರುದ್ಧನಾದವನು ಎಂತೆಂತಹ ಪಾಪಕಾರ್ಯವನ್ನೂ ಎಸಗಬಲ್ಲ; ಗುರುಹಿರಿಯರನ್ನೂ ಹೊಡೆಯಬಲ್ಲ; ನಿಂದಿಸಬಲ್ಲ; ಕೆಟ್ಟ ಮಾತಿನಿಂದ ಅವಮಾನಿಸಬಲ್ಲ[3]. ಕ್ರೋಧಾಭಿಭೂತನಾದವನು ತನ್ನ ನಾಶಕ್ಕೂ ಕಾರಣನಾಗಬಲ್ಲ[4]. ದಕ್ಷತೆ, ಸಹನೆ, ಶೌರ್ಯ ಹಾಗೂ ಬೇಗನೆ ನಿರ್ವಹಿಸುವಿಕೆ ಈ ನಾಲ್ಕು ತೇಜಸ್ಸಿನ ಗುಣಗಳನ್ನು ಕ್ರೋಧಾಭಿಭೂತನಾದವನು ಚೆನ್ನಾಗಿ ಹೊಂದಲಾರ.[5] ಕ್ರೋಧಕ್ಕೊಳಗಾಗಿ ನಡೆಸಿದವನ ಯಜ್ಞ, ದಾನ, ತಪಸ್ಸು, ಅಧ್ಯಯನ, ತೀರ್ಥಯಾತ್ರೆ ಮುಂತಾದ ಸಾಧನೆಗಳೆಲ್ಲ ನಿಷ್ಫಲವೆನಿಸುವವು.[6]

---

1. ಕ್ರುದ್ಧೋ ಹಿ ಕಾರ್ಯಂ ಸುಶ್ರೋಣಿ ನ ಯಥಾವತ್ ಪ್ರಪಶ್ಯತಿ । ನಾಕಾರ್ಯಂ ನ ಚ ಮರ್ಯಾದಾಂ ನರಃ ಕ್ರುದ್ಧೋಽನುಪಶ್ಯತಿ । —ಮ.ಭಾರ.ವನ. 29–18
2. ಅರ್ಥಾನರ್ಥೌ ನ ಜಾನಾತಿ ಕಾರ್ಯಾಕಾರ್ಯೌ ತಥೈವ ಚ ।
   ನರಃ ಕ್ರೋಧಸಮಾವಿಷ್ಟಃ........ —ವಿ. ಧರ್ಮೋತ್ತರ 3-246-2
3. ಕ್ರುದ್ಧಃ ಪಾಪಂ ನರಃ ಕುರ್ಯಾತ್ ಕ್ರುದ್ಧೋ ಹನ್ಯಾತ್ ಗುರೂನಪಿ ।
   ಕ್ರುದ್ಧಃ ಪರುಷಯಾ ವಾಚಾ ಶ್ರೇಯಸೋಽಪ್ಯವಮನ್ಯತೇ॥ —ಮ.ಭಾರ.ವನ 29-4
4. ಆತ್ಮಾನಮಪಿ ಚ ಕ್ರುದ್ಧಃ ಪ್ರೇಷಯೇತ್ ಯಮಸಾದನಮ್ ।
   —ಮ. ಭಾರ. ವನ. 29-6

೦. ಕ್ರೋಧಾಭಿಭೂತಃ ಪುರುಷಸ್ತ್ವಾತ್ಮಾನಮಪಿ ಘಾತಯೇತ್ ।
   —ವಿ. ಧ. 3-246-1

5. ದಾಕ್ಷ್ಯಂ ಹ್ಯಮರ್ಷಃ ಶೌರ್ಯಂ ಚ ಶೀಘ್ರತ್ವಮಿತಿ ತೇಜಸಃ ।
   ಗುಣಾಃ ಕ್ರೋಧಾಭಿಭೂತೇನ ನ ಶಕ್ಯಾಃ ಪ್ರಾಪ್ತುಮಂಜಸಾ । —ವನ. 29-20
6. ಯಜ್ಞಶ್ಚ ದಾನಾನಿ ತಪಃ ಪವಿತ್ರಂ ತೀರ್ಥೋಪಸೇವಾ ಚ ತಥೈವ ವೇದಾಃ ।
   ಕ್ರೋಧಾಭಿಭೂತಸ್ಯ ಭವಂತಿ ಮಿಥ್ಯಾ ನರಸ್ಯ ತಸ್ಮಾತ್ ಪರಿವರ್ಜಯೇತ್ ತಮ್ ॥
   —ವಿ. ಧ. 3-246-7

ಹೀಗೆ ಕ್ರೋಧವು ಎಲ್ಲ ಅನರ್ಥಗಳಿಗೂ ಮೂಲ. ನರಕಕ್ಕೆ ಹೆಬ್ಬಾಗಿಲು. ಸಕಲ ಆಪತ್ತುಗಳಿಗೂ ಆಸ್ಪದವಾದುದು—ಹೀಗೆ ವಿವೇಚಿಸಿಕೊಂಡು ಭಯಂಕರವಾದ ಕ್ರೋಧವನ್ನು ತ್ಯಜಿಸಬೇಕು.[1] ಹೀಗೆ ಕ್ರೋಧದ ಅನರ್ಥಗಳನ್ನು ಪರಿಶೀಲಿಸಿ, ಕ್ರೋಧವನ್ನು ಹತ್ತಿಕ್ಕಿಕೊಳ್ಳುವನೋ ಅಂತಹವನು ಮಹಾತೇಜಸ್ವಿಯಾದವನೆಂದು ಜ್ಞಾನಿಗಳು ಪರಿಗಣಿಸುವರು.[2]

## ಕ್ಷಮಯೇದಂ ಧೃತಂ ಜಗತ್ :

ಕ್ರೋಧದ ದೋಷಗಳನ್ನು ಪರಿಶೀಲಿಸಬೇಕಾದಂತೆ ಕ್ರೋಧವನ್ನು ಹತ್ತಿಕ್ಕಿಕೊಂಡು ಸಹನೆಯನ್ನು ತಂದುಕೊಂಡಾಗ, ಅದರ ಒಳಿತನ್ನೂ ವಿವೇಚಿಸಿಕೊಳ್ಳಬೇಕು. ಸಕಲ ಸಾಧನೆಗಳೂ, ಸದ್ಗುಣಗಳೂ ಮುಖ್ಯವಾಗಿ ಕ್ಷಮೆಯನ್ನು ಅವಲಂಬಿಸಿಕೊಂಡಿವೆ—ಎಂದು ತಿಳಿಸಿದ ಯುಧಿಷ್ಠಿರ ಇಡೀ ಜಗತ್ತು ಕ್ಷಮಾಗುಣದಿಂದಲೇ ಧರಿಸಲ್ಪಟ್ಟಿದೆ ಎಂದು ಅಭಿಪ್ರಾಯ ಪಡುವನು.[3] ಇನ್ನೊಬ್ಬನಿಂದ ಬೈಯಲ್ಪಟ್ಟವನಾಗಿಯೂ, ಹೊಡೆಯಲ್ಪಟ್ಟವನಾಗಿಯೂ, ಯಾರು ಸಹಿಸಿಕೊಳ್ಳುತ್ತಾನೆ – ಅಂತಹವನು ತನಗೆ ಬೈದವನ ಅಥವಾ ಹೊಡೆದವನ ಪುಣ್ಯವನ್ನು ಸ್ವೀಕರಿಸುವನು. ತನ್ನ ಪಾಪವನ್ನು ಅವನಿಗೆ ನೀಡುವನು.[4] ಕ್ಷಮೆಯ ಒಂದೇ ಒಂದು ದೋಷವೆಂದರೆ, ಕ್ಷಮೆಗೊಳಗಾದ ವ್ಯಕ್ತಿಯನ್ನು ಕೆಲವರು ಅಸಮರ್ಥನಾದವನೆಂದು ಭ್ರಮಿಸುವ ಸಾಧ್ಯತೆ ಇದೆ. ಆದರೆ ಅದೂ ಸಾಧಕನ ಪಾಲಿಗೆ ಸಾಧನಾ ದೃಷ್ಟಿಯಿಂದ ಗುಣವೇ ಆಗುವುದು.[5] ಸ್ತ್ರೀಯ ಪಾಲಿಗೂ ಹೀಗೆಯೇ.

---

1. ಕ್ರೋಧಂ ಮೂಲಮನರ್ಥಾನಾಂ ದ್ವಾರಂ ಹಿ ನರಕಸ್ಯ ಚ ।
ಆಪದಾಮಾಸ್ಪದಂ ಘೋರಂ ತಂ ಪ್ರಯತ್ನೇನ ವರ್ಜಯೇತ್ ॥
—ವಿ. ಧ. 3-246-4
2. ಯಸ್ತು ಕ್ರೋಧಂ ಸಮುತ್ಪನ್ನಂ ಪ್ರಜ್ಞಯಾ ಪ್ರತಿಬಾಧತೇ ।
ತೇಜಸ್ವಿನಂ ತಂ ವಿದ್ವಾಂಸೋ ಮನ್ಯಂತೇ ತತ್ತ್ವದರ್ಶಿನಃ —ಭಾರ.ವನ. 29-17
3. ಕ್ಷಮಾ ಧರ್ಮಃ ಕ್ಷಮಾ ಯಜ್ಞಃ ಕ್ಷಮಾ ವೇದಾಃ ಕ್ಷಮಾ ಶ್ರುತಮ್ ।
....ಕ್ಷಮಯೇದಂ ಧೃತಂ ಜಗತ್ । —ಭಾರ. ವನ. 29-37
೦. ಯಃ ಕ್ಷಮಾವಾನ್ ಸ ಧರ್ಮಾತ್ಮಾ.. —ವಿ.ಧ. 3-269-3
4. ಆಕ್ರುಷ್ಟಸ್ತಾಡಿತೋ ವಾಪಿ ಪರೇಷಾಂ ಯಸ್ತಿತಿಕ್ಷತೇ ।
ತಸ್ಮಾತ್ ಸುಕೃತಮಾದತ್ತೇ ದುಷ್ಕೃತಂ ಚ ಪ್ರಯಚ್ಛತಿ । —ವಿ.ಧ. 3-269-2
5. ಏಕಃ ಕ್ಷಮಾವತಾಂ ದೋಷೋ ದ್ವಿತೀಯೋ ನೋಪಲಭ್ಯತೇ ।
ಯದೇನಂ ಕ್ಷಮಯಾ ಯುಕ್ತಂ ತ್ವಶಕ್ತಂ ಮನ್ಯತೇ ಜನಃ ।
ವಿಜ್ಞೇಯಃ ಸೋಽಪಿ ದೋಷೋಽಸ್ಯ ದ್ವಿಜೇಂದ್ರಾಃ ಸ ಮಹಾನ್ ಗುಣಃ ॥
—ವಿ. ಧ. 3-269 5

ಸ್ತ್ರೀ ಹೀಗೆ ಸಿಟ್ಟಿನ ದೋಷಗಳನ್ನೂ, ಸಹನೆಯ ಗುಣಗಳನ್ನೂ ಚೆನ್ನಾಗಿ ಮನವರಿಕೆ ಮಾಡಿಕೊಂಡು, ಸಿಟ್ಟಿಗೆ ಒಳಗಾಗದೆ ಆದಷ್ಟು ಸಹನೆಯಿಂದ ನಡೆದುಕೊಳ್ಳಬೇಕು. ಒಂದು ವೇಳೆ ಗಂಡ ಸಿಟ್ಟಿಗೆ ಒಳಗಾಗಿ ಸಾಕಷ್ಟು ಪೀಡಿಸಿದನೆಂದರೂ, ಅದಕ್ಕೆ ಪ್ರತೀಕಾರದ ಮನೋಭಾವನೆಯನ್ನು ತಾಳಬಾರದು.[1]

ಹೀಗಾದಾಗ 'ಕ್ಷಮಯಾ ಧರಿತ್ರೀ' –ಎನಿಸಬಹುದಾಗಿದೆ.



ಪರಿಶಿಷ್ಟ : ೨೧

# ವಿಧವಾ ಸ್ತ್ರೀ ನಡೆಸಬೇಕಾದ ವಿವೇಚನೆ ಮತ್ತು ತಾಳಬೇಕಾದ ನಿಲುವು

ಪತಿಯನ್ನು ಕಳಕೊಂಡು 'ವಿಧವಾ' ಎನಿಸಿರುವ ಸ್ತ್ರೀಯ ಪಾಲಿಗೆ ಒಂದೆಡೆಯಿಂದ ಪ್ರಾಣನಾಥನ ಅಗಲಿಕೆಯ ಪ್ರಯುಕ್ತ ದುಃಖ ದೊಡ್ಡ ಹೊಳೆಯಾಗಿ ಹರಿಯುತ್ತಿದ್ದರೆ, ಮುಂದೆ ಹೇಗೆ ಬದುಕುವುದು? ಜೀವನವನ್ನು ಹೇಗೆ ಎದುರಿಸುವುದು? ಹೀಗೆ ಸಾವಿರಾರು ಸಮಸ್ಯೆಗಳು ಮತ್ತೊಂದೆಡೆಯಿಂದ ಹೆಡೆಯರಳಿಸಿದ ಹಾವುಗಳಾಗಿ ಬುಸುಗುಟ್ಟುತ್ತಿರುತ್ತವೆ. ಈ ದುಃಖದ, ಭಯದ, ಅನಾಥಪ್ರಜ್ಞೆಯ ಪರಿಸ್ಥಿತಿಯನ್ನು ಹತೋಟಿಗೆ ತಂದುಕೊಳ್ಳಲು ಇರುವ ಒಂದೇ ಒಂದು ಉಪಾಯವೆಂದರೆ ವಿವೇಚನೆ ನಡೆಸುವುದು.[2] ಆಧ್ಯಾತ್ಮಿಕತೆಯ, ಪುನರ್ಜನ್ಮ ಸಿದ್ಧಾಂತದ, ಕರ್ಮಸಿದ್ಧಾಂತದ ಆಧಾರದಲ್ಲಿ ದುಃಖಿಸುವುದು ಎಷ್ಟು ಸಮುಚಿತ? ಅದರಿಂದ ಏನು ಪ್ರಯೋಜನ? ಅದರ ಬದಲು ಏನನ್ನು ನಡೆಸಬಹುದು?— ಹೀಗೆಲ್ಲ ವಿಶ್ಲೇಷಿಸಿಕೊಳ್ಳಲಾಯಿತೆಂದರೆ ದುಃಖಭಯಗಳ ಪ್ರಮಾಣದಲ್ಲಿ ಎಷ್ಟೋ ಕಡಿಮೆ ಆಗುವುದು. ಆದಷ್ಟು ಅಂತರ್ಮುಖಿಯಾಗಿದ್ದುಕೊಂಡು ನಡೆಸುವ ವಿಶ್ಲೇಷಣೆ ಆಕೆಯಲ್ಲಿ ಆತ್ಮವಿಶ್ವಾಸ, ಪ್ರಶಾಂತತೆ, ಸಾಧನಾನುಷ್ಠಾನದಲ್ಲಿ ಮಗ್ನತೆ—ಇವುಗಳನ್ನೆಲ್ಲ ಅಭಿವ್ಯಕ್ತಗೊಳಿಸಬಲ್ಲದು.

---

1. ಭರ್ತುರ್ವಿಪ್ರಕೃತಾಽಪಿ ರೋಷಣತಯಾ ಮಾ ಸ್ಮ ಪ್ರತೀಪಂ ಗಮಃ ।

—ಕಾಲಿದಾಸ (ಅಭಿಜ್ಞಾನ ಶಾಕುಂತಲ 4-17)

2. ಭೈಷಜ್ಯಮೇತದ್ ದುಃಖಸ್ಯ ವಿಚಾರಂ ಪರಿಚಿಂತ್ಯ ಚ —ಗ. ಪು. 11-12

ನಾವು ಅನುಭವಿಸಬೇಕಾದ ದುಃಖಕ್ಕೆ ನಾವೇ ಹೊಣೆಗಾರರು. ಮೇಲ್ನೋಟಕ್ಕೆ ಯಾವುದೋ ವ್ಯಕ್ತಿಯಿಂದಾಗಿ ಯಾವುದೋ ಒಂದು ಆಕಸ್ಮಿಕ ಘಟನೆಯಿಂದಾಗಿ ದುಃಖವನ್ನು ಅನುಭವಿಸುವಂತಾಯಿತೆಂದು ಕಂಡುಬಂದರೂ ಆ ದುಃಖಕ್ಕೆ ಮುಖ್ಯ ಕಾರಣ ನಮ್ಮ ಪ್ರಾರಬ್ಧ ಕರ್ಮವೇ ಆಗಿರುತ್ತದೆ. ಆದುದರಿಂದ ನಮ್ಮ ನಮ್ಮ ಪ್ರಾರಬ್ಧಕರ್ಮಕ್ಕನುಗುಣವಾಗಿ ಅನುಭವಿಸಬೇಕಾದ ದುಃಖ ಅಪರಿಹಾರ್ಯವಾದುದು.

ಹೀಗಿದ್ದರೂ ಆ ನಿಟ್ಟಿನಲ್ಲಿ ಹತಾಶರಾಗುವುದಕ್ಕೆ ಅವಕಾಶವಿಲ್ಲ. ಇಂದು ದುಃಖಕ್ಕೆ ಪ್ರಯೋಜಕವಾಗುತ್ತಿರುವ ನಮ್ಮ ಪ್ರಾರಬ್ಧಕರ್ಮ ನಾಳೆ ಸುಖಕ್ಕೂ ಪ್ರಯೋಜಕವಾಗಬಲ್ಲದು. ಜೀವನದಲ್ಲಿ ಸುಖದ ನಿರೀಕ್ಷೆಗೆ ಯಾವುದೇ ಅವಕಾಶ ಇಲ್ಲ ಎಂದು ಕಂಡರೂ ನಮ್ಮ ನಿರೀಕ್ಷೆಗೆ, ಊಹೆಗೆ ಮೀರಿದಂತೆ ಸುಖದ ಅವಕಾಶವನ್ನು ಕಲ್ಪಿಸಿಕೊಡುವ ಸಾಮರ್ಥ್ಯ ಪ್ರಾರಬ್ಧಕರ್ಮಕ್ಕಿದೆ.

ಪ್ರಾರಬ್ಧಕರ್ಮದ ಹಿನ್ನೆಲೆಯಲ್ಲಿ ರೂಪುಗೊಂಡ ಋಣಾನುಬಂಧಕ್ಕನುಗುಣವಾಗಿ ಬೇರೆ ಬೇರೆ ಬಂಧು ಮಿತ್ರರನ್ನೊಳಗೊಂಡು ಅಸ್ತಿತ್ವಕ್ಕೊಳಗಾದ 'ಎರವಿನ ಸಂಸಾರ'ದಲ್ಲಿ ಅಂತಹ ಎರವಲು ಹೊರತಾಗಿ 'ಯಾರಿಗೆ ಯಾರುಂಟು ?' ಆ ಎರವಲಿನ ಋಣದ ನಂಟು ಆರಿತೆಂದರೆ ಯಾವುದೇ ಬಗೆಯ ಆತ್ಮೀಯತೆಯಾಗಲೀ, ಗೌರವಾದರಗಳ ಭಾವನೆಗಳಾಗಲೀ ಉಳಿಯುವಂತಿಲ್ಲ; ಮುಂದುವರಿಯುವಂತಿಲ್ಲ.[1] ಆದುದರಿಂದ ಯಾವುದೇ ವ್ಯಕ್ತಿಯ ಸಂಪರ್ಕ ಕಳೆದುಹೋಯಿತೆಂದರೆ, ಆ ಸಂಪರ್ಕವನ್ನೇ ಮತ್ತೆ ಮತ್ತೆ ಮೆಲುಕು ಹಾಕುತ್ತ ಅದಕ್ಕೆ ಆಶ್ರಯನಾಗಿದ್ದ ವ್ಯಕ್ತಿಯ ಬಗ್ಗೆ ಮರುಗುವುದರಲ್ಲಿ ಅರ್ಥವಿಲ್ಲ.

ಪತಿಪತ್ನಿಗಳ ನಡುವಿನ ಸಂಬಂಧ ಉಳಿದ ಬಂಧುಗಳ ಸಂಬಂಧದಂತಲ್ಲ; ಆ ಸಂಬಂಧ ನಿಯತವಾಗಿದ್ದು ಜನ್ಮ ಜನ್ಮಾಂತರಕ್ಕೂ ಮುಂದುವರಿಯುವಂತಹದ್ದೆಂದು ಇಟ್ಟುಕೊಂಡರೂ ಈ ಜೀವನದಲ್ಲಿ ಕಳೆದು ಹೋದ ಪತಿ ಮುಂದಿನ ಬದುಕಲ್ಲಾದರೂ ದೊರಕಿಯೇ ತೀರುವನೆಂಬ ಆಶಾವಾದಕ್ಕೆ ಅವಕಾಶ ಇದ್ದೇ ಇದೆ.

ಅದೇನೇ ಇರಲಿ; ಈ ಜೀವನದಲ್ಲಂತೂ ಈ ವರೆಗೆ ಪತಿಯಿಂದ ದೊರಕುತ್ತಿದ್ದ ಗಾಢವಾದ ಪ್ರೀತಿ, ಪರಮ ಸುಖ, ದೃಢವಾದ ಆಸರೆ — ಇವುಗಳಿಂದೆಲ್ಲ

---

1. ಯಾವದ್ ಯಸ್ಯ ಹಿ ಸಂಬಂಧೋ ಮಮತ್ವಂ ತಾವದೇವ ಹಿ । —ಭಾಗ. 6-16-7

೦. ಯಾವದ್ ಯತ್ರೋಪಲಭ್ಯೇತ ತಾವತ್ ಸ್ವತ್ವಂ ಹಿ ತಸ್ಯ ತತ್ । —ಭಾಗ.6-16-8

ವಂಚಿತಳಾಗಿಯೇ ಬಾಳಬೇಕು ತಾನೇ? ಎಂಬ ಚಿಂತೆಗೂ ಅವಕಾಶ ದೊರಕಬಾರದೆಂದರೆ ಜೀವನದಲ್ಲಿ ಪ್ರೀತಿ, ಸುಖಾದಿಗಳನ್ನು ಪಡೆದುಕೊಳ್ಳುವುದ ರಲ್ಲಿ ಭಗವಂತನ ಪಾತ್ರವನ್ನು ವಿವೇಚಿಸಿಕೊಳ್ಳಬೇಕು.

ಪತಿ ತನ್ನನ್ನು ಪ್ರೀತಿಸುತ್ತಿದ್ದಿರಬಹುದು; ತನಗೆ ಸುಖವನ್ನು ನೀಡಿದ್ದಿರ ಬಹುದು ಹಾಗೂ ಆಶ್ರಯನಾಗಿದ್ದಿರಬಹುದು. ಆದರೆ 'ಪ್ರಿಯಕೃತ್' 'ಪ್ರೀತಿ ವರ್ಧನಃ' 'ಸುಖದಃ' 'ನಂದನಃ' 'ಆಧಾರನಿಲಯಃ' 'ವಿಧಾತಾ' —ಎಂದೆಲ್ಲ ಎನಿಸಿರುವ ಭಗವಂತನ ಪ್ರೇರಣೆಗೊಳಗಾಗಿಯೇ ಪತಿ ತನ್ನ ಬಗ್ಗೆ ಹಾಗೆ ನಡೆದು ಕೊಂಡಿರುವನೇ ಹೊರತು ಸ್ವೇಚ್ಛೆಯಿಂದಲೇ ಅಲ್ಲ. ಅಂತಹ ಭಗವಂತನು ತನ್ನ ಪಾಲಿಗೆ ಹಾಗೆಯೇ ಅನುಗ್ರಹೋನ್ಮುಖನಾಗಿದ್ದನೆಂದ ಮೇಲೆ ತಾನೇಕೆ ಆ ಪ್ರೀತ್ಯಾ ದಿಗಳಿಂದ ವಂಚಿತಳಾಗಿರುವೆನೆಂದು ಮರುಗಬೇಕು? ತಾನೇಕೆ ಅನಾಥ ಎಂದು ಪರಿ ತಪಿಸಬೇಕು? 'ಶ್ರೀನಿಧೇ ಹರಿ ಎನಗೆ ನೀನಿರುವ ತನಕ ನಾನೇಕೆ ಬಡವನೋ ನಾನೇಕೆ ಪರದೇಶಿ' —ಎಂದು ದಾಸರು ಚಿಂತಿಸಿದ ದಾಟಿಯಲ್ಲಿ ವಿಶ್ಲೇಷಿಸಿಕೊಂಡು ಮನವರಿಕೆ ಮಾಡಿಕೊಳ್ಳಬೇಕು.

ಈ ಬಗೆಯ ವೈಚಾರಿಕತೆಯ ಹಿನ್ನೆಲೆಯಲ್ಲಿ ತಾನು ಬ್ರಹ್ಮಚರ್ಯಾಶ್ರಮ ವನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕಾದುದೆಂಬುದನ್ನು ಮರೆಯದೆ ಆ ಆಶ್ರಮ ಕ್ಕೆ ಸಂಬಂಧಪಡುವ ನೀತಿ ನಿಯಮಗಳನ್ನು ಪಾಲಿಸಬೇಕು—

೧. ತನ್ನನ್ನು ಪೂರ್ಣವಾಗಿ ಒಬ್ಬ ಪತಿಗೆ ಸಮರ್ಪಿಸಿಕೊಂಡ ಮೇಲೆ ಅಂತಹ ಪತಿಯ ಸ್ಥಾನವನ್ನು ಯಾವುದೇ ಕಾರಣಕ್ಕಾಗಿ ಮತ್ತೊಬ್ಬ ವ್ಯಕ್ತಿಗೆ ಕಲ್ಪಿಸಿ ಕೊಡುವ ದುರಾಲೋಚನೆಗೆ ಒಳಗಾಗದೆ ಆ ಪತಿಯ ಹಿತಸಾಧನೆಗಾಗಿಯೇ ತನ್ನ ಬದುಕನ್ನೆಲ್ಲ ತ್ರಿಕರಣಪೂರ್ವಕವಾಗಿ ಮುಡುಪಾಗಿಡಬೇಕು.

೨. ಪತಿ ಕಣ್ಮರೆಯಾಗಿದ್ದರೂ ತನ್ನ ಸಾಧನೆಗಳನ್ನೆಲ್ಲ ಅಂತಹ ಪತಿಯ ಅಂತರ್ಗತ ನಿಗೇ ಸಮರ್ಪಿಸುವ ಮೂಲಕ ಅವನಿಗೂ ಅದರಿಂದ ಒಳಿತಾಗುವಂತೆ ನಡೆದು ಕೊಳ್ಳಬೇಕಲ್ಲದೆ, ಮರಣದ ಬಳಿಕ ಅವನ ಸಾಮೀಪ್ಯವೇ ದೊರಕುವಂತಾಗ ಬೇಕೆಂದು ಹಾರೈಸುತ್ತಿರಬೇಕು.

೩. ತನ್ನ ವೇಷಭೂಷಣಗಳೆಲ್ಲ ಪರಪುರುಷರ ಆಕರ್ಷಣೆಗೆ ಒಳಗಾಗದಂತಿರ ಬೇಕೆಂಬುದರ ಬಗ್ಗೆ ಜಾಗರೂಕಳಾಗಿದ್ದಿರಬೇಕು. ತಲೆಗೂದಲನ್ನು ಬಾಚಿ, ಶೃಂಗರಿಸಿ ಹೆಣೆದುಕೊಳ್ಳುವುದನ್ನಾಗಲೀ, ಸೂಡಿಕಟ್ಟಿಕೊಳ್ಳುವುದನ್ನಾಗಲೀ ಮಾಡಬಾರದು. ತಲೆಯಲ್ಲಿ ದೇವರ ನಿರ್ಮಾಲ್ಯವನ್ನು ಧರಿಸಿಕೊಳ್ಳಬೇಕೇ ಹೊರತು ಚೆಂದ ಕಾಣುವಂತೆ ಹೂಗಳನ್ನು ಮುಡಿದುಕೊಳ್ಳಬಾರದು.

ಕುತ್ತಿಗೆಯಲ್ಲಿ ತುಳಸೀಮಣಿ ಸರವನ್ನು (ಅದೂ ತಾಮ್ರದ ಸರಿಗೆಯಲ್ಲಿ ಪೋಣಿಸಿದ) ಧರಿಸಿಕೊಳ್ಳಬೇಕೇ ಹೊರತು ಚಿನ್ನದ ಒಂದು ಎಳೆಯ ಸರವನ್ನೂ ಹಾಕಿಕೊಳ್ಳಬಾರದು. ಕೈಗಳಲ್ಲೂ, ಕಿವಿಗಳಲ್ಲೂ ಆಭರಣಗಳನ್ನು ಧರಿಸಿಕೊಳ್ಳಬಾರದು. ಮುಖದಲ್ಲಿ ಭಗವಂತನಿಗೆ ಸಮರ್ಪಿಸಿದ ಪವಿತ್ರವಾದ ಅಂಗಾರದಿಂದ ಊರ್ಧ್ವಪುಂಡ್ರವನ್ನು ಧರಿಸಿಕೊಳ್ಳಬೇಕು ಹೊರತು ಇತರ ಚುಕ್ಕಿಗಳನ್ನು ಇಟ್ಟುಕೊಳ್ಳಬಾರದು. ಹಣೆಯನ್ನು ಬರಿದಾಗಿರುವಂತೆ ಬಿಟ್ಟುಬಿಡಬಾರದು. ಯಾವುದೇ ಸುಗಂಧದ್ರವ್ಯಾದಿಗಳನ್ನು ಹಚ್ಚಿಕೊಳ್ಳಬಾರದು. ವಿರಕ್ತಿಸೂಚಕವಾದ ಬಿಳಿ, ಕಾವಿ, ಕೆಂಪು—ಮುಂತಾದ ಬಣ್ಣದ ಶುಭ್ರವಾದ ನೂಲಿನ ಸೀರೆಯನ್ನು ತೊಟ್ಟುಕೊಳ್ಳಬೇಕೇ ಹೊರತು ಬೆಲೆಬಾಳುವ ಬಣ್ಣಬಣ್ಣದ ಪಟ್ಟೆ ಪೀತಾಂಬರವನ್ನೆಲ್ಲ ತೊಡಬಾರದು.

೪. ಆದಷ್ಟು ಅಧ್ಯಯನ, ಜಪತಪಾನುಷ್ಠಾನ ಮುಂತಾದ ಆಧ್ಯಾತ್ಮಿಕ ವ್ರತ, ನಿಯಮಾದಿಗಳ ಪಾಲನೆ ಮುಂತಾದ ಧಾರ್ಮಿಕ ಸಾಧನೆಗಳಲ್ಲೇ ತೊಡಗಿದ್ದು, ಅನಿವಾರ್ಯ ಎನಿಸುವಷ್ಟು ಪ್ರಮಾಣದಲ್ಲಷ್ಟೇ ಸಾಂಸಾರಿಕ, ಸಾಮಾಜಿಕ ವ್ಯವಹಾರಗಳಲ್ಲಿ ಬೆರೆಯಬೇಕು.

೫. ಪರಪುರುಷರೊಡನೆ ಸಂಭಾಷಣೆ ಮುಂತಾದ ಸಂಪರ್ಕವನ್ನು ಆದಷ್ಟು ಕಡಿಮೆ ಮಾಡಿಕೊಳ್ಳಬೇಕು. ಸಭೆ, ಸಮಾರಂಭಗಳಲ್ಲಿ ಪಾಲ್ಗೊಳ್ಳುವುದನ್ನೂ ಕಡಿಮೆ ಮಾಡಿಕೊಳ್ಳಬೇಕು.

೬. ಉನ್ಮಾದಕಗಳಾದ ಭಕ್ಷ್ಯಭೋಜ್ಯಗಳನ್ನು ಕಡಿಮೆ ಮಾಡಿ ಸರಳವಾದ ಆಹಾರವನ್ನೇ ಸ್ವೀಕರಿಸಬೇಕು. ರಾತ್ರಿ ಮಂಚದ ಮೇಲೆ ಹಾಸಿಗೆಯ ಮೇಲೆ ಮಲಗಬಾರದು.

೭. 'ಆದದ್ದೆಲ್ಲ ಒಳಿತೇ ಆಯಿತು....' —ಎಂದು ದಾಸರು ವಿಶ್ಲೇಷಿಸಿಕೊಂಡಿರುವಂತೆ ವಿಶೇಷವಾಗಿ ಆಧ್ಯಾತ್ಮಿಕ ಹಾಗೂ ಧಾರ್ಮಿಕ ಸಾಧನೆಗಳನ್ನು ನಡೆಸಿ ಬದುಕನ್ನು ಸಾರ್ಥಕಗೊಳಿಸಲು ಕರುಣಾಮಯಿ ಭಗವಂತ ಕಲ್ಪಿಸಿಕೊಟ್ಟ ಸದವಕಾಶ ಇದಾಗಿದೆ ಎಂದು ಮನವರಿಕೆ ಮಾಡಿಕೊಂಡು ಉಳಿದವರಲ್ಲೂ ಆ ರೀತಿಯಾಗಿಯೇ ಸಮರ್ಥಿಸುವಂತಿರಬೇಕೇ ಹೊರತು ಇದು ತನ್ನ ಪಾಲಿಗೆ ಕ್ರೂರ ಅಭಿಶಾಪ—ಎಂದು ಮರುಗುವಂತಿರಬಾರದು.

ಇಷ್ಟು ನಿಯಮಗಳನ್ನು ಅಳವಡಿಸಿಕೊಂಡು ನಡೆಸಲಾಗುವ ವಿಧವಾಧರ್ಮ ಪಾತಿವ್ರತ್ಯ ಧರ್ಮಕ್ಕೆ ಪೋಷಕವಾಗಿ ಇರುವಂತಹದ್ದು.



### ಪುರಾಣಗಳಲ್ಲಿ ಪ್ರಸ್ತುತಗಳಾದ

## ಸ್ತ್ರೀಧರ್ಮ ವಿಶೇಷಗಳು

### ಊರ್ಧ್ವಪುಂಡ್ರ

ಏಕಪುಂಡ್ರಂ ತು ನಾರೀಣಾಂ ಶೂದ್ರಾಣಾಂ ಚ ವಿಧೀಯತೇ ।
ಊರ್ಧ್ವಂ ಪುಂಡ್ರಂ ಲಲಾಟೇ ತು ಸರ್ವೇಷಾಂ ಪ್ರಥಮಂ ಸ್ಮೃತಮ್ ॥
—ಪದ್ಮ ಉತ್ತರಖಂಡ 225-54

ಸ್ತ್ರೀಯರು ಹಾಗೂ ಶೂದ್ರರು ಹಣೆಯ ಮೇಲೆ ಒಂದು ಊರ್ಧ್ವ ಪುಂಡ್ರವನ್ನು (ನಾಮವನ್ನು) ಧರಿಸಿಕೊಳ್ಳಬೇಕು. ಹೀಗೆ ಹಣೆಯಲ್ಲಿ ಊರ್ಧ್ವ ಪುಂಡ್ರವನ್ನು ಧರಿಸಿಕೊಳ್ಳುವಂತಹದ್ದು ಎಲ್ಲರಿಗೂ ಆವಶ್ಯಕವೆನಿಸಿದೆ.

### ಪತಿ ಇದ್ದಾಗಷ್ಟೇ ಶೋಭೆ

ಭರ್ತಾ ತೀರ್ಥಶ್ಚ ಪುಣ್ಯಶ್ಚ ನಾರೀಣಾಂ ನೃಪನಂದನ ।
ಶೃಂಗಾರಂ ಭೂಷಣಂ ರೂಪಂ ವರ್ಣಂ ಸೌಗಂಧ್ಯಮೇವ ಚ ।
ಶೃಂಗಾರೈರ್ಭೂಷಣೈಃ ಸಾ ತು ಶುಶುಭೇ ಸಾ ಯದಾ ಪತಿಃ ॥
—ಪದ್ಮ, ಭೂಮಿಖಂಡ 41-77, 78

ಪತಿವ್ರತೆಯರ ಪಾಲಿಗೆ ಅವರ ಪತಿಯೇ ತೀರ್ಥ, ಪುಣ್ಯ, ಶೃಂಗಾರ, ಭೂಷಣ, ರೂಪ, ವರ್ಣ, ಸೌಗಂಧ್ಯ—ಇವೆಲ್ಲ ಆಗಿರುವನು. ಪತಿ ಇದ್ದಾಗಷ್ಟೇ ಶೃಂಗಾರ, ಭೂಷಣಾದಿಗಳಿಂದ ಪತಿವ್ರತೆ ಶೋಭಿಸುವಳು.

### ಅಂತಹ ನಾರಿ ಪತಿವ್ರತಪರಾಯಣೆ

ವಾಚಾಸು ಮನಸಾ ಚೈವ ಕರ್ಮಣಾ ಶೃಣು ಭಾಮಿನಿ ।
ಶುಶ್ರೂಷಾಂ ಕುರುತೇ ಯಾ ಹಿ ಭರ್ತುಶ್ಚೈವ ದಿನೇ ದಿನೇ ।
ತುಷ್ಟೇ ಭರ್ತರಿ ಯಾ ಪ್ರೀತಾ ನ ತ್ಯಜೇತ್ ಕ್ರೋಧನಂ ಪುನಃ ।
ತಸ್ಯ ದೋಷಂ ನ ಗೃಹ್ಣಾತಿ ತಾಡಿತಾ ತುಷ್ಯತೇ ಪುನಃ ।
ಭರ್ತುಃ ಕರ್ಮಸು ಸರ್ವೇಷು ಪುರತಸ್ತಿಷ್ಠತೇ ಸದಾ ।
—ಪದ್ಮ-ಭೂಮಿಖಂಡ 50-21, 22, 23

ಯಾರು ಮಾತಿನಿಂದ, ಮನಸ್ಸಿನಿಂದ ಹಾಗೂ ಕರ್ಮದಿಂದ ಪ್ರತಿನಿತ್ಯ ಪತಿಯ ಸೇವೆಯಲ್ಲಿಯೇ ಆಸಕ್ತಳಾಗಿರುವಳೋ, ಪತಿ ಸಂತಷ್ಟನಾದರೆ ತಾನೂ ಸಂತುಷ್ಟಳಾಗುವಳೋ, ಕ್ರೋಧಕ್ಕೊಳಗಾದರೂ ಪತಿಯನ್ನು ತ್ಯಜಿಸುವುದಿಲ್ಲವೋ, ಪತಿಯ ದೋಷವನ್ನು ಎಂದೂ ಪರಿಗಣಿಸುವುದಿಲ್ಲವೋ, ಪತಿ ಹೊಡೆದರೂ

ಅದಕ್ಕಾಗಿ ಅಸಮಾಧಾನ ತಾಳುವುದಿಲ್ಲವೋ, ಪತಿಯ ಎಲ್ಲ ಕರ್ಮಗಳಲ್ಲೂ ಮುಂದುವರಿದು ಸಹಕರಿಸುವವಳೋ ಅವಳೇ ನಿಜವಾದ ಪತಿವ್ರತೆ.

## ಪತಿಯ ಹಿತಾದಿಗಳನ್ನು ತಿಳಿದುಕೊಳ್ಳಬೇಕು

**ಕಿಂ ಪ್ರಿಯಂ ಚ ಕಿಮಾಗ್ನೇಯಂ ಷಡ್ರಸಾಭ್ಯಂತರೇಷು ಚ ।**
**ಕಿಂ ಪಥ್ಯಂ ಕಿಮಪಥ್ಯಂ ಚ ಸ್ವಾಸ್ಥ್ಯಂ ವಾಸ್ಯ ಕಥಂ ಭವೇತ್ ।**
**ಇತಿ ಯತ್ನಾದ್ವಿಜಾನೀಯಾದನುಷ್ಠೇಯಂ ಚ ತತ್ತಥಾ ॥**
**ಅನ್ಯತ್ರ ವ್ಯಯಕರ್ತಾರಂ ಪತಿಂ ರಹಸಿ ಬೋಧಯೇತ್ ।**

**—ನಾರದೀಯ ಉತ್ತರ ಖಂಡ, 13–13, 23**

ಆರು ರಸಗಳಲ್ಲಿ ಪತಿಗೆ ಪ್ರಿಯವಾದ ರಸ ಯಾವುದು? ಅಪ್ರಿಯವಾದ ರಸ ಯಾವುದು? ಪಥ್ಯ ಆಹಾರ ಯಾವುದು? ಅಪಥ್ಯ ಆಹಾರ ಯಾವುದು? ಯಾವ ಆಹಾರವನ್ನು ಸ್ವೀಕರಿಸುವುದರಿಂದ ಅವನಿಗೆ ದೈಹಿಕ ಹಾಗೂ ಮಾನಸಿಕ ಸ್ವಾಸ್ಥ್ಯ ದೊರಕೀತು?—ಇವೆಲ್ಲವನ್ನೂ ಪರಿಶ್ರಮಪಟ್ಟು ತಿಳಿದುಕೊಳ್ಳಬೇಕು. ಹಾಗೆಯೇ ಅದಕ್ಕನುಗುಣವಾಗಿ ನಡೆದುಕೊಳ್ಳಬೇಕು. ಪತಿಯು ಯಾವುದಾದರೂ ವ್ಯರ್ಥವಾದ ವೆಚ್ಚವನ್ನು ನಡೆಸಿದಲ್ಲಿ ಏಕಾಂತದಲ್ಲಿ ಅವನಿಗೆ ತಿಳಿಹೇಳಬೇಕು.

## ಅವಳೇ ನಿಜವಾದ ಪತಿವ್ರತೆ

**ಕಾರ್ಯೇ ದಾಸೀ ರತೌ ವೇಶ್ಯಾ ಭೋಜನೇ ಜನನೀ ಸಮಾ ।**
**ವಿಪತ್ಸು ಮಂತ್ರಿಣೀ ಭರ್ತುಃ ಸಾ ಚ ಭಾರ್ಯಾ ಪತಿವ್ರತಾ ॥**

**—ಪದ್ಮ, 52–58**

ಯಾವ ಪತ್ನಿ ಪತಿಯಾದವನಿಗೆ ಕಾರ್ಯದಲ್ಲಿ ದಾಸಿಯಂತಿರುವಳೋ, ರತಿ ಸುಖವನ್ನು ನೀಡುವಲ್ಲಿ ವೇಶ್ಯೆಯಂತೆ ಇರುವಳೋ, ಭೋಜನ ನೀಡುವಲ್ಲಿ ತಾಯಿಯಂತೆ ಇರುವಳೋ, ವಿಪತ್ತುಗಳ ಸ್ಥಿತಿಯಲ್ಲಿ ಮಂತ್ರಿಯಂತೆ ಇರುವಳೋ — ಅವಳೇ ನಿಜವಾಗಿ ಪತಿವ್ರತೆಯಾದವಳು.

## ಪತಿಯ ಆರಾಧನೆಯಿಂದ ಶ್ರೀಹರಿಯು ಪ್ರಸನ್ನ

**ಆರಾಧಿತೇಷು ಪತಿಷು ವಿಷ್ಣುಃ ಸರ್ವಸುರೇಶ್ವರಃ ।**
**ಪ್ರಸನ್ನೋ ಭವತಿ ತ್ವತ್ರ ಪ್ರಸನ್ನೇ ಕಿಮು ದುರ್ಲಭಮ್ ॥**

**—ಪದ್ಮ, ಉತ್ತರಖಂಡ 206, 35**

ಪತಿಯ ಆರಾಧನೆಯಿಂದ ಶ್ರೀ ಹರಿಯು ಪ್ರಸನ್ನನಾಗುವನು. ಅವನು ಪ್ರಸನ್ನನಾದನೆಂದರೆ ಯಾವುದೂ ದುರ್ಲಭವೆನಿಸದು.

## ಪತ್ನಿಯ ಅಡುಗೆಗೆ ಪ್ರಾಶಸ್ತ್ಯ

**ಭಾರ್ಯಾ ಪಚತಿ ಚೇದನ್ನಂ ಸ್ವಹಸ್ತೇನಾಮೃತೋಪಮಮ್ ।**
**ತದನ್ನಮೇವ ಭುಂಜಂತಿ ಪಿತರೋ ಹೃಷ್ಟಮಾನಸಾಃ ।**
**ತೇನೈವ ತೃಪ್ತಿಮಾಯಾಂತಿ ಸಂತುಷ್ಟಾಶ್ಚ ಭವಂತಿ ತೇ ॥**

**—ಪದ್ಮ, ಭೂಮಿಖಂಡ 58-31, 32**

ಪತಿವ್ರತೆ ಮಾಡಿದ ಅಡುಗೆ ಅಮೃತತುಲ್ಯ. ಪಿತೃಗಳೂ ಆ ಅಡುಗೆಯನ್ನು ಸಂತೋಷದಿಂದ ಸ್ವೀಕರಿಸುವರು. ಆದರಿಂದಲೇ ಅವರು ತೃಪ್ತರಾಗುವರು, ತುಷ್ಟರಾಗುವರು.

## ಸ್ತ್ರೀ ಶಾಲಗ್ರಾಮವನ್ನು ಮುಟ್ಟಬಾರದು

**ನ ಜಾತುಚಿತ್ ಸ್ತ್ರಿಯಾ ಕಾರ್ಯಂ ಶಾಲಗ್ರಾಮಸ್ಯ ಪೂಜನಮ್ ।**
**ಮೋಹಾತ್ ಸ್ಪೃಷ್ಟ್ವಾಪಿ ಮಹಿಲಾ ಜನ್ಮಶೀಲಗುಣಾನ್ವಿತಾ ।**
**ಹಿತ್ವಾ ಪುಣ್ಯಸಮೂಹಂ ಸಾ ಸತ್ವರಂ ನರಕಂ ವ್ರಜೇತ್ ॥**

**—ಪದ್ಮ, ಭೂಮಿಖಂಡ 60-23, 24**

ಸ್ತ್ರೀ ಎಂದೂ ಶಾಲಗ್ರಾಮದ ಪೂಜೆಯನ್ನು ನಡೆಸಬಾರದು. ಒಂದು ವೇಳೆ ಮೋಹಕ್ಕೊಳಗಾಗಿ ಶಾಲಗ್ರಾಮವನ್ನು ಮುಟ್ಟಿದರೂ ಒಳ್ಳೆಯ ಜನ್ಮ, ಶೀಲ, ಗುಣಾದಿಗಳನ್ನೊಳಗೊಂಡವಳಾಗಿದ್ದರೂ ಆಕೆ ಪುಣ್ಯವನ್ನೆಲ್ಲ ತ್ಯಜಿಸಿ ಕೂಡಲೇ ನರಕದಲ್ಲಿ ಬೀಳುವಳು.

**ಶಾಲಗ್ರಾಮೋ ನ ಸ್ಪೃಷ್ಟವ್ಯೋ ಹೀನವರ್ಣೈರ್ವಸುಂಧರೇ ।**
**ಸ್ತ್ರೀಶೂದ್ರಕರಸ್ಪರ್ಶೋ ವಜ್ರಸ್ಪರ್ಶಾಧಿಕೋ ಮತಃ ।**
**ಯದಿ ಭಕ್ತಿರ್ಭವೇತ್ತಸ್ಯ ಸ್ತ್ರೀಣಾಂ ವಾಪಿ ವಸುಂಧರೇ ।**
**ದೂರಾದೇವಾಸ್ಪೃಶನ್ ಪೂಜಾಂ ಕಾರಯೇತ್ ಸುಸಮಾಹಿತಃ ॥**

**ವಾರಾಹ ಪುರಾಣ ಅಧ್ಯಾಯ 181-48, 51**

ವರಾಹರೂಪಿ ಭಗವಂತನು ಭೂದೇವಿಗೆ ಹೇಳಿರುವನು—ಹೇ ವಸುಂಧರೇ! ಹೀನವರ್ಣದವರು ಹಾಗೂ ಸ್ತ್ರೀಯರು ಶಾಲಗ್ರಾಮವನ್ನು ಮುಟ್ಟಬಾರದು. ಸ್ತ್ರೀಯರ ಮತ್ತು ಶೂದ್ರರ ಕರದ ಸ್ಪರ್ಶ ವಜ್ರಾಯುಧದ ಸ್ಪರ್ಶಕ್ಕಿಂತಲೂ ಅಧಿಕವೆನಿಸಿದ್ದು ಹೇಯವೆನಿಸಿದೆ. ಒಂದು ವೇಳೆ, ಹೀನವರ್ಣದವರಿಗಾಗಲೀ, ಸ್ತ್ರೀಯರಿಗಾಗಲೀ, ವಿಶೇಷವಾದ ಭಕ್ತಿ ಇದೆ ಎಂದಾದಲ್ಲಿ, ದೂರದಿಂದಲೇ ಸ್ಪರ್ಶಿಸದೆಯೇ ಮತ್ತೊಬ್ಬ ಅಧಿಕಾರಿಗಳಿಂದ ಆರಾಧನೆಯನ್ನು ನಡೆಸಬೇಕಷ್ಟೇ.

## ಸ್ತ್ರೀಯಲ್ಲಿರಬೇಕಾದ ಹನ್ನೆರಡು ಗುಣಗಳು

**ರೂಪಮೇವ ಪರಂ ಸ್ತ್ರೀಣಾಂ ಭೂಷಣಂ ಚ ಮಹಾಮುನೇ ।**

ಶೀಲಮೇವ ದ್ವಿತೀಯಂ ಚ ತೃತೀಯಂ ಸತ್ಯಮೇವ ಚ ।
ಸದಾರ್ಯತ್ವಂ ಚತುರ್ಥಂ ತು ಪಂಚಮಂ ಪುಣ್ಯಮುತ್ತಮಮ್ ।
ಮಧುರತ್ವಂ ತಥಾ ಷಷ್ಠಂ ಶುದ್ಧತ್ವಂ ಸಪ್ತಮಂ ಮಹತ್ ।
ಬಾಹ್ಯಾಂತಃ ಸತತಂ ಸ್ತ್ರೀಣಾಂ ಸರ್ವಾಭರಣಸತ್ತಮಮ್ ।
ಅಷ್ಟಮಂ ತು ಪತೌ ಭಾವಃ ಶುಶ್ರೂಷಾ ನವಮಂ ಕಿಲ ।
ಸಹಿಷ್ಣುತಾ ಚ ದಶಮಂ ರತಿರೇಕಾದಶಂ ತಥಾ ।
ಪತಿವ್ರತತ್ವಂ ವಿಪ್ರೇಂದ್ರ ದ್ವಾದಶಂ ಯೋಷಿತಾಂ ಸ್ಮೃತಮ್ ॥

—ವಾರಾಹಪುರಾಣ ಅಧ್ಯಾಯ 80–29, 30, 32

ಪತಿವ್ರತಾ ಸ್ತ್ರೀಯರಿಗೆ ಸೌಂದರ್ಯ, ಶೀಲ, ಸತ್ಯಭಾಷಣ, ಸಭ್ಯತೆ, ಪುಣ್ಯ, ಮಧುರ ಭಾಷಣ, ಅಂತರ್ಬಹಿಶುದ್ಧಿ, ಪತಿಭಕ್ತಿ, ಪತಿಶುಶ್ರೂಷೆ, ಸಹನೆ, ಪತಿಗೆ ರತಿಸುಖವನ್ನು ನೀಡುವಿಕೆ ಹಾಗೂ ಪಾತಿವ್ರತ್ಯ — ಈ ಹನ್ನೆರಡು ಗುಣಗಳೇ ಮುಖ್ಯವಾದ ಆಭರಣಗಳೆನಿಸಿವೆ.

## ಪಾಕಪಾತ್ರೆಯಲ್ಲಿ ತಿನ್ನಬಾರದು

'ಪಾಕಭಾಂಡೇ ಸದಾ ಭುಕ್ತ್ವಂ ನಿತ್ಯಂ ಚೈವಾನಯಾ ಯತಃ ।
ತಸ್ಮಾದ್ದೋಷಾದ್ ಬಿಡಾಲೀ ತು ಸ್ವಜಾತಾಪತ್ಯಭಕ್ಷಿಣೀ ॥

—ವಾರಾಹಪುರಾಣ, 106—22

ಯಾರು ಅಡುಗೆ ಮಾಡುವ ಪಾತ್ರದಲ್ಲಿಯೇ ಭೋಜನವನ್ನು ಸ್ವೀಕರಿಸುವಳೋ, ಆ ಅಪರಾಧದಿಂದಾಗಿ ಅಂತಹವಳು ತನ್ನ ಮಕ್ಕಳನ್ನೇ ತಿನ್ನುವ ಬೆಕ್ಕಿನ ಯೋನಿಯಲ್ಲಿ ಜನಿಸುವಳು.

ಕ್ಷೇಮಂ ನ ವಿಂದಂತಿ ವಿನಾ ಯದರ್ಪಣಂ
ತಸ್ಮೈ ಸುಭದ್ರಶ್ರವಸೇ ನಮೋ ನಮಃ ॥



## ಸಂಕೇತಾಕ್ಷರಗಳ ವಿವರ

ಗ. ಪು.—ಗರುಡ ಪುರಾಣ

ಗೀ.—ಭಗವದ್ಗೀತಾ

ಗೀ. ತಾ.—ಗೀತಾ ತಾತ್ಪರ್ಯ

ಛಾಂ. ಉ.—ಛಾಂದೋಗ್ಯೋಪನಿಷತ್

ತಂ. ಸಾ. ಸಂ.—ತಂತ್ರಸಾರ ಸಂಗ್ರಹ

ಭಾಗ.—ಭಾಗವತ

ಭಾಗ. ತಾ. ನಿ.—ಭಾಗವತ ತಾತ್ಪರ್ಯ ನಿರ್ಣಯ

ಬೃ. ಉ. ಭಾ.—ಬೃಹದಾರಣ್ಯಕೋಪನಿಷದ್ಭಾಷ್ಯ

ಬ್ರ. ಸೂ. ಭಾ.—ಬ್ರಹ್ಮಸೂತ್ರ ಭಾಷ್ಯ

ಮ. ಭಾ. ತಾ. ನಿ.—ಮಹಾಭಾರತ ತಾತ್ಪರ್ಯ ನಿರ್ಣಯ

ಮ. ಭಾ. ಶಾಂತಿ.—ಮಹಾಭಾರತ ಶಾಂತಿಪರ್ವ

ಮ. ಭಾ. ವನ.—ಮಹಾಭಾರತ ವನಪರ್ವ

ಮನು.—ಮನುಸ್ಮೃತಿ

ಮ. ಸ್ಮೃ.—ಮನುಸ್ಮೃತಿ

ವಾ. ರಾ.—ವಾಲ್ಮೀಕಿ ರಾಮಾಯಣ

ವಿ. ಧ.—ವಿಷ್ಣುಧರ್ಮೋತ್ತರ

ವೇ. ಸ್ಮೃ.—ವೇದವ್ಯಾಸ ಸ್ಮೃತಿ

ವೃ. ಹಾ.—ವೃದ್ಧಹಾರೀತ ಸ್ಮೃತಿ

ಷ. ಪ್ರ.—ಷಟ್‌ಪ್ರಶ್ನೋಪನಿಷತ್

